# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ಆಚಾರ್ಯ, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು, ಅರಸು
ಮುಖಪುಟ : ಬಾವುಲರ ಸಂಘದಲ್ಲಿ
ವರ್ಣಚಿತ್ರ : ರಹಮತ್ ತರೀಕೆರೆ, ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ವಿರೋಧಿ ನಾಮ ಸಂವತ್ಸರವು ಮುಗಿದು ವಿಕೃತಿ ಆರಂಭವಾಗಿದೆ. ಕರ್ನಾಟಕ ಸರ್ಕಾರದ ನಡವಳಿಕೆಯನ್ನು ಸಂಕೇತಿಸಲು ವಿರೋಧಿ-ವಿಕೃತಿಗಳು ಬಂದುವೇನೋ ಎನ್ನುವಷ್ಟು ಕೆಟ್ಟದಾಗಿ ನಡೆದುಕೊಳ್ಳುತ್ತಿರುವ ಸರ್ಕಾರವು ಬರುವ ದಿನಗಳಲ್ಲಿ ವಿಕೃತ ಆಡಳಿತ ವೈಖರಿಯಿಂದ ಹೊರಬಂದು ಸುಕೃತಿ ಎನ್ನಬಹುದಾದ ಪರ್ಯಾಯ ಹಾದಿಯನ್ನು ಹಿಡಿಯುತ್ತದೆಂದು ಆಶಿಸಬೇಕಾಗಿದೆ. ''ಯಾವ ವಿರೋಧಕ್ಕೂ ನಾವು ಜಗ್ಗುವುದಿಲ್ಲ'' ಎಂಬ ಮಾತು ಈಚಿನ ದಿನಗಳಲ್ಲಿ ಹೆಚ್ಚುಹೆಚ್ಚಾಗಿ ಕೇಳಿಬರುತ್ತಿದೆ. ಮನಮೋಹನ ಸಿಂಗ್, ಚಿದಂಬರಂ, ಮಾಯಾವತಿ, ರಾಮಚಂದ್ರೇಗೌಡ, ಯಡಿಯೂರಪ್ಪ, ಎಲ್ಲರೂ ಇದೇ ಮಾತನ್ನು ಹೇಳುತ್ತಿದ್ದಾರೆ. ''ನಮ್ಮನ್ನು ಜನ ಆಯ್ಕೆ ಮಾಡಿದ್ದಾರೆ, ಆದ್ದರಿಂದ ನಮಗಿಷ್ಟ ಬಂದಂತೆ ನಾವು ಮಾಡುತ್ತೇವೆ'' ಎಂಬುದು ಪ್ರಜಾಪ್ರಭುತ್ವದ ಧೋರಣೆಯಲ್ಲ, ಅದು ದುರಹಂಕಾರದ ಪರಮಾವಧಿ. ವಿರೋಧಿ ಸಂವತ್ಸರದಲ್ಲಿ ಯಡಿಯೂರಪ್ಪನವರು ಲೆಕ್ಕವಿಲ್ಲದಷ್ಟು ಕೆಳಮಟ್ಟದ ಕೆಲಸ ಮಾಡಿ, ತೀರ್ಮಾನಗಳನ್ನು ಕೈಗೊಂಡು, ವಿರೋಧವನ್ನು ಕಟ್ಟಿಕೊಂಡರು. ಕನ್ನಡ ವಿಶ್ವವಿದ್ಯಾಲಯದ ಎಂಭತ್ತು ಎಕರೆ ಭೂಮಿಯನ್ನು ಖಾಸಗೀಕರಿಸಲು ಕಾನೂನುಬಾಹಿರವಾದ ವಿಶ್ವಸ್ತ ಮಂಡಲಿಯನ್ನು ರಚಿಸಿದ್ದು ಇಡೀ ನಾಡಿನ ವಿರೋಧಕ್ಕೆ ಗುರಿಯಾಯಿತು. ಈ ಟ್ರಸ್ಟ್ ಎಷ್ಟು ಅನ್-ಟ್ರಸ್ಟ್‌ವರ್ದಿ ಎಂಬುದನ್ನು ಈ ಸಂಚಿಕೆಯ ಬೇರೊಂದು ಲೇಖನದಲ್ಲಿ ಮಾನ್ಯ ಶ್ರೀ. ಕೋ. ಚೆನ್ನಬಸಪ್ಪ ಅವರು ವಿಶದಪಡಿಸಿದ್ದಾರೆ. ನೆರೆಸಂತ್ರಸ್ತರನ್ನು ನಡೆಸಿಕೊಂಡಿರುವ ರೀತಿಯು ಸರ್ಕಾರದ ಇನ್ನೊಂದು ವಿಕೃತರೂಪವನ್ನು ತೆರೆದಿಟ್ಟಿದೆ. ಅಂಗವಿಕಲ ವಿದ್ಯಾರ್ಥಿಗಳಿಗೆ ವಿಶೇಷ ತರಬೇತಿ ನೀಡಲು ಸರ್ಕಾರೇತರ ಸಂಸ್ಥೆಗಳು ನೇಮಕಗೊಳಿಸಿಕೊಂಡಿದ್ದು ಸರ್ಕಾರದ ಹಣಕಾಸಿನ ನೆರವಿನಿಂದ ಈವರೆಗೆ ಕೆಲಸ ಮಾಡುತ್ತಿದ್ದ ನಾಲ್ಕುನೂರು ಅಧ್ಯಾಪಕರನ್ನು ಹಠಾತ್ತನೆ ಕೆಲಸದಿಂದ ತೆಗೆದುಹಾಕಲಾಗಿದೆ. ಅವರ ಮರುನೇಮಕಾತಿಗೆ ಸುಮಾರು ೧೭ ಕೋಟಿ ರೂಪಾಯಿಗಳು ಬೇಕಾಗುತ್ತದಂತೆ. ಅದನ್ನು ಮಾಡಲು ನೆರೆಸಂತ್ರಸ್ತರ ಸಬೂಬನ್ನು ಹೇಳುವ ಸರ್ಕಾರ ಅರ್ಥವಿಲ್ಲದ ವೈಭವ ಪ್ರದರ್ಶನಕ್ಕೆ ಕೋಟಿಗಟ್ಟಲೆ ಹಣವನ್ನು ಚೆಲ್ಲಿದ್ದು ವಿಕೃತಿ ಸಂವತ್ಸರದ ಮೊದಲೇ ಜರುಗಿದ್ದ ವಿಕೃತ ತೀರ್ಮಾನ. ಅದರ ಬೆನ್ನಲ್ಲೇ ಬಂದಿದ್ದು ಪುನಶ್ಚೇತನ ಟ್ರಸ್ಟಿನ ಹಗರಣ. ಯಡಿಯೂರಪ್ಪನವರು ಮಠಗಳಿಗೆ ಬೊಕ್ಕಸದ ಹಣವನ್ನು ಹರಿಸುತ್ತಿರುವಾಗಲೇ ಈ ನಿಶ್ಚೇತನವಾದ ''ಸಾಂಸ್ಕೃತಿಕ'' ಯೋಜನೆ ಅವರ ಮನಸ್ಸಿಗೆ ಬಂದದ್ದು ಹೇಗೆ ಮತ್ತು ಏಕೆ ? ಅಳಿದುಹೋದ ಕೃಷ್ಣದೇವರಾಯನನ್ನು ಮೆರೆಸುವ ಉದ್ದೇಶ ಏಕೆ ಅವರ ಮತ್ತು ಭಾರತೀಯ ಜನತಾ ಪಕ್ಷದ ಒಂದು ಪ್ರಮುಖ ಕಾರ್ಯಸೂಚಿಯಾಯಿತು ? ಇದಕ್ಕೆ ಹಲವು ಉತ್ತರಗಳನ್ನು ಸೂಚಿಸಲಾಗಿದೆ. ನಾಲ್ಕು ಕಾರಣಗಳನ್ನು ವಿಚಾರ ಮಾಡಬೇಕೆನಿಸುತ್ತದೆ : (ಅ) ಎಂದೂ ತೀರದ ಭೂಮಿಯ ದಾಹ. ಅಕ್ರಮ ಗಣಿಗಾರಿಕೆಯಿಂದ ಬಳ್ಳಾರಿಯ ಸಮಕಾಲೀನ ಮಹಾರಾಜರಾಗಿ ತಮ್ಮದೇ ಪದಾತಿ ಪಡೆಯನ್ನು ಬೆಳೆಸುತ್ತಿರುವವರಿಗೆ ತುಂಗಭದ್ರೆಯ ಮಡಿಲಲ್ಲಿ ಪ್ರಶಸ್ತವಾದ ಭೂಮಿ ಬೇಕು. ಯಾವುದೇ ಮಹಾರಾಜನಿಗೂ ತಾನು ಸಂಸ್ಕೃತಿಯ ಆರಾಧಕನಾಗದಿದ್ದರೆ ಉಳಿಗಾಲವಿಲ್ಲವೆಂಬ ಅಂಜಿಕೆ ಇರುತ್ತದೆ. ಕೇವಲ ಕಬ್ಬಿಣದ ಕಲ್ಲಿನಿಂದ ದೊರೆಯದ ಕೀರ್ತಿ ಮತ್ತು ಭದ್ರತೆ ಸಂಸ್ಕೃತಿಯ ಕಿರೀಟ ಧರಿಸುವುದರಿಂದ ದೊರೆಯುತ್ತದೆಂಬ ಹುಸಿಭಾವನೆಯು ಈ ನಿಕೃಷ್ಟ ಯೋಜನೆಗೆ ಪ್ರೇರಣೆ ನೀಡಿದ್ದಿರಬೇಕು. ಮೂಲತಃ ಅಸಂಸ್ಕೃತವಾಗಿ ಕಲ್ಪನೆಗೊಂಡ ಟ್ರಸ್ಟ್ ಎಂತಹ ಸಂಸ್ಕೃತಿಗೆ ಪ್ರಚೋದನೆ ನೀಡಬಹುದಾಗಿತ್ತೆಂಬುದು ಊಹಾತೀತವೇನಲ್ಲ. (ಆ) ಭಾರತೀಯ ಜನತಾ ಪಕ್ಷವು ಅಧಿಕಾರಕ್ಕೆ ಬಂದಾಗಿನಿಂದ ಆಂತರಿಕ ಬಿಕ್ಕಟ್ಟು, ಜಿದ್ದು ಮತ್ತು ಕಲಹ ಬಹಿರಂಗವಾಗಿ ಪ್ರದರ್ಶನಕ್ಕೆ ಬಂದಿದೆ. ಗಣಿ ಅಕ್ರಮ ಧಂಧೆಯ ಹಣದ ಬಲವು ಶಾಸನಸಭೆಯಲ್ಲಿ ಭಾಜಪಕ್ಕೆ ಬಹುಮತ ಬಲವನ್ನು ಕರುಣಿಸಿದ್ದು ಜಗತ್ಪಸಿದ್ಧವಾಗಿದೆ. ಹಾಗೆ ಹಣ ಹೂಡಿದವರು ದೊಡ್ಡ ಪ್ರಮಾಣದಲ್ಲಿ ಪ್ರತಿಫಲ ಪಡೆಯುತ್ತಿದ್ದಾರೆ. ರಾಜ್ಯದ ಕೋಶಕ್ಕೆ ಬರಗಾಲ ಸಾಧ್ಯ. ಆದರೆ ಗಣಿಧಣಿಗಳ ಕೋಶ ಮಾತ್ರ ಸದಾ ತುಂಬಿತುಳುಕುತ್ತಿರಬೇಕು. ಇದು ಭಾಜಪಕ್ಕೆ ನೀಡಿದ ಬೆಂಬಲಕ್ಕೆ ಪ್ರತಿಫಲ. ಇದರಿಂದಾಗಿ ಭಾಜಪದಲ್ಲಿ ''ನಮ್ಮ ಕಡೆಯವರು'' ಮತ್ತು ''ಅವರ ಕಡೆಯವರು'' ಎಂಬ ವಿಂಗಡಣೆ ಯಾವತ್ತೂ ಜೀವಂತ. ಇಲ್ಲಿ 'ನಮ್ಮ' ಎಂದರೆ ಯಡಿಯೂರಪ್ಪನವರ ಎಂದೂ, 'ಅವರ' ಎಂದರೆ ಅನಂತಕುಮಾರ್ ಅವರ ಎಂದೂ ಅರ್ಥೈಸಿಕೊಳ್ಳಬೇಕು. ದೆಹಲಿಯಲ್ಲಿ ಸಂಪಾದಿಸಿ ಪಳಗಿದ ಸಂಸದರು ರಾಜ್ಯದಲ್ಲಿ ಶೋಭಿಸಲು ಮತ್ತು ರಾಜ್ಯದ ಬೊಕ್ಕಸವನ್ನು ಶೋಧಿಸಲು ತವಕದಿಂದಿರುವುದು ಕದ್ದು-ಮುಚ್ಚಿ ಭಾಜಪದಲ್ಲಿ ಮಾತನಾಡಿಕೊಳ್ಳುವ ವಿಷಯ. ಈಚಿನ ವಿಶ್ವಸ್ತ ಮಂಡಲಿಯಲ್ಲಿ ಶ್ರೀಮತಿ ತೇಜಸ್ವಿನಿ ಎಂಬ ಪ್ರತಿಭಾಸಂಪನ್ನೆ ಸದಸ್ಯತ್ವ ಹೊಂದಿದ್ದರೆಂಬುದನ್ನು ಮರೆಯಲಾಗದು. ಆ ಮಂಡಲಿ ಯಡಿಯೂರಪ್ಪನವರ ಕಾಲಿನ ಕೆಳಗಿನ ಚಾಪೆ ಎಳೆಯಲು ರೆಡ್ಡಿ ಸಹೋದರರಲ್ಲಿ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೯ ಏಪ್ರಿಲ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೩೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com




# ಕೇಂದ್ರದ ೨೦೧೦ರ ಬಜೆಟ್ : ಬಾಗಿದ ಬೆನ್ನಮೇಲೆ ಮತ್ತಷ್ಟು ಹೊರೆ

ಕೇಂದ್ರದ ಮತ್ತು ರಾಜ್ಯದ ೨೦೧೦-೧೧ರ ಬಜೆಟ್ ಮಂಡಿಸುವಾಗಿನ ಪೂರ್ವಭಾವಿ ಆರ್ಥಿಕ ಪರಿಸ್ಥಿತಿಯ ವಿಶ್ಲೇಷಣೆಯನ್ನು ಸರ್ಕಾರ ತನ್ನದೆ ರೀತಿಯಲ್ಲಿ ನೀಡಿದ್ದರೂ ಅವರು ಪದೇ ಪದೇ ಉಚ್ಚರಿಸುವ ಆಮ್ ಆದಮಿಗೆ ಸ್ವಂತ ಅನುಭವದ ಕೆಲವು ವಿಷಯಗಳಿವೆ. ಕಳೆದ ವರ್ಷದ ಆರಂಭದಲ್ಲಿ ಇದ್ದ ಬೆಲೆ ಏರಿಕೆ – ಅವನಿಗೆ ಸಂಬಂಧಪಟ್ಟ ಹೊಟ್ಟೆಪಾಡಿನ ಸರಕುಗಳ ಬೆಲೆ ಏರಿಕೆ – ಸುಮಾರು ಶೇ. ೮ರಷ್ಟಿದ್ದದ್ದು, ಅವರ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ೨೦೦೭-೧೦ರ ಬಜೆಟ್ ಚೆನ್ನಾಗಿ ಕೆಲಸಮಾಡಿ, ಈ ಒಂದು ವರ್ಷದಲ್ಲಿ ಅದನ್ನು ಶೇ. ೨೦ಕ್ಕೆ ಏರಿಸಿದೆ. ಅಸಂಘಟಿತ ಕಾರ್ಮಿಕರೇ ತುಂಬಿರುವ ದುಡಿಮೆಯ ಕ್ಷೇತ್ರದಲ್ಲಿ ಸರ್ಕಾರಿ ವೇತನ ಸಮಿತಿ, ತುಟ್ಟಿಭತ್ಯ ಎಲ್ಲ ಸಿಗುವ ಸಂಘಟಿತರಿಗೇ ಸಂಪೂರ್ಣ ಪರಿಹಾರವಲ್ಲ, ಇನ್ನು 'ಆಮ್ ಆದಮಿ'ಯ ಪಾಡೇನು ? ಹಿಂದಿಯ ಈ ಪದದ ನೈಜ ಅರ್ಥ ಸಾಧಾರಣ ಮನುಷ್ಯರು ಅಂತ. ಆದರೆ 'ಹೊಸತು'ವಿಗೆ ನಮ್ಮ ಅಸಾಮಾನ್ಯ ಜನತೆಗೆ ಬಳಸುವಾಗ ''ಸಾಮಾನ್ಯ ಜನ''ವೇ ಹೆಚ್ಚು ಅರ್ಥಪೂರ್ಣ. ಇದೇ ವರ್ಷ ಕೃಷಿಕ್ಷೇತ್ರ ಸೊರಗಿ ಅದರ ಬೆಳವಣಿಗೆಯ ದರದಲ್ಲಿ ಶೇ. ೦.೨ ಕಡಿಮೆಯಾಗಿದೆ. ಕಳೆದ ಹಲವು ವರ್ಷಗಳಲ್ಲಿ ಈ ಕ್ಷೇತ್ರ ನಿರಂತರ ಕುಸಿಯುತ್ತಲೆ ಇದೆ. ದೇಶದ ಒಟ್ಟು ಜಿಡಿಪಿಯಲ್ಲಿ ಇದರ ಭಾಗ ಶೇ. ೧೮.೯ ರಿಂದ ೧೪.೬ಕ್ಕೆ ಕುಸಿದಿದೆ. ಗ್ರಾಮೀಣ ಉದ್ಯೋಗ ಮಾತ್ರ ಇಡೀ ಉದ್ಯೋಗ ಕ್ಷೇತ್ರದ ಶೇ. ೫೧ರಷ್ಟು. ಏನೆಲ್ಲಾ ಸರ್ಕಾರಿ ಕುಮ್ಮಕ್ಕು ನೀಡಿದರೂ, ಕೈಗಾರಿಕಾಕ್ಷೇತ್ರದ ಬೆಳವಣಿಗೆ ಸ್ಥಗಿತವಾಗಿದೆ. ಕೇವಲ ಬೌದ್ಧಿಕ ವ್ಯಾಪಾರದ ಸೇವಾಕ್ಷೇತ್ರವೆನ್ನುವ ಐಟಿಬಿಟಿಯದೆ ದೇಶದ ಆರ್ಥಿಕತೆಯಲ್ಲಿ ಮೇಲುಗೈ. ಬಜೆಟ್‌ನಲ್ಲಿ ಯಾರೂ ಸಾಮಾನ್ಯವಾಗಿ ಗಮನಿಸದ ''ಬಿಟ್ಟುಕೊಟ್ಟ ಆದಾಯ'' ಎಂಬ ಕಲಂ ಇದೆ. ಅದರ ಪ್ರಕಾರ **ಕಳೆದ ವರ್ಷವೂ ಸೇರಿದಂತೆ ೨೦೦೭ರಿಂದ, ಶ್ರೀಮಂತ ವರ್ಗಕ್ಕೆ ಆದಾಯ ತೆರಿಗೆಯಲ್ಲಿ ದೊರೆತ ವಿನಾಯ್ತಿ ಮೊತ್ತ ೪,೨೦,೬೦೦ ಕೋಟಿ ರೂ.ಗಳು.** ಅದೇ ಕಾಲದಲ್ಲಿ ಅಂದರೆ ೨೦೦೭ರಿಂದ ಈ ವರ್ಗಕ್ಕೆ ಎಕ್ಸೈಸ್, ಕಸ್ಟಮ್ಸ್ ತೆರಿಗೆಗಳಲ್ಲಿ ದೊರೆತ ವಿನಾಯ್ತಿ ೧೬,೧೦,೦೦೦ ಕೋಟಿ ರೂ.ಗಳು. ಇದರಲ್ಲಿ ಯಾವ ರೋಗವೂ ಇಲ್ಲದೆ ದಿನೇ ದಿನೇ ಕೊಬ್ಬುತ್ತಿರುವ ಐಟಿಬಿಟಿಗಳಿಗೂ ವಿನಾಯ್ತಿ ದಕ್ಕಿರುವುದು ಸೇರಿದೆ. ಅದೇ ರೈತರಿಗೆ ಸಾಲ ಮನ್ನಾ ಮಾಡಲು, ಉದ್ಯೋಗ ಖಾತರಿ ಯೋಜನೆಗೆ, ರಸಗೊಬ್ಬರಕ್ಕೆ ಸಹಾಯಧನ ನೀಡಲು, ರೈತನಿಗೆ ಬೆಂಬಲ ಬೆಲೆ ನೀಡಲು, ಪಡಿತರ ವಿಸ್ತರಿಸಲು ಹಣವಿಲ್ಲವಂತೆ. ಅವರೆಲ್ಲಾ ''ತಮಗೆ ತಾವೇ ಸಹಾಯ ಮಾಡಿಕೊಳ್ಳಲರಿ''ಯದ ಅಪ್ಪಾವಿಗಳಂತೆ! ಜಾಗತಿಕ ಆರ್ಥಿಕ ಕುಸಿತದ ನೆಪದಲ್ಲಿ, ಅದರ ಪರಿಣಾಮಗಳಿಗೆ ನೇರವಾಗಿ ಒಳಗಾಗದವರಿಗೂ ಸೇರಿಸಿ ಸಾರ್ವಜನಿಕ ಬೊಕ್ಕಸದಿಂದ ಧಾರೆಯೆರೆದುದರ ಪರಿಣಾಮವಾಗಿ, ಸರ್ಕಾರ ತನ್ನ ವಿತ್ತೀಯ ಕೊರತೆಯನ್ನು ನೀಗಿಸಿಕೊಳ್ಳಲು ಅಪಾರ ಪ್ರಮಾಣದಲ್ಲಿ ಹಣಪ್ರಮಾಣವನ್ನು ವಿಸ್ತರಿಸಿ, ಹಣದುಬ್ಬರ ಸೃಷ್ಟಿ ಮಾಡಿದೆ. ಇದರ ಹೊಡೆತ ಸಂಘಟಿತರಿಗೂ ಇಲ್ಲ, ಮೇಲ್ವರ್ಗದವರಿಗೂ ಇಲ್ಲ. ಔತಣ ಯಾರಿಗೋ, ಹೊಟ್ಟೆನೋವು ಸಾಮಾನ್ಯ ಜನರಿಗೆ. ಅಷ್ಟೆಲ್ಲಾ ಉಪಚಾರ ಮಾಡಿಸಿಕೊಂಡು, ಮಾರುಕಟ್ಟೆ ನೀಡಿರುವ ಬೆಳವಣಿಗೆಯ ದರ ೨೦೦೧ರಿಂದ ಇಲ್ಲಿಯವರೆಗೆ ೪.೪, ೫.೮, ೩.೮... ೬.೭ ಹೀಗೆ. ಯಾವುದೋ ಒಂದು ವರ್ಷ ಸುಮಾರು ೯ ತಲಪಿದ ಈ ಕ್ಷೇತ್ರ ಅಹೋರಾತ್ರಿ ತನ್ನ ಕೊಡುಗೆಯ ಬಗ್ಗೆ, ಉದ್ಯೋಗ ಸೃಷ್ಟಿ ಇಲ್ಲದ ಬೆಳವಣಿಗೆಯ ಬಗ್ಗೆ ಜಂಭ ಕೊಚ್ಚಿಕೊಂಡಿದೆ. ೨೦೦೧ಕ್ಕೆ ಹಿಂದೆ ಬೆಳವಣಿಗೆಯೇ ಇರಲಿಲ್ಲವೆಂಬಂತೆ ಸುಳ್ಳು ಪ್ರಚಾರ ಮಾಡುತ್ತಿದೆ. ಆದರೆ ಈ ಬೆಳವಣಿಗೆಗೆ ಗ್ರಾಮೀಣ ಪ್ರದೇಶದ ಉದ್ಯೋಗಾಕಾಂಕ್ಷಿಗಳನ್ನು ನಗರಪ್ರದೇಶಕ್ಕೆ ವರ್ಗಾಯಿಸಲು ಆಗಲೇ ಇಲ್ಲ. ಹೀಗಾಗಿ ಗ್ರಾಮೀಣ ಬಡತನದ ನಿವಾರಣೆ ಈಗ ಸರ್ಕಾರದ ಒಂದು ಖಚಿತ ಉದ್ದೇಶವೇ ಆಗಿಲ್ಲ. ಅದು ಹೇಗೋ ತಂತಾನೆ ಆಗುತ್ತಾಹೋಗುತ್ತದೆ ಎಂದು ನಂಬುತ್ತದೆ. ಕೃಷಿಕ್ಷೇತ್ರವಾಗಲೀ, ಮೂಲಭೂತ ಸೌಕರ್ಯ ವಿಸ್ತರಣೆಗಾಗಲಿ, ಸಾರ್ವಜನಿಕ ಬಂಡವಾಳದ ಅಗತ್ಯವಿಲ್ಲ ಎಂದು ನಂಬುತ್ತದೆ ಈ ಸರ್ಕಾರ. ಆದರೆ ಈ ಎರಡೂ ಕ್ಷೇತ್ರಗಳಿಗೆ ಖಾಸಗಿ ಬಂಡವಾಳ ಬರುತ್ತಿಲ್ಲವೇ ಎಂದು ವಿಷಾದಿಸುತ್ತದೆ. ಅದಕ್ಕೆ ಕಳಕಳಿಯಿಂದ ಕಡಿಮೆ ದರದಲ್ಲಿ ಸಾಲ ನೀಡಲೂ ಮುಂದಾಗುತ್ತದೆ! ಮಾರುಕಟ್ಟೆ ಎಲ್ಲವನ್ನು ಸರಿಪಡಿಸುತ್ತದೆ, ಅದು ಯಾವ ನಿಯಂತ್ರಣವೂ ಇಲ್ಲದೆ ಮುಕ್ತವಾಗಿರಬೇಕು, ಸರ್ಕಾರ ಅದಕ್ಕೆ ನೆರವು ನೀಡಬೇಕು, ಅನುವು ಮಾಡಿಕೊಡಬೇಕು, ಅಷ್ಟೆ ಸರ್ಕಾರದ ಕೆಲಸ ಎನ್ನುವ ನೀತಿಯನ್ನು ಈ ಸಲವೂ ವಿಸ್ತರಿಸಲಾಗಿದೆ. ಬೆಲೆ ಏರಿಕೆ, ಹಣದುಬ್ಬರ, ವಿತ್ತೀಯ ಕೊರತೆ, ನಿರುದ್ಯೋಗದ ಹಿನ್ನೆಲೆಯಲ್ಲಿ ಇವರು ಮಂಡಿಸಿದ ಬಜೆಟ್ ಆದರೂ ಎಂಥದು ?

ಮತ್ತೊಮ್ಮೆ ಆದಾಯ ತೆರಿಗೆಯಲ್ಲಿ ಕಡಿತ. ಪೆಟ್ರೋಲ್ ಮತ್ತು ಪೆಟ್ರೋಲ್ ಉತ್ಪನ್ನಗಳಿಗೆ ಹಲವು ಹಂತದಲ್ಲಿ ಹಲವು ರೀತಿಯ ಕರ ತೆರಿಗೆ ಸುಂಕಗಳ ಏರಿಕೆ, ಅಬ್ಕಾರಿ, ಎಕ್ಸೈಜ್ ಏರಿಕೆ. ಇದರ ಪರಿಣಾಮ ಮತ್ತಷ್ಟು ಬೆಲೆ ಏರಿಕೆ ಎಂದು ಸರ್ಕಾರವೇ ಒಪ್ಪಿಕೊಳ್ಳುತ್ತದೆ. ಆದರೆ ಇದು ಅನಿವಾರ್ಯ ಎನ್ನುತ್ತದೆ. ಸುಮಾರು ೪೬,೦೦೦ ಕೋಟಿ ರೂ. ಹೊಸ ತೆರಿಗೆ ಸಂಗ್ರಹಿಸಿ, ೨೬,೦೦೦ ಕೋಟಿ ರೂ. ವಿನಾಯಿತಿ ನೀಡಿ, ತನ್ನ ಆದಾಯ ಹೆಚ್ಚಿಸಿಕೊಂಡಿದೆ. ಕಳೆದ ಬಜೆಟ್ಟಿನಲ್ಲಿ ಸಾರ್ವಜನಿಕ ಉದ್ಯಮಗಳನ್ನು ಮಾರುವ ಸುದ್ದಿ ಸ್ಪಷ್ಟವಾಗಿಲ್ಲದೆಯೂ, ಈ ಬಾಬ್ತು ಸುಮಾರು ೩೦,೦೦೦ ಕೋಟಿ ರೂ. ಸಂಗ್ರಹಿಸಿಕೊಂಡ ಸರ್ಕಾರ, ಈ ಸಾರಿ ೪೦,೦೦೦ ಕೋಟಿ ರೂ. ಸಂಗ್ರಹಿಸುವ ಆಶಯ ಹೊಂದಿದೆ. ಈಗಾಗಲೆ ಕಾರ್ಪೊರೇಟ್ ಲಾಭದ ಮೇಲಿನ ತೆರಿಗೆಯನ್ನು ತೆಗೆದುಹಾಕಿರುವ ಸರ್ಕಾರ, ಟೆಲಿಕಾಂ ಕ್ಷೇತ್ರ ೩ಜಿ ಸ್ಪೆಕ್ಟ್ರಮ್‌ಅನ್ನು ಹರಾಜುಹಾಕುವ ಮೂಲಕವೂ ಅಷ್ಟು ಹಣ ಸಂಗ್ರಹಿಸಬಹುದು. ಈ ಸಲವೂ ಐಟಿಬಿಟಿಗಳಿಗೆ ನೀಡಿರುವ ಹಲವು ರೀತಿಯ ತೆರಿಗೆ ವಿನಾಯಿತಿ ಬೆಂಬಲವನ್ನು ಹಿಂತೆಗೆದುಕೊಂಡಿಲ್ಲ. ''ಆಹಾರದ ಹಕ್ಕು'' ಕಾಯಿದೆಯನ್ನು ಮಾಡುವ ಸೂಚನೆ ನೀಡಿದ್ದರೂ, ಇದಕ್ಕೆ ತಗಲುವ ವೆಚ್ಚಕ್ಕೆ ಬಜೆಟ್‌ನಲ್ಲಿ ಎಲ್ಲೂ ಜಾಗ ಮಾಡಿಕೊಟ್ಟಿಲ್ಲ. ಅಂದರೆ ಈ ಕಾಯಿದೆಯೂ ಕೇವಲ 'ಬಡತನರೇಖೆ' ಎಂಬ ಬೊಕಳೆ ಸಂಖ್ಯೆಯನ್ನೇ, ಅಂದರೆ ಯಾರೂ ನಂಬದ ಸಂಖ್ಯೆ, ಬಡವರು ಕೇವಲ ಶೇ. ೨೦

ಎಂದು ಹೇಳಿಕೊಂಡು, ಪಡಿತರ ಕ್ಷೇತ್ರವನ್ನು ವಿಸ್ತರಿಸುವ, ಅದಕ್ಕಾಗಿ ಆಹಾರ ದಾಸ್ತಾನು ಮಾಡಿಕೊಳ್ಳುವ ಉದ್ದೇಶ ಬಜೆಟ್‌ನಲ್ಲಿ ಎಲ್ಲೂ ಸುಸುಳಿಲ್ಲ. ಹೊಸ ಉದ್ಯೋಗ ಸೃಷ್ಟಿಯ ಬಗ್ಗೆ ವಿಶ್ವಾಸ ಮೂಡುವುದಿಲ್ಲ. ಕೃಷಿಕ್ಷೇತ್ರಕ್ಕೆ ನೆರವು ಎನ್ನುವ ಹೆಸರಿನಲ್ಲಿ ಗೋದಾಮು ನಿರ್ಮಿಸಲು, ಶೈತ್ಯಾಗಾರಗಳನ್ನು ನಿರ್ಮಿಸಲು, ಒಟ್ಟಿನಲ್ಲಿ ಕೃಷಿಕ್ಷೇತ್ರದಲ್ಲಿ ಖಾಸಗಿ ವಾಣಿಜ್ಯೀಕರಣಕ್ಕೆ ದಾರಿ ಮಾಡಿಕೊಡುವ ಪ್ರಯತ್ನಗಳು ಬಜೆಟ್ಟಿನಲ್ಲಿ ಇವೆ. ಫುಡ್ ಕಾರ್ಪೊರೇಷನ್‌ಗಳು ಸಾರ್ವಜನಿಕ ಕ್ಷೇತ್ರದಲ್ಲಿ ಗೋದಾಮು ನಿರ್ಮಿಸಲು ಯಾವ ಕಾರ್ಯವನ್ನೂ ಕೈಗೆತ್ತಿಕೊಳ್ಳದೆ, ಅಪಾರ ಬೆಲೆ ತೆತ್ತು ಧನಿಕ ವರ್ತಕರಿಂದ ಕೊಂಡ ಆಹಾರಧಾನ್ಯ ಪೋಲಾಗುತ್ತಿದೆ, ರೇಷನ್ ಅಂಗಡಿ ತಲಪುತ್ತಿಲ್ಲ. ಇದು ಪಡಿತರ ಪದ್ಧತಿಯನ್ನು, ಸರ್ಕಾರ ದವಸ ಕೊಳ್ಳುವ ನೀತಿಯನ್ನು ಕ್ರಮೇಣ ಕೈಬಿಟ್ಟು, ಕೃಷಿ ಮಾರುಕಟ್ಟೆಯನ್ನು ಖಾಸಗಿಗೆ ಒಪ್ಪಿಸುವ ಹುನ್ನಾರವೆಂಬುದರಲ್ಲಿ ಸಂದೇಹವಿಲ್ಲ.

ಮಾರುಕಟ್ಟೆಯ ಬಂಡವಾಳದ ಅರ್ಥನೀತಿಯೆಂದರೆ ಸರ್ಕಾರದ ಪಾತ್ರ ಕುಗ್ಗುತ್ತಾಹೋಗುವುದು ಎಂದು ಅರ್ಥ. ಈ ಸಾರಿ ಬಜೆಟ್ಟಿನ ಸರ್ಕಾರಿ ವೆಚ್ಚ ಹಿಂದಿನಷ್ಟೆ ಇದ್ದು, ವಾಸ್ತವದರದ ಆಧಾರದ ಮೇಲೆ, ಅಂದರೆ ಶೇ. ೮ರಷ್ಟು ಹೆಚ್ಚಿದ್ದರೆ, ಹಣದುಬ್ಬರವೂ ಶೇ. ೮ ಇದ್ದು, ಬೆಲೆ ಹೆಚ್ಚಳ ದರವೂ ಅಷ್ಟೆ ಇದ್ದು, ಸರ್ಕಾರಿ ವೆಚ್ಚದ ಹೆಚ್ಚಳ ವಾಸ್ತವದಲ್ಲಿ ಹೆಚ್ಚಳವಲ್ಲ. ಮಾರುಕಟ್ಟೆಯಿಂದ ಹರಿದುಬರುವ ಸಹಾಯಕ್ಕೆ ಕಾಯುತ್ತಾ ಕುಳಿತ ಸಾಮಾನ್ಯ ಮನುಷ್ಯನಿಗೆ ಸಾಮಾಜಿಕ ಕ್ಷೇತ್ರ, ವಿದ್ಯಾಭ್ಯಾಸ, ಆರೋಗ್ಯ ಮುಂತಾಗಿ ನೇರವಾಗಿ ಲಾಭ ಕಾಣದ ಆದರೆ ಅತ್ಯಗತ್ಯವಾದ ವೆಚ್ಚವನ್ನು ಸರ್ಕಾರವೇ ನಿಭಾಯಿಸದೆ ಬೇರೆ ದಾರಿಯಿಲ್ಲ. ಕೇಂದ್ರದ ಬಜೆಟ್ಟಿನಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಶೇ. ೨೨ರಷ್ಟು ಹೆಚ್ಚಾಗಿದೆ. ಹಾಗೂ ಯೋಜನಾ ವೆಚ್ಚದಲ್ಲಿ ಶೇ. ೧೫ರಷ್ಟು ಹೆಚ್ಚಳವಿದೆ. ಆದರೆ ಜಿಡಿಪಿಯ ಶೇ. ೬ರಷ್ಟನ್ನು ಶಿಕ್ಷಣ ಕ್ಷೇತ್ರಕ್ಕೂ, ಶೇ. ೬ರಷ್ಟನ್ನು ಆರೋಗ್ಯ ಕ್ಷೇತ್ರಕ್ಕೂ ವೆಚ್ಚಮಾಡಬೇಕು ಎಂದು ವಿಶ್ವಸಂಸ್ಥೆ ಮುಂತಾಗಿ, ಎಲ್ಲರೂ ಹೇಳಿಕೊಂಡೆ ಬಂದಿದ್ದಾರೆ. ಆದರೆ ಈಗ ಇದು ಶೇ. 1ರಷ್ಟೂ ಇಲ್ಲ. ಇದೆ ವಿಷಯಗಳಿಗೆ ನೇರ ಜವಾಬ್ದಾರಿ ಹೊಂದಿರುವ ರಾಜ್ಯ ಸರ್ಕಾರಗಳ ಬಜೆಟ್ ಕೇಂದ್ರದ ಹಣಕಾಸು ಕಮಿಷನ್ನಿನ ಕೃಪೆಗೆ ಒಳಗಾಗಿದ್ದು, ದಿನೇ ದಿನೇ ರಾಜ್ಯ ಬಜೆಟ್‌ಗಳು ಇಂಥ ಯಾವುದೇ ಕೆಲಸವನ್ನು ಹಣದ ಕೊರತೆಯಿಂದಾಗಿ, ಕೈಗೆತ್ತಿಕೊಳ್ಳುತ್ತಿಲ್ಲ. ಕಾರಣ ರಾಜ್ಯದ ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚು ಕೇಂದ್ರ ಪ್ರವೇಶಿಸಿ ತನ್ನದಾಗಿಸಿಕೊಳ್ಳುತ್ತಿದೆ. ಹೀಗಾಗಿ, ಸಾಮಾಜಿಕ ಕ್ಷೇತ್ರಗಳಲ್ಲಿ ಅಗತ್ಯಗಳು ಅಪಾರವಾಗಿದ್ದೂ, ನೀಡಿರುವ ಹಣದ ಮೊತ್ತ ಆರು ಕಾಸಿನದು ಅಷ್ಟೆ.

ಒಟ್ಟಿನಲ್ಲಿ ಈ ಸಾರಿಯ ಬಜೆಟ್ಟು ತನ್ನ ಸೈದ್ಧಾಂತಿಕ ನಿಲುವಿನಂತೆ ನಡೆದುಕೊಂಡಿದೆ. ಅದು ಮಧ್ಯಮವರ್ಗ ಮತ್ತು ಮೇಲ್ವರ್ಗದವರು ತಿಂದು ಕುಡಿದರೆ, ಬೇಡಿಕೆ ಹೆಚ್ಚಾದರೆ, ಮಾರುಕಟ್ಟೆ ಹಿಗ್ಗುತ್ತದೆ, ಬೆಳವಣಿಗೆಯ ದರ ಹೆಚ್ಚುತ್ತದೆ ಎಂಬ ವಿಶ್ವಾಸ. ಅದೇ ನೀತಿ ಖಾಸಗಿ ಬಂಡವಾಳ ಹೂಡಿಕೆಯನ್ನು ನಿರ್ದೇಶಿಸುತ್ತದೆ. ಸಮಾಜ ಕಲ್ಯಾಣ, ಬಡತನ ಪರಿಹಾರ, ಸಮಾಧಾನ ಇವುಗಳು ಆದ್ಯತೆಯಾಗಿ ಕಾಣುವುದಿಲ್ಲ. ಕಳೆದ ಮೂರು ವರ್ಷದಿಂದ ಜಾಗತಿಕ ಕುಸಿತವೆಂಬ ಹುಯ್ಲಿನಲ್ಲಿ, ಬಂಡವಾಳಿಗ ಅರ್ಥನೀತಿಗೂ ವಿರೋಧವಾಗಿ, ತೆರಿಗೆಗಳನ್ನು ಕಡಿದು, ಹಣದ ಪೂರೈಕೆಯನ್ನು ಅಪಾರವಾಗಿ ಹಿಗ್ಗಿಸಿ, ಸಾಮಾನ್ಯ ಜನರ ಮೇಲಾಗುವ ಬೆಲೆ ಏರಿಕೆಯ ಪರಿಣಾಮವನ್ನು ಲೆಕ್ಕಿಸದೆ, ಮಾರುಕಟ್ಟೆಯ ದೇವತೆಯ ಪೂಜೆ ಮಾಡಿದ ಸರ್ಕಾರ, ಸಂಘಟಿತರಿಗೆ ವೇತನ ಮಂಡಳಿ, ತುಟ್ಟಿ ಭತ್ಯೆ ನೀಡುತ್ತಾ, ಅಸಂಘಟಿತರನ್ನು ನಿರ್ಲಕ್ಷಿಸುವ ಎದೆಗಾರಿಕೆಯನ್ನು ತೋರಿದೆ. ಚುನಾವಣೆ ಇನ್ನೂ ಬಹುದೂರವಿದೆಯಲ್ಲವೆ ? ಹುಸಿ ಆಶಾವಾದ, ಬಜೆಟ್ ಅಂಕಿಸಂಖ್ಯೆಗಳಲ್ಲಿ ಮರೆಮಾಚು. ಸಾಲಮನ್ನಾ ಇಲ್ಲ, ಮತ್ತಷ್ಟು ಬೆಲೆ ಏರಿಕೆಯಾಗುವ ತೆರಿಗೆ ನೀತಿ, ಆದಾಯದ ನಿರೀಕ್ಷೆಯನ್ನು ಬೇಕಂತಲೆ ಹೆಚ್ಚಿಸಿ, ವೆಚ್ಚವನ್ನು ಕಡಿಮೆಯಾಗಿ ತೋರಿಸುವುದು, ಖಾಸಗೀಕರಣ ಇವೆಲ್ಲಾ ಈ ಬಜೆಟ್ಟಿನಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ.

ಮೂರು ವರ್ಷ ತೆರಿಗೆ ವಿನಾಯ್ತಿ ನೀಡಿದರೂ ಆಮ್ ಆದ್‌ಮಿಗೆ ಬೆಲೆ ಇಳಿಯಲಿಲ್ಲ. ಈಗ ಜೀವನದ ಎಲ್ಲ ಕ್ಷೇತ್ರಗಳನ್ನೂ ಪ್ರಭಾವಿಸುವ ಪೆಟ್ರೋಲ್ ದರ, ಅಪರೋಕ್ಷ ತೆರಿಗೆಗಳಿಂದಾಗಿ ಮತ್ತೊಮ್ಮೆ ಬೆಲೆ ಏರಿಕೆಯನ್ನು ನಿಭಾಯಿಸಲು ಅವನು ಸಿದ್ಧವಾಗಬೇಕು. ''ರಾಣಿ ಅಂದ್ರೆ ನಾನು ಗೆದ್ದೆ, ರಾಜ ಅಂದ್ರೂ ನಾನೆ ಗೆದ್ದೆ'' ಅಂದಂತೆ. ಆಮ್ ಆದ್‌ಮಿ ಎಂದೆಂದೂ ಸಾಮಾನ್ಯನೆ. ಅವನು ಗೆಲ್ಲುವಂತಿಲ್ಲ ಈ ವ್ಯವಸ್ಥೆಯಲ್ಲಿ.

ಸಂಪಾದಕ

## ಪಾರ್ಲಿಮೆಂಟಿನಲ್ಲಿ ಮಹಿಳಾ ಮೀಸಲಾತಿ

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಶತಮಾನೋತ್ಸವ ಸಂದರ್ಭದಲ್ಲಿ ನಮ್ಮ ದೇಶದ ಲೋಕಸಭೆಯ ಸ್ಥಾನಗಳಲ್ಲಿ ಮೂರನೆಯ ಒಂದು ಭಾಗವನ್ನು ಮಹಿಳೆಯರಿಗೆ ಮೀಸಲಿಡುವ ನಿರ್ಣಯವು ಪಾರ್ಲಿಮೆಂಟಿನಲ್ಲಿ ಅಂಗೀಕಾರಕ್ಕೆ ಪಾತ್ರವಾಗುತ್ತದೆ ಎಂಬ ಆಶಾಭಾವನೆ ಮೂಡಿದೆ. ಈಗಾಗಲೆ ಅದು ರಾಜ್ಯಸಭೆಯಲ್ಲಿ ಅಗತ್ಯವಾದ ಮೂರನೆಯ ಎರಡರಷ್ಟು ಬಹುಮತ ಪಡೆದಿದೆ. ಅದಕ್ಕಾಗಿ ನಡೆದ ಜಗ್ಗಾಟ, ನುಗ್ಗಾಟಗಳು ಹೊಡೆದಾಟದಲ್ಲಿ ಮುಕ್ತಾಯವಾಗಲಿಲ್ಲ. ಆದರೆ ಇಡೀ ದೇಶದಲ್ಲಿ ಯುದ್ಧದ ವಾತಾವರಣ ಮೂಡಿಸುವುದಾಗಿ ಒಬ್ಬ ನಾಯಕ, ಪಾರ್ಲಿಮೆಂಟಿನಲ್ಲಿ ಹಿಂದೆಂದೂ ಇಲ್ಲದಿದ್ದಷ್ಟು ಗಲಭೆ ಏರ್ಪಡುತ್ತದೆಂದು ಇನ್ನೊಬ್ಬ ನಾಯಕ ''ಆಶ್ವಾಸನೆ ಕೊಟ್ಟಿದ್ದಾರೆ''. ಪುರುಷ ಸದಸ್ಯರಿಗೆ ಅನ್ವಯವಾಗದ ಒಂದು ಷರತ್ತನ್ನು ಮಹಿಳೆಯರ ಆಯ್ಕೆಗೆ ಅನ್ವಯಿಸಬೇಕೆಂಬ ಕೆಲವು ನಿರ್ಣಯ-ವಿರೋಧಿಗಳು ಹಿಂದುಳಿದವರ ಹೆಸರಲ್ಲಿ ತಮ್ಮ ಅಲ್ಪಾವಧಿಯ ಮುಂದಾಳತ್ವವನ್ನು ಕಾಯ್ದುಕೊಳ್ಳುತ್ತಿದ್ದಾರೆ. ಹೀಗೆಂದು ಹೇಳುವುದು ಹಿಂದುಳಿದ ವರ್ಗಗಳ ಪ್ರತಿನಿಧಿಗಳನ್ನು ಲೋಕಸಭೆಯಿಂದ ಹೊರಗಿಡುವ ಹುನ್ನಾರವೇನಾದರೂ ಇದ್ದರೆ ಅದನ್ನು ಸಮರ್ಥಿಸುವುದಕ್ಕಲ್ಲ. ಇಡೀ ರಾಷ್ಟ್ರದಲ್ಲಿ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ತರಬೇತಿ ಪಡೆಯುತ್ತಿದೆಯೆಂದು ಹೇಳುತ್ತಾರೆ. ಸದ್ಯಕ್ಕೆ ಮಂಡಲಿಗೆ ಸೋಲಾಗಿರುವುದು ಒಂದು ಅಪ್ರಕಟಿತ ರೂಪದಲ್ಲಿ ಕೆಲವು ಭಾಜಪ ನಾಯಕರಿಗೆ ಮುದ ನೀಡಿದೆ, ಆದರೆ ಅವರ ಭಯವೂ ಹೆಚ್ಚಿದೆ. ಹುಲಿಗೆ ಕಲ್ಲೆಸೆದ ಮೇಲೆ ಎಲ್ಲಿ ಬಚ್ಚಿಟ್ಟುಕೊಳ್ಳಬೇಕೆಂಬ ಚಿಂತೆ ಅವರನ್ನು ಕಾಡುತ್ತಿದೆ. ವಿಜಯನಗರ ಸಾಮ್ರಾಜ್ಯದ ಹೆಸರಿನಲ್ಲಿ ತಮ್ಮ ಸಾಮ್ರಾಜ್ಯವನ್ನು ಸುಸ್ಥಿರಗೊಳಿಸಿಕೊಳ್ಳಬೇಕೆಂದಿದ್ದವರಿಗೆ ಮುಖಭಂಗವಾಗಿದೆಯಾದ್ದರಿಂದ ಯಡಿಯೂರಪ್ಪನವರ ಮುಖ ಪರಚಲು ಮುಂದಿನ ಸಾಧ್ಯತೆ ಏನೆಂಬುದರ ಬಗ್ಗೆ ಈಗಾಗಲೆ ಚಿಂತನೆ ಮತ್ತು ಕಾರ್ಯಕ್ರಮ ರೂಪುಗೊಳ್ಳುತ್ತಿದೆ. (ಇ) ಪುನಶ್ಚೇತನವು ಮತೀಯ ಹುನ್ನಾರದ ಅಡಿಪಾಯವನ್ನು ಇತಿಹಾಸದ ಗತವೈಭವವೆಂಬ ಐತಿಹ್ಯದ ಸಿಮೆಂಟಿನಿಂದ ರಚಿಸಲು ಹೊರಟಿತ್ತು. ಅದಕ್ಕೆ ಅಷ್ಟು ಪ್ರಯೋಜನವಿಲ್ಲದಿದ್ದರೆ ಭಾಜಪಕ್ಕೆ ಕೃಷ್ಣದೇವರಾಯನ ಮೇಲೇಕೆ ವ್ಯಾಮೋಹ ! ಕಾಶಿ ಮತ್ತು ಮಥುರೆಗೆ ಹೋದ ಯಾತ್ರಿಕರಿಗೆ ಹದಿನೇಳನೆಯ ಶತಮಾನದ ''ಚರಿತ್ರೆ''ಯ ಪಾಠ ಮಾಡುವ ಪುಂಡ-ಪಂಡರು ಬೇಕಾದಷ್ಟಿದ್ದಾರೆ. ಬೃಂದಾವನಕ್ಕೆ ಹೋದವರನ್ನು ಒಂದು ಮುರುಕುಲು ದೇವಸ್ಥಾನದೆದುರು ವಠಾರದಲ್ಲಿ ಕುಳ್ಳಿರಿಸಿ ಒಂದು ಗಂಟೆ ಉಪಹಾಸವೆನಿಸುವ ಇತಿಹಾಸ ಬೋಧಿಸಲು ವ್ಯವಸ್ಥೆ ಉಂಟು. ನಮ್ಮ ದೇಶದ ಅವನತಿಗೆ ಅಂದಿನ ಮತ್ತು ಇಂದಿನ ಮುಸಲ್ಮಾನರು ಒಟ್ಟಾಗಿ ಕಾರಣರೆಂಬುದು ಅಲ್ಲಿಯ ಬೋಧೆಯ ಸಾರಾಂಶ. ಅದನ್ನು ಕೇಳಿಬಂದವರಲ್ಲಿ ಶೇಕಡ ೨೦ರಷ್ಟು ಮಂದಿಯಾದರೂ ಭಾಜಪದ ಸಮರ್ಥಕರಾದರೆ ಸಾಕು, ಭಾಜಪದ ಕಾಶಿ-ಮಥುರಾ ಪಂಡ ವ್ಯಾಖ್ಯಾನಕಾರರ ''ಬೌದ್ಧಿಕ ದುಡಿಮೆ'' ಸಾರ್ಥಕ. ಕರ್ನಾಟಕದಲ್ಲಿ ಅಂತಹ ತಾಣ ರಚಿಸಬೇಕೆಂದರೆ ಎಲ್ಲಿಗೆ ಹೋಗಬೇಕು ? ಬಾಬಾಬುಡನ್‌ಗಿರಿಯೆ, ಬಿಜಾಪುರವೆ ? ಆ ಸ್ಥಳಗಳಲ್ಲಿ ಒಂದನ್ನು ಪ್ರಯೋಗಿಸಿ ನೋಡಲಾಗಿದೆ. ಆದರೆ ಅದು ಸಾಮರಸ್ಯದ ಸಂಕೇತವಾಗಿ ಜನಮನದಲ್ಲಿ ಸ್ಥಿರವಾಗಿ ನಿಂತಿದೆ. ಇನ್ನೊಂದು ಬಿಜಾಪುರ. ಅಲ್ಲಿಯ ಐತಿಹಾಸಿಕ ಸ್ಮಾರಕಗಳನ್ನು ನೋಡುವ ಪ್ರವಾಸಿಗರು ಮಥುರಾ ಪಂಡರ ಮಾತುಗಳಿಗೆ ಮಾರುಹೋಗುವಂತೆ ಇಲ್ಲಿ ಕವಡೆ ಕಿಮ್ಮತ್ತು ನೀಡುವುದಿಲ್ಲ. ಆದ್ದರಿಂದ ''ಭವ್ಯ'' ಪುರಾತನ ಸಾಮ್ರಾಜ್ಯದ ಅವಶೇಷಗಳು ಪ್ರಚಾರಕ್ಕೆ ಪ್ರಶಸ್ತವಾದ ಜಾಗವೆಂದು ''ಕೇಶವ ಕೃಪ''ದ ವಿದ್ವಾಂಸರು ತೀರ್ಮಾನಿಸಿ ವಿಶ್ವಾಸಾರ್ಹವಲ್ಲದ ವಿಶ್ವಸ್ತ ಮಂಡಲಿಯನ್ನು ರಚಿಸುವಂತೆ ಆದೇಶ ನೀಡಿದಂತೆ ತೋರುತ್ತದೆ. ಹಕ್ಕ-ಬುಕ್ಕ, ವಿದ್ಯಾರಣ್ಯ, ಸಾಯಣರಿಗಿಂತಲೂ ಕೃಷ್ಣದೇವರಾಯನ ವೈಭವ ಸಾರಿ ''ಹಾಳು ಹಂಪೆ''ಗೆ ಅಂದಿನ ಮುಸಲ್ಮಾನರು ಕಾರಣವೆಂದು ದೂಷಿಸಿದರೆ ಪ್ರಕೃತದ ಭಾಜಪ ರಾಜಕೀಯಕ್ಕೆ ಅದು ಪೂರಕವಾದೀತು. ಬೆಂಗಳೂರಿನಲ್ಲಿ ಸೌಂದರ್ಯ ಲಹರಿ, ಹಂಪಿಯಲ್ಲಿ ಕೃಷ್ಣದೇವರಾಯ. ಹುರುಳಿಲ್ಲದ ರಾಜಕೀಯಕ್ಕೆ, ಮತೀಯ ಭಾವೋದ್ರೇಕಕ್ಕೆ, ಇದಕ್ಕಿಂತಲೂ ಇನ್ನೇನು ಬೇಕು ! (ಈ) ಎಲ್ಲದಕ್ಕಿಂತಲೂ ಹೆಚ್ಚಾಗಿ ಹಂಪಿಯ ವಿದ್ಯಾರಣ್ಯದಲ್ಲಿರುವ ಕನ್ನಡ ವಿಶ್ವವಿದ್ಯಾಲಯಕ್ಕೆ ಭಾಜಪದ ಗಣಧಣಗಳು ಮತ್ತು ಕೇಶವ ಕೃಪ, ಹೀಗೆ ಎರಡು ಕಡೆಗಳಿಂದಲೂ ''ಸರಿಯಾದ ಬುದ್ಧಿ'' ಕಲಿಸುವ ದುರಾಗ್ರಹ ಪ್ರಚಂಡವಾಗಿದೆ. ಇಷ್ಟು ವರ್ಷಗಳಲ್ಲಿ ಈ ವಿಶ್ವವಿದ್ಯಾನಿಲಯ ಭಾಜಪ ಸಂಸ್ಕೃತಿಗೆ ತಕ್ಕುದಾದ ಒಂದು ಪುಸ್ತಕ ಪ್ರಕಟಿಸಲಿಲ್ಲ, ಒಂದು ಗೋಷ್ಠಿ ನಡೆಸಲಿಲ್ಲ, ಒಬ್ಬ ವಿದ್ವಾಂಸನನ್ನು ಕರೆದು ಮಣೆ ಹಾಕಲಿಲ್ಲ. ಇದು ಅಸಹನೀಯ. ಸುಡುವ 'ಸೂಡೋ' ಸೆಕ್ಯುಲರಿಸಂ ಕುರಿತು ಪುಟಗಟ್ಟಲೆ ಬರೆಯದೆ ಸಾಂಸ್ಕೃತಿಕ ಇತಿಹಾಸದಿಂದ ಭಾವೈಕ್ಯದ ಮುತ್ತುಗಳನ್ನು ಹೆಕ್ಕಿ ತೆಗೆಯುವ ವಿಶ್ವವಿದ್ಯಾನಿಲಯವು ಯಡಿಯೂರಪ್ಪನವರ ಸಾರಥ್ಯದ ಮಹಾನ್ ಚಿಂತಕರಿಗೆ ಅಪಥ್ಯ. ಅಡಿಗರಲ್ಲದ ಒಬ್ಬ ಕವಿಯಂತೆ ಅಥವಾ ಸಮಕಾಲೀನ ಸಂಶೋಧನಾ ಚತುರರಾದ ಆತ್ಮೀಯ ಹಿರಿಯ ಪ್ರಾಧ್ಯಾಪಕ ಡಾ|| ಎಂ. ಚಿದಾನಂದಮೂರ್ತಿಯವರಂತೆ ಅಥವಾ ಬೆಂಗಳೂರಿನ ಮಿಥಿಕ್ ಸೊಸೈಟಿಯ ಮಿತಿಕಲ್ ಇತಿಹಾಸಜ್ಞರಂತೆ ಅಸಾಮಾನ್ಯ ಪಾಂಡಿತ್ಯ ತೋರುವ ಒಬ್ಬರಾದರೂ ವಿದ್ವಾಂಸರಿಲ್ಲದ ಕನ್ನಡ ವಿ.ವಿ. ಇದ್ದು ಫಲವೇನು ! ಭಾಜಪಕ್ಕೆ ಅದು ಕಣ್ಣು ಕುಕ್ಕುತ್ತದೆ, ಗಣಿಗಾರಿಕೆಯ ಪ್ರವೀಣರಿಗೆ ನಿದ್ದೆ ಕೆಡಿಸುತ್ತದೆ. ಆದ್ದರಿಂದ ಅವರಿಗೆ ''ಪುನಶ್ಚೇತನ''ವೆಂಬ ದಿವ್ಯೌಷಧ ನುಂಗಿಸಿ ''ನೈಜ ಸಂಸ್ಕೃತಿಯ ವಾರಸುದಾರರನ್ನಾಗಿ ಮಾಡುವ ಉದಾತ್ತ ಜವಾಬ್ದಾರಿ''ಯನ್ನು ವಿಶ್ವಸ್ತ ಮಂಡಲಿಗೆ ನೀಡಬೇಕಾಗಿದೆ. ಬೌದ್ಧಿಕ ರಂಗವನ್ನು ವಿಷಪೂರಿತಗೊಳಿಸಿ ಅಪ್ರಸ್ತುತವನ್ನಾಗಿಸಲು ಇದು ಮಹತ್ತರ ಹೆಜ್ಜೆ.

ಭಾಜಪದ ಕೆಂಗಣ್ಣಿಗೆ ಬೇನೆಯಾದರೂ ಪರವಾಗಿಲ್ಲ, ರಾಜ್ಯದ ಜನತೆಯ ಹಿತಕ್ಕೆ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಂಶೋಧಕರು, ವಿದ್ಯಾರ್ಥಿವೃಂದ, ಆಡಳಿತ ಸಿಬ್ಬಂದಿ, ಎಲ್ಲಾ ಒಟ್ಟಾಗಿ ಐಕ್ಯತೆಯಿಂದ ''ಪುನಶ್ಚೇತನ''ವನ್ನು ನಿಶ್ಚೇತನಗೊಳಿಸಿದ್ದು ಚರಿತ್ರಾರ್ಹವಾದ ಸಂಗತಿ. ಅವರೆಲ್ಲರೂ ನಮ್ಮ ಅಭಿನಂದನೆಗೆ ಪಾತ್ರರು. ಉಪಕುಲಪತಿಗಳು ಮೊದಲಿಗೆ ಕೆಲವು ಸಂಶಯಗಳನ್ನು ಬಿತ್ತಿದಂತೆ ತೋರಿದರೂ ಕಡೆಗೆ ಗಟ್ಟಿಯಾಗಿ ವಿಶ್ವವಿದ್ಯಾಲಯದ ಪರವಾಗಿ ಪಟ್ಟು ಹಿಡಿದಿದ್ದು ಸಹ ಅಭಿಮಾನದ ವಿಷಯವೇ. ಮಾನ್ಯ ಡಾ|| ಎಸ್. ಎಲ್. ಭೈರಪ್ಪನವರೂ ಸೇರಿದಂತೆ ನಾಡಿನ ಎಲ್ಲ ಸಾಹಿತಿಗಳು, ಸಾಂಸ್ಕೃತಿಕ ಪ್ರತಿನಿಧಿಗಳು, ಶಿಕ್ಷಣ ತಜ್ಞರು, ಸಾರ್ವಜನಿಕ ಕ್ಷೇತ್ರದ ಕಾರ್ಯಕರ್ತರು ಕನ್ನಡ ವಿಶ್ವವಿದ್ಯಾಲಯದ ಬೆಂಬಲಕ್ಕೆ ನಿಂತಿದ್ದು ಅಸಾಧಾರಣವಾದ ದಾಖಲೆ ಎನ್ನಬಹುದು. ಅದು ಕೃಷ್ಣದೇವರಾಯನ ವಿರುದ್ಧದ ದನಿಯಲ್ಲ; ಬದಲಾಗಿ ಕನ್ನಡ ಮತ್ತು ಕನ್ನಡ ವಿಶ್ವವಿದ್ಯಾಲಯದ ಪರವಾದ ದನಿ, ಸರ್ವಾಧಿಕಾರಿ ಮನೋಭಾವದ, ಅಕ್ರಮ ಗಣಿಗಾರಿಕೆಯ ಯಜಮಾನರ ವಿರುದ್ಧದ ದನಿ, ಕನ್ನಡ ನಾಡಿನ ನೆಲವನ್ನು ದೋಚಕೂಡದು ಎಂದು ಆಗ್ರಹಿಸುವ ದನಿ. ಅದನ್ನು ಯಡಿಯೂರಪ್ಪನವರು ಕೇಳಿಸಿಕೊಳ್ಳಬೇಕು, ಮಾನ್ಯ ಮಾಡಬೇಕು, ಇಂತಹ ಇನ್ನೊಂದು ಪ್ರಸಂಗ ಉಂಟಾಗದಂತೆ ಎಚ್ಚರವಹಿಸಬೇಕು. ಹಂಪಿಯಲ್ಲಿರುವ ಕನ್ನಡ ವಿಶ್ವವಿದ್ಯಾನಿಲಯವು ತನ್ನ ಭೂಮಿ, ಬೌದ್ಧಿಕ ಸಾಮರ್ಥ್ಯ, ಸಂಶೋಧನಾಪಟುತ್ವ, ಎಲ್ಲವನ್ನೂ ರಕ್ಷಿಸಿಕೊಂಡು ಆದರ್ಶಯುತ ಸಂಸ್ಥೆಯಾಗಿ ರಾಜ್ಯಕ್ಕೆ ಒಂದು ಮಾದರಿಯಾಗಬೇಕು. ಅದಕ್ಕೆ ಜನತೆ ಸಂಪೂರ್ಣ ಸಹಕಾರ ನೀಡುವುದು ಅತ್ಯಗತ್ಯ.

* * *

ಕಸಿಯುವ ವ್ಯವಹಾರದ ಕತೆಗಳು ಬೇಕಾದಷ್ಟಿವೆ. ಈವರೆಗೆ ಅಂತಹ ಒಂದು ಪ್ರಸಂಗ ನೋಡಿದ್ದೇವೆ. ಕನಸಿನ ವ್ಯವಹಾರದ ಕತೆಗಳೂ ಇವೆ. ಅವು ಚೈತನ್ಯ ತುಂಬುತ್ತವೆ, ಭರವಸೆ ಮೂಡಿಸುತ್ತವೆ. ಮಾರ್ಚ್ ೧೪ರಂದು ಕನಸುಗಾರರ ತಂಡವೊಂದರ ಕ್ರಿಯಾಶೀಲತೆಯ ಪರಿಚಯವಾಯಿತು. ಬಹುತೇಕ ಅವರೆಲ್ಲಾ ಮಾಹಿತಿ ತಂತ್ರಜ್ಞಾನದ ಕ್ಷೇತ್ರದವರು. ಆಧುನಿಕ ಜಗತ್ತಿನಲ್ಲಿ ತಿಳುವಳಿಕೆಯ ಒಂದು ಸಾಧನವಾದ ಕಂಪ್ಯೂಟರ್‌ನ ಬಳಕೆಯನ್ನು ಅತಿಸಾಮಾನ್ಯರಿಗೆ ಹೇಳಿಕೊಡುತ್ತಿರುವ ತಂಡ ಅದು. ಬೆಂಗಳೂರಿನ ಬನ್ನೇರುಘಟ್ಟ ರಸ್ತೆಯಲ್ಲಿ ಐ.ಬಿ.ಎಂ. ಎಂಬ ಅತಿದೊಡ್ಡ ಬಹುರಾಷ್ಟ್ರೀಯ ಕಂಪನಿಯ ದೈತ್ಯಾಕಾರದ ಕಟ್ಟಡವಿದೆ. ಅದು ಗಗನಚುಂಬಿ ಕಟ್ಟಡ. ಮೂರೋ ನಾಲ್ಕೋ ಗೋಪುರಗಳ ಸಂಕೀರ್ಣ ಅದು. ಅದರ ಹಿಂದಕ್ಕೆ ಗುರಪ್ಪನ ಪಾಳ್ಯದ ಕೊಳಚೆ ಪ್ರದೇಶ. ಅದರೊಡನೆ ಮತ್ತು ಅಲ್ಲಿಯ ಜನರೊಡನೆ ಸಂಪರ್ಕ ಹೊಲ್ಲದೆಂದು ಐ.ಬಿ.ಎಂ. ಬಹು ಎತ್ತರದ ಕಾಂಪೌಂಡ್ ನಿರ್ಮಿಸಿಕೊಂಡಿದೆ. ಮುಂದೊಂದು ದಿನ ಇನ್ನಷ್ಟು ಭೂಮಿ ಬೇಕೆನಿಸಿದರೆ ನಗರದ ಅಧಿಕಾರಿಗಳನ್ನು ತಣಿಸಿ ಗುರಪ್ಪನ ಪಾಳ್ಯವನ್ನು ನುಂಗಿಕೊಂಡುಬಿಡುತ್ತದೆ. ಅದು ಬೆಂಗಳೂರಿನ ''ಅಭಿವೃದ್ಧಿ''ಯ ಮಾದರಿ. ಇರಲಿ, ಈ ಕನಸುಗಾರರೇನು ಮಾಡುತ್ತಿದ್ದಾರೆ ? ಒಂದು ಚಿಕ್ಕ ಕೊಠಡಿಯಲ್ಲಿ ಕೊಳಚೆ ಪ್ರದೇಶದ ಮಕ್ಕಳಿಗೆ ಪಾಠ ಹೇಳಿಕೊಡುತ್ತಾರೆ, ಕಂಪ್ಯೂಟರ್ ಬಳಕೆ ಕಲಿಸಿಕೊಡುತ್ತಾರೆ, ಮೈಕ್ರೋಸಾಫ್ಟ್ ಏಕೆ ಮಾರಕ ಮತ್ತು ಅದರ ಬದಲಿಗೆ ಪುಕ್ಕಟೆ ಸಾಫ್ಟ್‌ವೇರ್ ಬಳಸುವುದೇಕೆ ಅವಶ್ಯಕ ಎಂಬುದನ್ನು ತಿಳಿಸಿಕೊಡುತ್ತಾರೆ. ವಿದ್ಯುತ್ ಪೂರೈಕೆಯ ಕೊರತೆಯನ್ನು ನೀಗಿಸಿಕೊಳ್ಳಲು ಅಲ್ಲಿಯ ಮಕ್ಕಳಿಗೆ ಲ್ಯಾಪ್‌ಟಾಪ್‌ಗಳನ್ನು ಕೊಟ್ಟು ಅದರ ಮೂಲಕ ಪಾಠ ಕಲಿಸುತ್ತಾರೆ. ಐದು-ಆರನೆ ತರಗತಿಯ ಮಕ್ಕಳು ಕಂಪ್ಯೂಟರ್‌ನಲ್ಲಿ ಆಟವಾಡುತ್ತಾರೆ, ಪಾಠ ಬರೆಯುತ್ತಾರೆ. ಪೋಲಿಯೋದಿಂದಾಗಿ ವಿಕಲಾಂಗನಾಗಿರುವ ಒಬ್ಬ ವಿದ್ಯಾರ್ಥಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಬರೆಯಲಿದ್ದಾನೆ. ಆತ ಕಂಪ್ಯೂಟರ್‌ನಲ್ಲಿ ಬಣ್ಣಬಣ್ಣದ ಚಿತ್ರ ಬಿಡಿಸುವಲ್ಲಿ ನಿಷ್ಣಾತನಾಗಿದ್ದಾನೆ. ಇಬ್ಬರು ಅಂಧರಿದ್ದಾರೆ. ಅವರು ಝಾರ್ಖಂಡ್ ಮತ್ತು ತಮಿಳುನಾಡಿನಿಂದ ಬಂದು ವೃತ್ತಿಯಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಒಂದು ಸಾಫ್ಟ್‌ವೇರ್ ಬಳಸಿದರೆ ಕಂಪ್ಯೂಟರ್ ಧ್ವನಿಯ ಮೂಲಕ ನಿರ್ದೇಶನ ನೀಡುತ್ತದೆ, ಅದರಂತೆ ಇವರು ಕೆಲಸ ಮಾಡುತ್ತಾರೆ. ಇಡೀ ಪ್ರದೇಶದ ಜನ ಈ ಯೋಜನೆಗೆ ಸಹಕಾರ ನೀಡುತ್ತಿದ್ದಾರೆ, ಪ್ರಯೋಜನ ಪಡೆಯುತ್ತಿದ್ದಾರೆ. ಎಲ್ಲವನ್ನೂ ಆಯೋಜಿಸಿರುವ ತಂಡದಲ್ಲಿ ಶ್ರೀ. ಜಯಕುಮಾರ್, ಶ್ರೀ. ಸೆಲ್ವಿನ್ ಮುಂತಾದ ಹಲವು ಯುವಕ-ಯುವತಿಯರಿದ್ದಾರೆ. ಸರದಿ ಪ್ರಕಾರ ಬಂದು ಇಲ್ಲಿ ಅವರು ಮಕ್ಕಳೊಡನೆ ಇರುತ್ತಾರೆ, ಬೌದ್ಧಿಕ ಬೆಳವಣಿಗೆಗಾಗಿ ತಮ್ಮ ಅಮೂಲ್ಯ ಕಾಣಿಕೆ ನೀಡುತ್ತಾರೆ. ಗುರಪ್ಪನ ಪಾಳ್ಯ ಅಲ್ಲದೆ ಬೆಂಗಳೂರಿನ ಬೇರೆ ನಾಲ್ಕು ಕಡೆಗಳಲ್ಲಿ ಈ ತಂಡ ಇದೇ ರೀತಿಯ ಕಾರ್ಯಕ್ರಮವನ್ನು ಕೈಗೊಂಡಿದೆ. ''ಸ್ವಾವಲಂಬನೆ ಮತ್ತು ಸ್ವತಂತ್ರ ಸಮಾಜಕ್ಕಾಗಿ ಸ್ವತಂತ್ರ ತಂತ್ರಾಂಶ'' ಎಂಬುದು ಅವರ ಧ್ಯೇಯವಾಕ್ಯ. ಅದನ್ನು ವಿವರಿಸುತ್ತಾ ಅವರು ಹೀಗೆನ್ನುತ್ತಾರೆ :

''ಇತ್ತೀಚಿನ ವರ್ಷಗಳಲ್ಲಿ ಸಾಫ್ಟ್‌ವೇರ್ ಉತ್ಪಾದಿಸುವ

ಕೆಲವೇ ಬಹುರಾಷ್ಟ್ರೀಯ ಕಂಪನಿಗಳು ಕಂಪ್ಯೂಟರ್ ಬಳಕೆದಾರರನ್ನು ಮತ್ತು ತಂತ್ರಜ್ಞರನ್ನು ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಂಡು ಗುಲಾಮರನ್ನಾಗಿಸಲು ಹವಣಿಸುತ್ತಿವೆ. ತಾವು ತಯಾರಿಸಿ ಮಾರಾಟ ಮಾಡುವ ಸಾಫ್ಟ್‌ವೇರ್ ತಂತ್ರಜ್ಞಾನಕ್ಕೆ ಅಗಾಧ ಪ್ರಮಾಣದ ಲೈಸೆನ್ಸ್ ಶುಲ್ಕ ಸುಲಿಗೆ ಮಾಡುವುದು, ಕಾಲ ಕಾಲಕ್ಕೆ ಹೊಸ ಸಾಫ್ಟ್‌ವೇರುಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುತ್ತಾ ತಮ್ಮವೇ ಹಿಂದಿನ ಸಾಫ್ಟ್‌ವೇರ್ ಉತ್ಪನ್ನಕ್ಕೆ ಸೇವಾ ಸೌಲಭ್ಯವನ್ನು ಹಿಂಪಡೆಯುವ ಮೂಲಕ ಬಳಕೆದಾರರು ಅನಿವಾರ್ಯವಾಗಿ ಹೊಸ ಸಾಫ್ಟ್‌ವೇರ್‌ಗಳನ್ನು ಕೊಂಡುಕೊಳ್ಳಲೇಬೇಕಾದ ಪರಿಸ್ಥಿತಿ ಸೃಷ್ಟಿಸುವುದು, ಸಮುದಾಯ ಸೃಷ್ಟಿಸುವ ಹೊಸ ಆವಿಷ್ಕಾರಗಳನ್ನು ತನ್ನ ಬಗಲಿಗೆ ಹಾಕಿಕೊಳ್ಳುವುದು ಈ ಕಂಪನಿಗಳ ತಂತ್ರಗಾರಿಕೆಯಾದರೆ, ಪೇಟೆಂಟ್, ಟ್ರೇಡ್‌ಮಾರ್ಕ್ ಇತ್ಯಾದಿ ಹೊಸ ಪರಿಭಾಷೆಗಳ ಕಾನೂನು ಕಟ್ಟುಪಾಡುಗಳಿಂದ ಸಮಾಜವೊಂದರಲ್ಲಿ ಜ್ಞಾನ ಹರಡದಂತೆ, ಹೊಸ ತಂತ್ರಜ್ಞಾನ ಪಸರಿಸದಂತೆ ತಡೆಗಟ್ಟಲಾಗುತ್ತದೆ.

''ಈ ಕಂಪನಿಗಳ ಬಹು ಮುಖ್ಯವಾದ ನಿಯಂತ್ರಣದ ಮೂಲವೆಂದರೆ, ತಾವು ಮಾರಾಟ ಮಾಡುವ ಸಾಫ್ಟ್‌ವೇರ್ ಜೊತೆ ಅವುಗಳ ಮೂಲ ಸಂಕೇತಗಳನ್ನು ನೀಡುವುದಿಲ್ಲ. ಇದರಿಂದಾಗಿ ಸಾಫ್ಟ್‌ವೇರ್ ಕೊಂಡವನು ತಾನು ಖರೀದಿಸಿದ ಸಾಫ್ಟ್‌ವೇರ್‌ಅನ್ನು ಮಾರ್ಪಡಿಸಲು ಅಥವಾ ಕೆಟ್ಟುಹೋದಲ್ಲಿ ರಿಪೇರಿ ಮಾಡಿಸಲು ಸಾಧ್ಯವೇ ಇಲ್ಲ. ಇದಕ್ಕಾಗಿ ಮತ್ತೆ ಕಂಪನಿ ಬಳಿಯೇ ಹೋಗಿ ದುಬಾರಿ ಹಣ ತೆತ್ತು ಅಂಥ ಮಾರ್ಪಾಟು ಅಥವಾ ರಿಪೇರಿ ಮಾಡಿಸಿಕೊಳ್ಳಬೇಕು. ಇದನ್ನು ಸರಳವಾಗಿ ಹೇಳಬೇಕೆಂದರೆ, ಮೋಟಾರ್ ಬೈಕು ಖರೀದಿಸಿದವನಿಗೆ ಅದನ್ನು ಬೇರೆ ಯಾರಿಗೂ ಓಡಿಸಲು ಕೊಡಲು ಸ್ವಾತಂತ್ರ್ಯವಿಲ್ಲ, ಅದನ್ನು ಮಾರ್ಪಡಿಸಲು ಅಥವಾ ರಿಪೇರಿ ಮಾಡಿಕೊಳ್ಳಲು ಯಾವುದೇ ಸ್ವಾತಂತ್ರ್ಯವಿಲ್ಲ. ಹೀಗೆ ಬಹುರಾಷ್ಟ್ರೀಯ ಕಂಪನಿಗಳು ಹರಡುತ್ತಿರುವ ಬಂಧನದ ಸರಪಳಿ ಮತ್ತು ಕಬಂಧಬಾಹು ವ್ಯಾಪಕವಾಗಿ ಚಾಚಿವೆ.''

ಮಕ್ಕಳಿಗೆ ಕಂಪ್ಯೂಟರ್ ತಂತ್ರಜ್ಞಾನ ನೀಡುವುದರೊಂದಿಗೆ ಬಹುರಾಷ್ಟ್ರೀಯ ಕಂಪನಿಗಳಿಗೆ ಪ್ರತಿರೋಧ ಒಡ್ಡುವುದು ಸಹ ಈ ತಂಡದ ಅನುಕರಣೀಯ ಕಾರ್ಯಕ್ರಮವಾಗಿದೆ.

* * *

ರಾಜ್ಯದ ಮತ್ತು ಕೇಂದ್ರದ ವಾರ್ಷಿಕ ಬಜೆಟ್‌ಗಳು ಬಂದಿವೆ. ಒಂದು ಜನವಿರೋಧಿ, ಇನ್ನೊಂದು ರಾಷ್ಟ್ರವಿರೋಧಿ ಎನಿಸುತ್ತಿದೆ. ವಿವರಗಳಿಗೆ ಬಜೆಟ್ ಕುರಿತ ಸಂಪಾದಕೀಯವನ್ನು ನೋಡಬಹುದು. ಪ್ರಣವ ಮುಖರ್ಜಿ ಬಜೆಟ್ಟಿಗೆ ಒಂದು ತುಣುಕು ಪ್ರತಿಕ್ರಿಯೆಯನ್ನು ಹೀಗೆ ನೀಡಬಹುದೆ? ''ಚಿದಂಬರಂ ಹೇಳುತ್ತಾರೆ ನಕ್ಸಲರನ್ನು ಸದೆಬಡೆಯುತ್ತೇವೆ ಎಂದು, ಪ್ರಣವ್ ಹೇಳುತ್ತಾರೆ ನನ್ನ ಬಜೆಟ್‌ನಿಂದ ನಕ್ಸಲರನ್ನು ಸೃಷ್ಟಿಸುತ್ತೇನೆ ಎಂದು.'' ಒಂದೇ ಸರ್ಕಾರದ ಎರಡು ಕೈಗಳು ಇವರಿಬ್ಬರು. ಜೀಸಸ್ ಹೇಳಿದ್ದನಂತೆ, ''ಒಂದು ಕೈ ನೀಡುವ ಕೊಡುಗೆಯು ಇನ್ನೊಂದು ಕೈಗೆ ತಿಳಿಯದಿರಲಿ,'' ಎಂದು. ಭಾರತ ಸರ್ಕಾರದ ಕೈಗಳು ಕ್ರಿಸ್ತನ ನುಡಿಯನ್ನು ಪಾಲಿಸ ಹೊರಟಿವೆ, ಆದರೆ ನುಡಿಯನ್ನು ಸ್ವಲ್ಪ ತಿರುಚಿಕೊಂಡಿವೆ, ಅಷ್ಟೆ. ಒಂದು ಕೈ ಹೇಳುತ್ತದೆ, ''ನಿನ್ನನ್ನು ಬಡಿಯುತ್ತೇನೆ'' ಎಂದು; ಇನ್ನೊಂದು ಕೈ ಹೇಳುತ್ತದೆ, ''ಬಡಿಯಲಿ, ಚಿಂತೆ ಬೇಡ; ನಿಮ್ಮಂತಹ ಬೇರೆ ನೂರು ಮಂದಿಯನ್ನು ನಿಮ್ಮ ಬಣಕ್ಕೆ ತುಂಬಿಕೊಡುತ್ತೇನೆ,'' ಎಂದು. ಇನ್ನೊಂದು ವಿಷಯ: ಬಜೆಟ್ ಕುರಿತ ಚರ್ಚೆಯ ಸ್ವರೂಪವನ್ನು ಬದಲಿಸಬೇಕು. ಈ ವರ್ಷದ ಬಜೆಟ್ ತೆಗೆದುಕೊಂಡು ''ಹಾ... ಹೂ... ಹೋ...'' ಎಂದು ಮೈಮರೆಯುವುದನ್ನು ಬಿಟ್ಟು ಸುಮ್ಮನೆ ಕಳೆದ ವರ್ಷದ ಬಜೆಟ್ ತೆಗೆದುಕೊಂಡು ''ಇಷ್ಟೆಲ್ಲಾ ಹೇಳಿದ್ದಿರಲ್ಲಾ ಪ್ರಭುಗಳೇ, ನೀವು ಕಿಸಿದಿದ್ದು ಇಷ್ಟೇನಾ?'' ಎಂದು ಕೇಳಬೇಕು.

* * *

ನಮ್ಮ ರಾಜ್ಯದ ಉಚ್ಚ ನ್ಯಾಯಾಲಯದ ಪ್ರಮುಖ ನ್ಯಾಯಮೂರ್ತಿ ಶ್ರೀ. ಪಿ. ಡಿ. ದಿನಕರನ್‌ಗೂ ಇಟಲಿಯ ಪ್ರಧಾನಿ ಬೆರ್ಲುಸ್ಕೋನಿಗೂ ಸಾಮ್ಯವಿದೆಯೆಂದು ಎಂದಾದರೂ ಅನಿಸಿದ್ದುದುಂಟೆ? ಇಬ್ಬರೂ ಉನ್ನತ ಸ್ಥಾನಗಳಲ್ಲಿದ್ದಾರೆ, ಇಬ್ಬರ ಮೇಲೂ ಆಪಾದನೆಗಳಿವೆ ಮತ್ತು ಅವು ಖಚಿತವೆಂದು ಸಾಬೀತಾಗಿವೆ, ಇಬ್ಬರೂ ತಮ್ಮ ತಮ್ಮ ಸ್ಥಾನಗಳಿಗೆ ಬಲವಾಗಿ ಅಂಟಿಕೊಂಡು ಕುಳಿತಿದ್ದಾರೆ, ಇಬ್ಬರ ಬಗೆಗೂ ಜನಾಭಿಪ್ರಾಯ ವ್ಯಕ್ತವಾಗಿದೆ. ಅಂಥವರು ಹತ್ತಾರು ಮಂದಿ ಇದ್ದಾರೆ, ಬಿಡಿ; ಅದೇನೂ ವಿಶೇಷವಲ್ಲ. ಇವರಿಬ್ಬರ ವಿಶೇಷ ಸಾಮ್ಯತೆ ಏನೆಂದರೆ ತಮ್ಮ ಸ್ಥಾನಗಳಲ್ಲಿ ಗೂಟ ಬಡಿದುಕೊಂಡು ಕುಳಿತಿರಲು ಅಗತ್ಯವಾದ ಕಾನೂನನ್ನು ಮಾಡಿಬಿಡುತ್ತಾರೆ ಇಲ್ಲವೆ ಇರುವ ಕಾನೂನಿಗೆ ತಮ್ಮದೇ ಅರ್ಥಕೊಡುತ್ತಾರೆ. ಬೆರ್ಲುಸ್ಕೋನಿಯು ಇಟಲಿಯ ಪಾರ್ಲಿಮೆಂಟಿಗೆ ಚಳ್ಳೇಹಣ್ಣು ತಿನ್ನಿಸುತ್ತಾನೆ, ನ್ಯಾಯಮೂರ್ತಿ ದಿನಕರನ್ ನ್ಯಾಯಾಂಗಕ್ಕೆ ನಾಲ್ಕು ಪೆಟ್ಟು ಬಿಗಿದು ಹಸನ್ಮುಖಿರಾಗಿ ಆನಂದಿಸುತ್ತಾರೆ. ಗಂಗಾನದಿಯಲ್ಲಿ ನೀರು ಹರಿಯುತ್ತಿರುವವರೆಗೆ ಇವರಿಗೆಲ್ಲಾ ಯಾವ ಅಭದ್ರತೆಯೂ ಇಲ್ಲ, ಏಕೆಂದರೆ ಅವರ ಹಗರಣಗಳನ್ನು ಕುರಿತ ತನಿಖೆ ಎಂದೆಂದಿಗೂ ಮುಗಿಯುವುದಿಲ್ಲ, ತೀರ್ಮಾನ ಹೊರಬೀಳುವುದಿಲ್ಲ. ಒಮ್ಮೆ ಪಾರ್ಲಿಮೆಂಟ್ ಮುಂದೂಡಲ್ಪಟ್ಟರೆ ಅದು ಮತ್ತೆ ಸೇರುವುದು ಎಂದಿಗೋ ಏನೋ! ಬೆರ್ಲುಸ್ಕೋನಿ ಮತ್ತು ದಿನಕರನ್ ಸ್ವಸ್ಥಚಿತ್ತದಿಂದ 'ಸೇವೆ' ಮುಂದುವರಿಸಲು ಅಡ್ಡಿಯಿಲ್ಲ. ನ್ಯಾಯದೇವತೆಯು ಕೃಪಾಳುವೆಂಬುದು ಸ್ಥಿರವಾಯಿತಲ್ಲವೆ?

* * *

ಈ ಮಧ್ಯೆ ಇನ್ನೊಂದು ಚಿಕ್ಕ ವಾರ್ತೆ: ಕೇಂದ್ರದ ಗೃಹಸಚಿವ ಮಾನ್ಯ ಶ್ರೀ. ಪಿ. ಚಿದಂಬರಂ (ಅವರು ಚೆಟ್ಟಿಯಾರರೆ? ನಮಗೆ ತಿಳಿಯದು) ಕೊಯಮತ್ತೂರಿನ ಬಳಿಯ ಹಳ್ಳಿಗಳಲ್ಲಿ ಎಲ್ಲಾದರೂ ಒಂದೆಡೆ ಸ್ವಲ್ಪ ಜಮೀನು ಖರೀದಿಸಬೇಕಂತೆ. ಅದಕ್ಕಾಗಿ ಅವರ ಪ್ರತಿನಿಧಿಗಳು ಅಲ್ಲೆಲ್ಲಾ ಸುತ್ತಾಡುತ್ತಿದ್ದಾರಂತೆ. ಅವರಿಗೆ ಬೇಕಾದ್ದು ಸ್ವಲ್ಪವೇ ಭೂಮಿ, ಕೇವಲ ನಾಲ್ಕು ಸಾವಿರ ಎಕರೆಗಳು! ಏನು ಮಾಡಲು ಎಂಬುದು ತಿಳಿದಿಲ್ಲ. ಅವರ ಮಗ ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದ. ಬೌಲಿಂಗ್ ಎಂಬ ಆಟವನ್ನು ಪ್ರಚುರಪಡಿಸುವ ಉದ್ದೇಶದಿಂದ ರಾಷ್ಟ್ರೀಯ ಸಭೆ ಜರುಗಿತಂತೆ. ಅದಕ್ಕೆ ಮರಿ - ಚಿದಂಬರಂ ಅಧ್ಯಕ್ಷ. ಬೌಲಿಂಗ್ ಅಖಾಡಕ್ಕೆ ೪೦೦೦ ಎಕರೆ ಭೂಮಿಯಂತೂ ಬೇಕಾಗುವುದಿಲ್ಲ!

[signature]

---

*ಸಂಪಾದಕೀಯ (೫ನೇ ಪುಟದಿಂದ)*

ಸಾಮಾಜಿಕ ವಾತಾವರಣ ಹೇಗೆ ರೂಪುಗೊಂಡಿದೆ ಎಂಬ ವಾಸ್ತವ ಎಲ್ಲರಿಗೂ ತಿಳಿದಿದೆ. ಹಿಂದುಳಿದವರು ಗಣನೀಯ ಪ್ರಮಾಣದಲ್ಲಿ ಜನಪ್ರತಿನಿಧಿಗಳಾಗಿ ಆಯ್ಕೆಗೊಳ್ಳುತ್ತಿರುವುದನ್ನು ಕಳೆದ ಮೂರು-ನಾಲ್ಕು ಲೋಕಸಭೆಗಳ ಸದಸ್ಯತ್ವದ ಪ್ರಮಾಣವನ್ನು ನೋಡಿ ತಿಳಿಯಬಹುದು. ಮೇಲ್ವರ್ಗದ ಹಿಡಿತವನ್ನು ತಡೆಯಬೇಕೆಂಬುದರಲ್ಲಿ ಎರಡು ಮಾತಿಲ್ಲ, ಆದರೆ ಇಂದು ಅಂಬಾನಿ - ಮಿತ್ತಲ್ - ಟಾಟಾ - ಸಹಾರಾ - ಮಹೀಂದ್ರ ಮುಂತಾದ ಕಂಪನಿಗಳ ಸಮರ್ಥಕರು, ಕೋಟ್ಯಧೀಶ್ವರರು, ರಾಜಮನೆತನದವರು ಪಾರ್ಲಿಮೆಂಟನ್ನು ತುಂಬಿದ್ದಾರಲ್ಲ ಅದು ಮುಖ್ಯ, ಅದಕ್ಕೆ ಪ್ರತಿರೋಧ ಒಡ್ಡಬೇಕು. ಮಹಿಳೆಗೆ ಮೂರನೆಯ ಒಂದು ಸ್ಥಾನ ಮೀಸಲಿಡುವುದರಿಂದ ಹಿಂದುಳಿದವರಿಗೆ ಹೇಗೆ ತೊಂದರೆ ಉಂಟಾಗುತ್ತದೆ ಎಂದು ವಿವರಿಸಿರುವರು ದೇಶದ ವಸ್ತುಸ್ಥಿತಿಯನ್ನು ಮುಚ್ಚಿಟ್ಟು ಮಾತನಾಡುತ್ತಿದ್ದಾರೆ. ಮುಲಾಯಂ ಸಿಂಗ್ ಯಾದವ್ ಗಣಿತ ಪ್ರತಿಭೆಯನ್ನು ಪರಿಚಯಿಸಲು ಇನ್ನು ಮೂರು ಬಾರಿ ಚುನಾವಣೆಗಳು ನಡೆದ ನಂತರ ಲೋಕಸಭೆಯಲ್ಲಿ ಶೇಕಡ ೯೯ರಷ್ಟು ಮಹಿಳೆಯರೇ ಇರುತ್ತಾರೆಂದು ನೊಂದುಕೊಂಡಿದ್ದಾರೆ. ಮುಖ್ಯವಾಗಿ ಈ ನಿರ್ಣಯ ವನ್ನು ವಿರೋಧಿಸುತ್ತಿರುವವರು ಊಳಿಗಮಾನ್ಯ ವ್ಯವಸ್ಥೆಯ ಪ್ರತಿಪಾದಕರು. ಅವರ ಸ್ವಂತದ ವೈರುಧ್ಯ ತಿಳಿಯದಷ್ಟು ಮೂಢರಲ್ಲ ಅವರು, ಆದರೆ ಸ್ವಾರ್ಥಸಾಧನೆಗೆ ಮತ್ತು ನಶಿಸಿ ಹಾಳಾಗಬೇಕಾದ ಊಳಿಗಮಾನ್ಯ ವ್ಯವಸ್ಥೆಯ ಮೌಲ್ಯಗಳನ್ನು ರಕ್ಷಿಸಲು ಚರಿತ್ರೆಯ ಚಲನಶೀಲತೆಗೆ ಅಡ್ಡಿಯೊಡ್ಡುತ್ತಿದ್ದಾರೆ. ಅವರು ಎದುರಿಸಬೇಕಾದ ಪ್ರಶ್ನೆ ಇದು: ಊಳಿಗ ಮಾನ್ಯ ವ್ಯವಸ್ಥೆಯನ್ನು ಬುಡಮೇಲು ಮಾಡದೆಯೇ ಹಿಂದುಳಿದವರನ್ನು ಮುಂದಕ್ಕೆ ಹೋಗುವಂತೆ ಮಾಡಲು ಯಾವ ಸಿದ್ಧೌಷಧಿ ಇದೆ? ಇವರಿಗೆಲ್ಲಾ ಮಹಿಳೆಯ ದುಡಿಮೆಯ ಫಲ ಬೇಕು, ಮಹಿಳೆಗೆ ಗೌರವಯುತ ಸ್ಥಾನ ಕೊಡದು. ಗಜಗರ್ಭದಿಂದ ಆನೆಮರಿಯು ಹನ್ನೆರಡು ವರ್ಷಕ್ಕೆ ಹೊರಬಂದು ನಳನಳಿಸುತ್ತದೆ. ಮಹಿಳಾ ಮೀಸಲಾತಿ ನಿರ್ಣಯವು ೧೪ ವರ್ಷಗಳಿಂದ ಅಲಮಾರಿನಲ್ಲಿ ಬಿದ್ದು ಧೂಳು ಹಿಡಿದಿದೆ. ವಿರೋಧಿಗಳು ತಮ್ಮ ತಲೆಯ ಧೂಳು ಕೊಡವಿಕೊಂಡು ನಿರ್ಣಯವನ್ನು ಸಮರ್ಥಿಸಲು ಇದು ಸಕಾಲ.

[signature]




## ಫೆಬ್ರವರಿ ಸಂಚಿಕೆ

೧೯೯೬ರಲ್ಲಿ ಆರಂಭವಾದ ಪೋಲಿಯೋ ನಿರ್ಮೂಲನ ಕಾರ್ಯಕ್ರಮದ ಯಶೋಗಾಥೆಯ ಚಿತ್ರಣ ಮತ್ತು ಕ್ಯೂಬಾ ದೇಶದ ಆರೋಗ್ಯ ಕಳಕಳಿಯ ಲೇಖನದ ಬಗ್ಗೆ: ಸೇವೆಯೆಂಬ ಉದಾತ್ತ ಉದ್ದೇಶದ ಆರೋಗ್ಯ ಕ್ಷೇತ್ರವು ಜಾಗತೀಕರಣದ ಪ್ರಭಾವದಿಂದಾಗಿ ಭಾರತದಲ್ಲಿ ಬೃಹತ್ ಉದ್ದಿಮೆಯಾಗಿ ಬೆಳೆದ ಪರಿಣಾಮ ಮತ್ತು ಬಹು ರಾಷ್ಟ್ರೀಯ ಔಷಧಿ ಸಂಸ್ಥೆಗಳ ಮಾರುಕಟ್ಟೆ ತಂತ್ರಗಳಿಂದಾಗಿ ರೋಗ ನಿವಾರಣ ಯೋಜನೆಗಳು ಲಾಭದಾಯಕ ವಹಿವಾಟುಗಳಾಗಿವೆ. ವ್ಯವಸ್ಥೆಗಳಿಗಿಂತ ಅವ್ಯವಸ್ಥೆಗಳಲ್ಲಿ ಲಾಭವನ್ನು, ಸುಖವನ್ನು ಕಂಡುಕೊಂಡಿರುವ ಭಾರತೀಯರು ನಿರ್ಮೂಲನದ ಬದಲು ಸಂಗೋಪನವನ್ನು ಗುರಿಯಾಗಿ ಪಾಲಿಸುತ್ತಿದ್ದಾರೆ. ಜಗತ್ತಿನಾದ್ಯಂತ ದೇಶಗಳು ಸಾರ್ವಜನಿಕ ಆರೋಗ್ಯದ ಬಗ್ಗೆ ವಿಶೇಷ ಗಮನವನ್ನು ಹರಿಸಿರುವುದರಿಂದಾಗಿ ಆರೋಗ್ಯಸೇವಾ ವಿಭಾಗಗಳಿಗೆ ಹಣದ ಹೊಳೆಯು ಹರಿದು ಬರುವುದನ್ನು ಕ್ಯೂಬಾದಂತಹ ದೇಶಗಳು ರೋಗನಿವಾರಣೆಗಳಿಗೆ ಬಳಸಿಕೊಂಡು ಆರೋಗ್ಯವಂತ ಸಮಾಜಕ್ಕೆ ಕಾರಣವಾದರೆ ಭಾರತದಲ್ಲಿ ಹಲವರ ಸಂಪತ್ತಿನ ಅಭಿವೃದ್ಧಿಗೆ ಕಾರಣವಾಗುವುದರಿಂದಾಗಿ ಪೋಲಿಯೋ ನಿರ್ಮೂಲನ ಯೋಜನೆಗಳು ವಜ್ರಮಹೋತ್ಸವ ಆಚರಣೆಗಳಾಗಬಲ್ಲವು.

ಮೈಸೂರು — **ನರೇಂದ್ರ ಸಿರಕಜೆ**

## ಮಾರ್ಚ್ ಸಂಚಿಕೆ

'ಬದುಕೆನ್ನುವುದು ಬೆದರಲಿಕ್ಕಲ್ಲ ಬದುಕಲಿಕ್ಕೆ' ಎಂಬ ವಿಚಾರಕ್ಕೆ ಇಂಬುಗೊಡುವಂತೆ ಜೀವನವನ್ನು ನಡೆಸಿದವರು ಚಿಂದೋಡಿ ಲೀಲಾ. ಅವರು ಇಂದಿನ ಮಹಿಳೆಯರಿಗೆ ಮಾದರಿಯಾಗುವಂತಹವರು. ಅವರ 'ಶರಪಂಜರ'ದ ಪಾತ್ರವನ್ನು ಯಾರೂ ಮರೆಯಲು ಸಾಧ್ಯವಿಲ್ಲ. ಮಹಿಳೆಯರಿಂದ ಹಿಡಿಶಾಪ ಗಳಿಸಿದ ಗಟ್ಟಿಪಾತ್ರವದು. ಅದನ್ನು ಸಮರ್ಥವಾಗಿ ನಿರ್ವಹಿಸಿದ ಲೀಲಾ ಕನ್ನಡ ಚಿತ್ರರಸಿಕರ ಮನದಲ್ಲಿ ಶಾಶ್ವತ ಸ್ಥಾನವನ್ನು ಗಳಿಸಿದ್ದಾರೆ.

ಡಾ|| ವಿಜಯಾ ಲೀಲಾ ಅವರ ಜೀವನಚಿತ್ರವನ್ನು ಸಮರ್ಥವಾಗಿ ಅನಾವರಣಗೊಳಿಸಿದ್ದಾರೆ.

ಎ. ಎಸ್. ಮಕಾನದಾರರ 'ಅಮ್ಮನ ಬಿಕ್ಕಳಿಕೆ ನಿಲ್ಲಿಸುವಿರಾ ?' ಹಾಗೂ 'ಗೋಕರ್ಣದ ಮಹಾಬಲನಿಗೆ' (ಬಿ. ಶ್ರೀನಿವಾಸ) ಗಮನಾರ್ಹವಾಗಿವೆ. ವೈದೇಹಿ ಅವರ ಸಂದರ್ಶನ ಚೆನ್ನಾಗಿದೆ. ದುಡಿಮೆ ಹೆಣ್ಣಿಗೆ ಆತ್ಮವಿಶ್ವಾಸವನ್ನು ತಂದುಕೊಡುತ್ತೆ ಎನ್ನುವ ಮಾತು ಸತ್ಯ.

ಮೈಸೂರು — **ಕೋ. ಸು. ನರಸಿಂಹಮೂರ್ತಿ**

ಈ ತಿಂಗಳ ಸಂಚಿಕೆಯಲ್ಲಿ 'ಗಾಂಧಿ ಹತ್ಯೆಯ ಕರಾಳ ನೆರಳು' ಎಂಬ ಲೇಖನವನ್ನು ಓದಿದೆ. ತಮಾಷೆ ಎಂದರೆ ನಿನ್ನೆಯಲ್ಲ ಮೊನ್ನೆಯಷ್ಟೇ ಶತಾಯುಷಿ ಪಂಡಿತ ಸುಧಾಕರ ಚತುರ್ವೇದಿಯವರ '೧೦೭ರ ಮೆಲುಕು' ಎಂಬ ಪುಸ್ತಕ ಓದಿ ಮುಗಿಸಿದ್ದೆ. ಮಾನ್ಯ ಚತುರ್ವೇದಿಯವರು ಈಗಲೂ ಬೆಂಗಳೂರಿನಲ್ಲಿಯೇ ಇದ್ದಾರಷ್ಟೇ! ಈ ಪುಸ್ತಕದಲ್ಲಿ ನಿರೂಪಿತವಾದ ಗಾಂಧಿ ಕೊಲೆಯ ಸಂದರ್ಭದ ವಿವರಣೆಗಳನ್ನು ತಾಳೆ ಹಾಕಿದಾಗ 'ಹೊಸತು'ವಿನಲ್ಲಿ ಪ್ರಕಟವಾಗಿರುವ ಲೇಖನದ ಅಭಿಪ್ರಾಯಗಳಿಗೆ ಸಾಕಷ್ಟು ವಿರೋಧಾತ್ಮಕವಾದ ವಿವರಣೆ ಲಭ್ಯವಿವೆ. ಯಾವುದು ಸತ್ಯ, ಯಾವುದು ಅಸತ್ಯ ? ನನ್ನಂಥ ಓದುಗನನ್ನು ಸಂಭ್ರಮದಲ್ಲಿ ಕೆಡವುವ ಮಾಧ್ಯಮಗಳನ್ನು ಯಾರು ಹತೋಟಿಯಲ್ಲಿಟ್ಟಿದ್ದಾರೆ ?

ಬೆಳಗಾವಿ — **ಅನಂತ ಕಲ್ಲೋಳ**

## ಸಾಹಿತ್ಯದ ಹೆಮ್ಮೆ

ವೈದೇಹಿಯವರೊಂದಿಗೆ ಮಾತನಾಡಲು ಸಂದರ್ಭಗಳೇ ಬೇಕಾಗಿಲ್ಲ ಎಂಬುದನ್ನು ನಿರೂಪಿಸಿರುವ ಚುಟುಕು ಸಂದರ್ಶನವಿದು. ಆತ್ಮಚರಿತ್ರೆಗಳ ಲಿಪಿಕಾರ್ತಿಯಾಗಿ ಅಕ್ಷರಗಳಿಗೆ ದನಿ ನೀಡಿ, ಕವನಗಳಲ್ಲಿ ಸಂಗೀತವನ್ನು




ತುಂಬಿ ಕಥೆಗಳಲ್ಲಿ ಗ್ರಾಮೀಣ ಬದುಕಿನ ಸಕಲವನ್ನು ಸೆರೆ ಹಿಡಿದು, ಪ್ರಬಂಧಗಳಲ್ಲಿ ವಸ್ತುಗಳು ಇಲ್ಲೇ ಇರುವಂತಹವುಗಳು ಎನ್ನುವಂತೆ ಸಾಹಿತ್ಯವನ್ನು ಸರಳವಾಗಿ ಸಾಮಾನ್ಯರಿಗೆ ಮುಟ್ಟಿಸಿ ಸಾಹಿತಿಯಾದವರು ವೈದೇಹಿ. ಭಾಷಾ ವೈವಿಧ್ಯತನದಿಂದ ಪರಿಚಯದ ಪರಿಸರದಲ್ಲಿ ಅಕ್ಕಪಕ್ಕದಲ್ಲಿ ನಡೆದಾಡುವವರು ಪಾತ್ರಗಳಾಗಿ, ಜೀವನದ ತುಡಿತಗಳು ಗಟ್ಟಿ ವಿಚಾರಗಳಾಗಿ ಕುತೂಹಲದ ವಿಷಯಗಳಾಗಿ ಕಥೆಗಳಲ್ಲಿ ಜೀವತಳೆದು ಓದುಗರೊಂದಿಗೆ ಒಂದಾಗಿಬಿಡುವ ಅಪರೂಪದ ಇವರ ಬರವಣಿಗೆ ಗುಬ್ಬಚ್ಚಿಗೂಡಾಗಿ ಮನೆಯ ಮಾಡುಗಳ ಬದಲು ಮನದೊಳಗೆ ಸೇರಿಬಿಟ್ಟಿವೆ. ಸರ್ವತಂತ್ರ *ಸ್ವಾತಂತ್ರ್ಯವನ್ನು ಅನುಭವಿಸುತ್ತಾ ಕನಸುಗಳಿಗೆ, ಕಲ್ಪನೆಗಳಿಗೆ, ರೂಪಗಳನ್ನು ನೀಡುತ್ತಾ ಬದುಕಿನ ಬಗ್ಗೆ ನಿರಾಳವಾಗಿರುವ ವೈದೇಹಿಯವರ ದೃಷ್ಟಿಯಲ್ಲಿ ಮಹಿಳೆಯರು ಹೊರಗೆ ದುಡಿಯುವ ಬಗ್ಗೆ ಅರ್ಥ ಭಿನ್ನವಾದರೂ ಸಹ ಅಪಾರ್ಥಕ್ಕೆ ಎಡೆ ಇಲ್ಲದ್ದು ಎನ್ನುವುದು ಮುಖ್ಯವಾಗಿದೆ.

ಮೈಸೂರು — **ನರೇಂದ್ರ ಸಿರಕಜೆ**

## ಇದು ಕೂಡದು

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಉಪಯೋಗಕ್ಕೆ ಹಾಗೂ ಚಟುವಟಿಕೆಗಳ ವಿಸ್ತರಣೆಗೆ ಹಿಂದೆ ಸರಕಾರವು ನೀಡಿದ್ದ ೭೦೦ ಎಕರೆ ಭೂಮಿಯಿಂದ ೮೦ ಎಕರೆಯನ್ನು ಕತ್ತರಿಸಿ ಕೃಷ್ಣದೇವರಾಯರ ಹೆಸರಿನಲ್ಲಿ ರಚಿಸಲಾದ ಯಾವುದೋ ಒಂದು ಟ್ರಸ್ಟಿಗೆ ಕೊಡಲಾದುದು ಖಂಡನಾರ್ಹವಾಗಿದೆ.

ಕೃಷ್ಣದೇವರಾಯರ ಪಟ್ಟಾಭಿಷೇಕದ ೫೦೦ನೇ ವರ್ಷದ ಉತ್ಸವಕ್ಕೆಂದು ಸರಕಾರದ ಬೊಕ್ಕಸದಿಂದ ೧೩. ಕೋಟಿ ರೂ.ಗಳನ್ನು ವೆಚ್ಚ ಮಾಡುವುದಾಗಿ ಈಗಿನ ಸರಕಾರ ಘೋಷಿಸಿತ್ತು. ಅದೇ ಅನಗತ್ಯ ಎಂದು ಟೀಕೆಗಳು ಬಂದಿರುವಾಗ ನಿಜವಾಗಿ ೭೫ ರೋಟಿ ರೂ.ಗಳಷ್ಟು ಹಣವನ್ನು ಅದಕ್ಕೋಸ್ಕರ ಖರ್ಚು ಮಾಡಲಾಗಿದೆ ಎಂದು ಈಗ ಬಯಲಾಗಿದೆ. ಇದು ಸರಕಾರಿ ಬೊಕ್ಕಸವನ್ನು ದೋಚುವ ಯಾವುದೋ ಅನ್ಯ ಉದ್ದೇಶಕ್ಕೆ ಬಳಕೆ ಮಾಡುವ ದುರ್ವ್ಯವಹಾರವೆಂದೇ ಹೇಳಬೇಕಾಗುತ್ತದೆ. ಅದರ ನಡುವೆ ಹಂಪಿಯಲ್ಲೇ ಇರುವ ವಿಶ್ವವಿದ್ಯಾಲಯದ ಆಸ್ತಿಯನ್ನು ಸಹ ಕಬಳಿಸಲು ಸರಕಾರ ಹೊರಟಿರುವುದು ತೀರಾ ಆಕ್ಷೇಪಾರ್ಹವಾಗಿದೆ. ಇತ್ತೀಚೆಗಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಅಲ್ಲಿ ನೆರೆದಿದ್ದ ವಿಚಾರವಂತ ಸಾಹಿತಿಗಳು ಈ ದುರ್ವ್ಯವಹಾರವನ್ನು ಖಂಡಿಸಿರುವುದು ವರದಿಯಾಗಿದೆ. ರಾಜ್ಯದ ಯಾವ ವಿಶ್ವವಿದ್ಯಾನಿಲಯವಾಗಲಿ, ಅನುದಾನಿತ ಭೂಮಿ ಹೊಂದಿರುವ ಸಂಸ್ಥೆಯಾಗಲಿ, ಇಂತಹ ಕಬಳಿಕೆಗೆ ಸರಕಾರ ಕೈ ಹಾಕಬಾರದು ಎಂದು ಈಗಾಗಲೇ ಒತ್ತಾಯ ಹೇರಲು ಆರಂಭಿಸಿವೆ. ಆದುದರಿಂದ ಈ ವ್ಯವಹಾರವನ್ನು ಈಗಿಂದೀಗಲೇ ಬಿಡಬೇಕೆಂದು ರಾಜ್ಯ ಸರಕಾರವನ್ನು ಒಬ್ಬ ಸ್ವಾತಂತ್ರ್ಯ ಚಳವಳಿಯ ಹೋರಾಟಗಾರ ಮತ್ತು ಪ್ರಜ್ಞಾವಂತ ನಾಗರಿಕನೆಂಬ ನೆಲೆಯಲ್ಲಿ ನಾನು ಒತ್ತಾಯಿಸುತ್ತೇನೆ.

ಮಂಗಳೂರು — **ಬಿ. ವಿ. ಕಕ್ಕಿಲ್ಲಾಯ**
ಮಾಜಿ ಶಾಸಕರು

## ಹಿಂದು, ವೀರಶೈವ ಮತ್ತು ಇತರ ಧರ್ಮಗಳ ನಡುವಿನ ಭೇದಗಳು

'ಹಿಂದು ಧರ್ಮ' ಅಥವಾ 'ಹಿಂದು' ಎಂಬ ಪದಗಳು ವೇದೋಪನಿಷತ್‌ಗಳಲ್ಲಿ ಕಾಣಬರುವುದಿಲ್ಲ. ಪ್ರಾಯಶಃ ಈ ಕಾರಣದಿಂದಲೇ ಸ್ವಾಮಿ ವಿವೇಕಾನಂದರು ''ವೇದೋಪನಿಷತ್‌ಗಳನ್ನು ಅನುಸರಿಸುವವರನ್ನು ವೇದಾಂತಿನ್ ಎಂದು ಕರೆಯುವುದು ಸಮಂಜಸವೆಂದೂ ಹಿಂದು ಎಂದು ಕರೆಯುವುದು ಸೂಕ್ತವಲ್ಲ''ವೆಂದೂ ಹೇಳಿದರು. ಹಿಂದು ಎಂದರೆ ಯಾರೆಂಬುದರ ಬಗ್ಗೆ ಕಾನೂನು ರೀತಿಯ ಅರ್ಥ ವಿವರಣೆ ೨೦ನೇ ಶತಮಾನದ ಮೊದಲನೇ ದಶಕದವರೆಗೆ ಸ್ಪಷ್ಟವಾಗಿರಲಿಲ್ಲ. ಆಗ್ಗೆ ಬ್ರಿಟಿಷರ ವಸಾಹತಾಗಿದ್ದ ಭಾರತಕ್ಕೆ ಇಂಗ್ಲೆಂಡ್‌ನಲ್ಲಿದ್ದ ಪ್ರಿವಿ ಕೌನ್ಸಿಲ್ ಸರ್ವೋಚ್ಚ ನ್ಯಾಯಾಲಯವಾಗಿತ್ತು. ಈ ನ್ಯಾಯಾಲಯವು ಯಜ್ಞಪುರುಷ ದಾಸ್ ಎಂಬುವರ ದಾವೆಯಲ್ಲಿ ಲೋಕಮಾನ್ಯ ಬಾಲ ಗಂಗಾಧರ ತಿಲಕರು ನೀಡಿದ ಹಿಂದು ಅರ್ಥ ವಿವರಣೆಯನ್ನು ಅನುಮೋದಿಸಿತು; ಈ ತೀರ್ಮಾನದಲ್ಲಿ ಹಿಂದು ಮತ್ತು ಇತರ ಧರ್ಮಗಳ ನಡುವೆ ಇರುವ ವ್ಯತ್ಯಾಸಗಳನ್ನು ಮತ್ತು ವಿಶಿಷ್ಟ ಲಕ್ಷಣಗಳನ್ನು ಗುರ್ತಿಸಲಾಯಿತು :

೧. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಿಗೆ ಒಂದೊಂದೇ

ಧರ್ಮ ಗ್ರಂಥಗಳಿವೆ. ಇವು ಕುರಾನ್ ಮತ್ತು ಬೈಬಲ್. ಹಿಂದುಗಳಿಗೆ ಅನೇಕ ಧರ್ಮ ಗ್ರಂಥಗಳಿವೆ. ವೇದೋಪನಿಷತ್‌ಗಳು ಹಾಗೂ ಇತರ ದಾರ್ಶನಿಕ ಗ್ರಂಥಗಳು.

೨. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಿಗೆ ಒಬ್ಬನೇ ದೇವರು. ಹಿಂದುಗಳು ಅನೇಕ ದೇವರುಗಳನ್ನು ನಂಬಿರುತ್ತಾರೆ.

೩. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ವಿಗ್ರಹಾರಾಧನೆಯನ್ನು ಸಮ್ಮತಿಸುವುದಿಲ್ಲ. ಹಿಂದುಗಳು ದೇವರುಗಳ ಮೂರ್ತಿಗಳನ್ನು ಪೂಜಿಸುತ್ತಾರೆ.

೪. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ತಮ್ಮ ಪ್ರವಾದಿಗಳಾದ ಮಹಮದ್, ಜೀಸಸ್ ಅವರ ಪ್ರವಚನಗಳನ್ನು ವೇದವಾಕ್ಯಗಳಂತೆ ಪರಿಗಣಿಸುತ್ತವೆ.

ಇದೇ ರೀತಿಯಲ್ಲಲ್ಲದಿದ್ದರೂ ಹಿಂದುಗಳು ಋಷಿ ಮುನಿಗಳ ಉಪದೇಶಕ್ಕೆ ಮನ್ನಣೆ ನೀಡುತ್ತಾರೆ.

ಮೇಲ್ಕಾಣಿಸಿದ ಆಧಾರದ ಮೇಲೆ ಹಿಂದು ಎಂಬುದನ್ನು ನಿರ್ಧರಿಸುವುದಾದರೆ, ವೇದೋಪನಿಷತ್‌ಗಳನ್ನು ತಿರಸ್ಕರಿಸುವವರು ಹಿಂದುಗಳಾಗುವುದಿಲ್ಲ. ಬೌದ್ಧ, ಜೈನ ಮತ್ತು ವೀರಶೈವ ಧರ್ಮಗಳು ವ್ಯವಸ್ಥಿತ ವೈದಿಕ ಧರ್ಮದ ವಿರುದ್ಧ ಬಂಡಾಯವೆದ್ದವು. ವೈದಿಕ ಧರ್ಮದ ಯಜ್ಞ ಯಾಗಾದಿಗಳನ್ನು ಕಂದಾಚಾರಗಳನ್ನು ಮತ್ತು ಮೂಢನಂಬಿಕೆಗಳನ್ನು ಪ್ರತಿಭಟಿಸಿದವು. ವೈದಿಕ ಧರ್ಮದಿಂದ ದೂರ ಸರಿದವು. ಅಭಿಪ್ರಾಯ ವ್ಯತ್ಯಾಸಗಳು ವಿಪರೀತವಾಗಿದ್ದುವು. ಹೀಗೆ ಜನ್ಮತಾಳಿದ ವೀರಶೈವ ಧರ್ಮ ವೈದಿಕ ಧರ್ಮದಿಂದ ಪ್ರತ್ಯೇಕವಾಗಿ, ಅದರ ವಿರುದ್ಧ ಸೆಟೆದು ನಿಂತಿತು. ಆದರೆ ಭಾರತ ಸ್ವತಂತ್ರವಾದ ನಂತರ ಹಿಂದು ಕಾನೂನುಗಳನ್ನು ಕ್ರೋಡೀಕರಿಸುವಾಗ 'ಹಿಂದು' ಪದದ ಅರ್ಥ ವಿವರಣೆಯಲ್ಲಿ ಬೌದ್ಧ, ಜೈನ ಮತ್ತು ವೀರಶೈವ ಧರ್ಮಗಳನ್ನು ಸೇರಿಸಲಾಯಿತು. ಇದರಿಂದಾಗಿ ವಿವಾಹ, ವಿವಾಹ ವಿಚ್ಛೇದನ, ಆಸ್ತಿ ವಿಭಾಗ, ದತ್ತುಸ್ವೀಕಾರ, ಇಂತಹ ವಿಷಯಗಳಲ್ಲಿ ಹಿಂದು ಕಾನೂನು ಇತರ ಸಿಡಿದೆದ್ದ ಧರ್ಮಗಳಿಗೂ ಅನ್ವಯವಾಯಿತು. ಆದರೆ ಇತರ ಧರ್ಮಗಳು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡಿವೆ. ಈ ಧರ್ಮಗಳಿಗೆ ಸೇರಿರುವವರು ಹಿಂದುಗಳೆಂದು ಹೇಳಿಕೊಳ್ಳುತ್ತಿರುವುದು ಸಹ ಅಪರೂಪ. ತಾತ್ವಿಕವಾಗಿ ವೀರಶೈವರು ಹಿಂದು ಧರ್ಮವನ್ನು ಒಪ್ಪುವಂತಿಲ್ಲ. ವಚನ ಸಾಹಿತ್ಯವೇ ಇದಕ್ಕೆ ಸಾಕ್ಷಿ. ಭಾರತದ ಉಪರಾಷ್ಟ್ರಪತಿಯಾಗಿದ್ದ ಬಿ. ಡಿ. ಜತ್ತಿಯವರು ಒಮ್ಮೆ ವೀರಶೈವರನ್ನು ಪ್ರತ್ಯೇಕವಾಗಿ ಜನಗಣತಿಯಲ್ಲಿ ಕಾಣಿಸಬೇಕೆಂದು ಹೇಳಿದ್ದಂತೆ ನೆನಪು.

*ಬೆಂಗಳೂರು* **ಯು. ಎಸ್. ವೆಂಕಟರಾಮನ್**

### 'ತಾರಾನಾಥ' ಎಂಬ ಪ್ರತಿಮೆ !

ಈ ಹೆಸರು ಅಡ್ಡಹೆಸರಿರಬಹುದೆಂದು, ಗುಮಾನಿಯಿಂದ, ಪ್ರೇಮಾಯತನ ರಾಯಚೂರಿನ ಹಮ್‌ದರ್ದ್ ಮದರಸಾ, ಮಂಗಳೂರಿನ ಶಾಲೆ ಮತ್ತು ಚಿಕ್ಕಮಗಳೂರು – ಅಲ್ಲದೆ ಬೆಂಗಳೂರಿನಲ್ಲಿ ಒಂದೆರಡು ವೈದ್ಯಕೇಂದ್ರಗಳು – ಹೀಗೇ ಕಂಡು ವಿಚಾರ ಮಾಡಬೇಕಾಯಿತು. ನಮ್ಮ ನಡುವೆ ಇರುವ ಮಹಾನ್ ಸರೋದ್ ವಾದಕರಾದ ಶ್ರೀ ರಾಜೀವ ತಾರಾನಾಥರನ್ನು ಕಂಡು ವಿಚಾರ ವಿನಿಮಯ ಮಾಡಿದುದಾಯಿತು – ಒಂದು ವೈದ್ಯಗ್ರಂಥದಲ್ಲೂ 'ಪ್ರೇಮ' ಎಂಬ ತ್ರೈಮಾಸಿಕದಲ್ಲೂ 'ಈ ಮಹಾನ್ ಪ್ರತಿಮೆ'ಯ 'ರುಜು'ವನ್ನು ಕಂಡು ನಿಬ್ಬೆರಗಾಗಿದ್ದೇನೆ –

'ರಂಗಭೂಮಿ' (೧೯೨೫ರಿಂದ) ಸಂಚಿಕೆಗಳನ್ನು ಅಭ್ಯಾಸ ಮಾಡುತ್ತಾಹೋದಂತೆ ಧ್ರುವನಾರಾಯಣರು ಬರೆದಿರುವ ಪಂಡಿತ ತಾರಾನಾಥರ ಜೀವನ ಚರಿತ್ರೆ ಹಾಗೂ ಕಳೆದ ಶತಮಾನದ ಒಂದು ಮಹತ್ವದ ಕೃತಿಯಾದ 'ಧರ್ಮ ಸಂಭವ' ಒಂದು ನಮ್ಮ ಪೂರ್ವಾಪರ ವ್ಯಾಖ್ಯಾನವೆನ್ನಬಹುದಾದ ಕೃತಿ – 'ದೀನಬಂಧು ಕಬೀರ' ಎಂಬ ನಾಟಕ (ಹಿಂದಿ ಮತ್ತು ಕನ್ನಡ ರಚನೆ) ಸನ್ ೧೯೩೬ರಲ್ಲಿ ಗಾಂಧೀಜಿ ಬೆಂಗಳೂರಿಗೆ ಬಂದಿದ್ದಾಗ ಅಭಿನಯವಾಗಿ (ನಂತರವೇ ಅಚ್ಚಾಗಿದೆ) ಮೆಚ್ಚುಗೆ ಗಳಿಸಿದ ಕಾರಣ (!) ಉಳಿದಿರುವಂಥದು. ಇಷ್ಟಲ್ಲದೆ ಇನ್‌ಸಾಫ್ ಎಂಬ ಹಿಂದೀ ನಾಟಕ, ಕನ್ನಡದಲ್ಲಿ ರಚಿತವಾದ ಮೋಹನಾಸ್ತ್ರ ಎಂಬ ಪ್ರಹಸನ, ಇಂಥ ವ್ಯಕ್ತಿತ್ವದ ಹರಕೆಯಿಂದ ಎಂಬಂತೆ ಹೊಸಗನ್ನಡ ಸಾಹಿತ್ಯದ ಸಾಹಿತಿಗಳು – ಇವರ ಮೊದಲ ಕೃತಿಗಳು – ಇಂದಿಗೂ ಒಂದು 'ಆಧಾರ ಪ್ರತಿಮೆ' ಎನ್ನಬಹುದಾದ ತಾರಾನಾಥ ಎಂಬ ವ್ಯಕ್ತಿತ್ವ ಈ ವ್ಯಕ್ತಿತ್ವದ ಬರಿಯ ನೆನಪಾಗಿ ಇರುವುದಕ್ಕಿಂತ ಹೊಸ ವಿಮರ್ಶೆಯ ಬೆಂಬಲ ಎನ್ನಬಹುದಾದ ಒಂದು ವಾಸ್ತವತೆಯ ಸತ್ಯ – ಈ ಲೇಖನಕ್ಕೆ ಕಾರಣವಾಯಿತೆಂದು ಹೇಳಬೇಕಾಗಿದೆ.

ಮುಖ್ಯವಾಗಿ 'ರಂಗಭೂಮಿ'ಯು ಕ್ರಿಯಾಶೀಲವಾಗುವುದಕ್ಕೆ ಬೇಕಾಗಿದ್ದ ಇಂದಿಗೂ ಸತ್ಯವಾಗಿರುವ 'ವಿಮರ್ಶನ' ಇತ್ಯಾದಿ ರಂಗಭೂಮಿಯ ಪರಿಕರ ಸಾಮಗ್ರಿಗಳನ್ನು ಬಳಸುವ ವಿವೇಕ, ಇಂಥ ಅಸ್ಪಷ್ಟವಾದರೂ ಅವಶ್ಯವಾಗಿ ಅಧ್ಯಯನದಿಂದ ಬರುವ 'ಅರಿವು' – ಈ ಬಗೆಯ ಸಂಕೀರ್ಣವಾದುದು – ಒಂದು (?) ಸಮಾಜದ ಪೃಥಕ್ಕರಣವಂತೂ ಇರಲೇಬೇಕಾದ ವಿಶಾಲವೂ ವೈವಿಧ್ಯವೂ ಆಗಿರುವ, ಪರಿಶ್ರಮದಿಂದ ಮಾತ್ರ ರೂಪುತಾಳುತ್ತಾ ಇರುವ ಪ್ರಕ್ರಿಯೆ – ಸಾಮಾಜಿಕವಾದುದು. ಇಷ್ಟೆಲ್ಲಾ 'ನಾಟಕ'ದಲ್ಲಿ ಕ್ರಿಯಾಶೀಲವಾಗಲು ಸಾಧ್ಯವೆನ್ನಿಸುವುದನ್ನು ಕುರಿತಂತೆ ಒಂದು 'ತಾಳ್ಮೆಯ ಪ್ರತಿಮೆ' – ಹೀಗೆ ಒಂದು ವ್ಯಕ್ತಿತ್ವ ಮತ್ತು ಅದನ್ನು ಬೆಂಬಲಿಸುವ ನೆರವಾಗುವ ಒಂದು 'ಸಮಕಾಲಿಕ' – ಮುಂತಾದ ಅಂಶಗಳನ್ನು ಗಮನಿಸಿದಲ್ಲಿ 'ತಾರಾನಾಥ'ರನ್ನು ಅರ್ಥಮಾಡಿಕೊಳ್ಳಲು ಒಂದು ಹಾದಿಯು ಕಂಡುಬರುತ್ತದೆ.

ತಾರಾನಾಥರು ಹುಟ್ಟಿನಿಂದ ಕ್ರಾಂತಿಕಾರಿ, ಮೇಧಾವಿ ಮತ್ತು ಸಾಧಕ ಮನೋಧರ್ಮದ ವ್ಯಕ್ತಿ – ಅಧ್ಯಯನದಲ್ಲಿ ಭೌತವಿಜ್ಞಾನದಿಂದ ಮೊದಲಾದ ಚಿಕಿತ್ಸಾ ಪ್ರವೃತ್ತಿಯ – ಸಾಂಪ್ರದಾಯಿಕ ವೈದ್ಯ ಮತ್ತು ಆಧುನಿಕ ಎಂ.ಬಿ.ಬಿ.ಎಸ್. ವಿದ್ಯೆಯಲ್ಲಿ ಪರಿಶ್ರಮಗಳು – ಸಮಾಜಸೇವೆಯಿಂದಲೇ ಮೊದಲಾದ ಪ್ರವೃತ್ತಿ ಮತ್ತು ಅದರಿಂದಾಗಿ ವಿದೇಶಗಳಲ್ಲಿ ಅಧ್ಯಯನ ಮಾಡಿಬಂದವರ ಸಾಂಗತ್ಯ – ಪಾಶ್ಚಿಮಾತ್ಯ ವಿದ್ಯಾಭ್ಯಾಸದ ಅಧ್ಯಯನ ಕೂಡ ಕೈಗೆಟಕುವ ಭಾಷೆಗಳು, ಪಾರ್ಸೀ, ಉರ್ದು, ಹಿಂದಿ, ಇಂಗ್ಲಿಷ್, ಸಂಸ್ಕೃತ, ತೆಲುಗು, ತಮಿಳು, ಕನ್ನಡ – ಸ್ವಂತಕ್ಕೆನ್ನುವಂತೆ ಯೋಗಾಭ್ಯಾಸ – ಇದರ ಒಂದು ಸ್ವರೂಪವೇ 'ಪ್ರೇಮಾಯತನ' ಎಂಬ ಸಂಸ್ಥೆ. ಸನ್ ೧೯೨೦ರ ಆಜುಬಾಜಿಗೆ ಮೂಡತೊಡಗಿದ 'ಹೊಸಗನ್ನಡ ಸಾಹಿತ್ಯ' ಮತ್ತು ಅದರ ಪ್ರಭೃತಿಗಳು: ಸಾಹಿತಿಗಳು ಮತ್ತು ಕಲಾವಿದರು – ರಂ. ಶ್ರೀ. ಮುಗಳಿ, ದ. ರಾ. ಬೇಂದ್ರೆ, ಕುವೆಂಪು, ಆನಕೃ, ಶ್ರೀರಂಗ, ಸಿ. ಕೃ. ಶರ್ಮ, ಮಾಸ್ತಿ, ಸಂಸ – ಇಂಥ ೪೨ ತರುಣ ಕವಿಗಳು – ಇವರ ಮೊದಮೊದಲ ಕವಿತೆಗಳು ಮತ್ತು ನಾಟಕಗಳು (ವೈಚಾರಿಕ ಪ್ರಬಂಧಗಳು ಕೂಡ) 'ಪ್ರೇಮ' ಎಂಬ ತ್ರೈಮಾಸಿಕ (ತುಂಗಭದ್ರಾ ಸ್ಟೇಷನ್ - ಹೈದರಾಬಾದ್ ಕರ್ನಾಟಕ) ಸನ್ ೧೯೩೦ರ ವೇಳೆಗೆ ಧಾರವಾಡದಿಂದ, 'ರಂಗಭೂಮಿ' – ಬೆಂಗಳೂರು ಮಾಸಿಕ – ಹೀಗೆ ಎಲ್ಲದಕ್ಕೂ ಸೇರಿದಂತೆ ಬೆಂಬಲವಾಗಿ, ತಾರಾನಾಥರು.

ವೈದ್ಯವಿದ್ಯೆಯಲ್ಲಿ ಇಡೀ ಕರ್ನಾಟಕದಲ್ಲಿ ತಾರಾನಾಥರ ಶಿಷ್ಯರು ಇಂದಿಗೂ ಕಂಡುಬರುತ್ತಾರೆ. ಜಾತ್ಯತೀತ ವಿಚಾರವಂತಿಕೆ, ವಿಮರ್ಶೆ ಕೂಡ – ತಾರಾನಾಥರ ನೆನಪು ತರುತ್ತಿದೆ. ಇದಕ್ಕೆ ಅವಶ್ಯವಾದ 'ಧರ್ಮ ಮತ್ತು ಕುಲ' ಎಂಬ ಪೃಥಕ್ಕರಣವನ್ನು 'ಪ್ರೇಮ' (ಸನ್ ೧೯೨೪) – ವಿಚಾರಧಾರೆಯನ್ನಾಗಿ ವಿವರಿಸಲಾಗಿದೆ. 'ಥಾಮಸ್ ಕೆಂಪಿಸ್ ಇನ್ ದಿ ಇಮಿಟೇಷನ್ ಆಫ್ ಕ್ರೈಸ್ಟ್' ಎಂಬ ಕ್ರಾಂತಿಕಾರಿ ಕೃತಿಯು 'ಸದ್ಬೋಧ ಚಂದ್ರಿಕೆ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ.

ತಾರಾನಾಥರನ್ನು ಅರ್ಥಮಾಡಿಕೊಳ್ಳುವುದೆಂದರೆ ಹೊಸಗನ್ನಡ ಸಾಹಿತ್ಯ ಕೃತಿಗಳನ್ನು ಕೂಡಿಸಿ ವಿಚಾರ ಮಾಡುವುದೂ ಎಂದಾಗುತ್ತದೆ – ರಾಷ್ಟ್ರಪ್ರೇಮಕ್ಕೆ ಎತ್ತಿದ ಕೈ – 'ಕನ್ನಡನಾಡ'ನ್ನು ಭಾಷೆಯ ಆಧಾರದಿಂದ ಗುರುತಿಸಿದಂತೆ ಕಲ್ಪಿಸಿದ 'ಭೂಪಟ'ವು ಭಾವುಕವಾಗಿ ರೂಪತಾಳಲು ಪ್ರಯತ್ನಿಸುತ್ತಿದ್ದ ಆಲೂರು ವೆಂಕಟರಾಯರು – ತಾರಾನಾಥರ 'ಧರ್ಮ-ಕುಲ' ಲೇಖನವನ್ನು ಓದಿದವರು ಒತ್ತಾಯಪೂರ್ವಕ ಬರೆಯಿಸಿದ 'ಧರ್ಮಸಂಭವ' ಹೀಗೆ ಇಂದಿನ ಆಧುನಿಕ ರೂಪಗಳಲ್ಲಿರುವ ನಾಟಕ, ಕಾದಂಬರಿ, ಭಾವಗೀತೆ – ಬೇಂದ್ರೆಯವರ 'ಬಾ ಭೃಂಗವೇ ಬಾ' ಎಂಬ ಭಾವಗೀತೆಯು 'ಪ್ರೇಮ' ಕವಿತೆಗಳ ಸುಮಾರು ೧೯೨೬ರಲ್ಲಿ ಆನಕೃ ಸಂಗ್ರಹಿಸಿರಬಹುದಾದ – ಒಂದು ಆ್ಯಂಥಾಲಜಿಯ ಹೆಸರು ಕೂಡ – ಕುವೆಂಪುರ ಮೋಡಣ್ಣನ ತಮ್ಮ ೧೯೨೮. ರಂಗಭೂಮಿ (ಜಲಗಾರ ಮತ್ತು ಚಂದ್ರಹಾಸ ನಾಟಕಗಳು – 'ಯಮನ ಸೋಲು' ಎಂಬ ಕಠೋಪನಿಷತ್ ಆಧರಿಸಿದ ನಾಟಕ) ಇವುಗಳನ್ನು ಕುರಿತಂತೆ ವಿಚಾರಧಾರೆ – ಶ್ರೀರಂಗರ ಮುಕ್ಕಣ್ಣ ವಿರಾಟಪುರುಷ, ಹರಿಜನ್ವಾರ, ಕೈಲಾಸಂರ ಹೋಂರೂಲು, ಆನಕೃರ ಮೊದಲ ಕೃತಿ ಮದುವೆಯೋ ಮನೆಹಾಳೋ ನಾಟಕ – ಇತ್ಯಾದಿ. ಇಂಥ ವ್ಯಕ್ತಿಯನ್ನು ಕೇವಲ 'ವೈದ್ಯರು-ಪಂಡಿತರು' ಎನ್ನುವಂತೆ ಕಾಣಲು ಕಾರಣಗಳು ಕೇವಲ ಉಪಚಾರವೆಂದು ಅನ್ನಿಸುತ್ತಿದೆ.

ಸನ್ ೧೯೩೬ರ ವೇಳೆಗೆ 'ಹಿಂದೀ' ನಾಟಕ ಪರಂಪರೆ ಇಲ್ಲದಾಗ 'ದೀನಬಂಧು ಕಬೀರ' ರಚನೆಯಾಗಿರುವುದನ್ನು ಮರೆಯುವಂತಿಲ್ಲ – ಹೊಸಗನ್ನಡ ನಾಟಕದಲ್ಲಿ ಕುವೆಂಪು ರಚಿತ 'ಯಮನ ಸೋಲು' ತನ್ನ ವಿಶಿಷ್ಟ ಸ್ಥಾನವನ್ನು ತೋರಿಸುತ್ತಿದೆಯಷ್ಟೆ. ಲಂಕೇಶ್ ಮತ್ತು ಡಿ. ಆರ್. ನಾಗರಾಜ ಇವರಿಗೆ ಮೆಚ್ಚುಗೆಯಾದ ಕೃತಿ 'ಧರ್ಮಸಂಭವ' ಎಂದರೆ ಆಶ್ಚರ್ಯವಾಗಬಹುದು – ಇತ್ಯಾದಿ. 'ನಾಟಕ ಮೀಮಾಂಸೆ'ಯನ್ನು ಸನ್ ೧೯೩೪ರಲ್ಲಿ 'ರಂಗಭೂಮಿ' ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ನಾಟಕಕ್ಕೆ ಸಾಮಾಜಿಕತೆಯ ಪ್ರಾಮುಖ್ಯತೆಯನ್ನು ಇದರಲ್ಲಿ ಗುರುತು ಮಾಡಲಾಗಿದೆ. ಆದುದರಿಂದ 'ತಾರಾನಾಥ'ರ ಬಗ್ಗೆ ಇದು ಬರಿಯ ಕಳಕಳಿಯಲ್ಲ ಎಂದು ಕನ್ನಡ ಸಾಹಿತಿಗಳ ಗಮನಕ್ಕೆ ಬರಲೆಂದು. (ಮೇಲೆ ಹೇಳಿದ ಸಾಹಿತಿಗಳ ಯಾವುದೇ ಬಗೆಯ ಪ್ರಭಾವವನ್ನೂ ತಾರಾನಾಥರಲ್ಲಿ ಕಾಣಲು ಸಾಧ್ಯವಾಗಿಲ್ಲ.)

*ಬೆಂಗಳೂರು* **ಕ. ವೆಂ. ರಾಜಗೋಪಾಲ**

### ೨೦೦೦ರ ಬಜೆಟ್‌ನಲ್ಲಿ ಕೃಷಿ ಅಭಿವೃದ್ಧಿ

ಜಾಗತಿಕ ಕುಸಿತದ ಹಿನ್ನೆಲೆಯಲ್ಲಿ ಚೇತರಿಕೆ ಕಾಣುತ್ತಿರುವ ಭಾರತೀಯ ಅರ್ಥವ್ಯವಸ್ಥೆಗೆ ಕೇಂದ್ರ ವಿತ್ತ

ಮಂತ್ರಿಗಳು ಮಂಡಿಸಿರುವ ಬಜೆಟ್ ಕೃಷಿ ಪ್ರಗತಿಗೆ ಯತ್ನಿಸಿದೆಯೆಂದರೆ ತಪ್ಪಾಗಲಾರದು. ಭಾರತೀಯ ಕೃಷಿ ಪ್ರಗತಿಯಲ್ಲಿ ಮಹಿಳಾ ಪಾತ್ರವನ್ನು ಪುಷ್ಟೀಕರಿಸುವ ಅಂಶಗಳನ್ನು ಪ್ರಸ್ತುತ ಬಜೆಟ್ ಒಳಗೊಂಡಿದೆ. ಇದಕ್ಕಾಗಿ ಮಹಿಳಾ ರೈತ ಸಶಕ್ತೀಕರಣ ಪರಿಯೋಜನೆ ೧೦೦ ಕೋಟಿ ರೂಪಾಯಿಗಳ ಪ್ರಾರಂಭಿಕ ಹೂಡಿಕೆಯೊಂದಿಗೆ ಜಾರಿಗೆ ಬರಲಿದೆ. ಕೃಷಿ ಅಭಿವೃದ್ಧಿಗಾಗಿ ನಾಲ್ಕು ಅಂಶಗಳ ಒಂದು ಕಾರ್ಯಸೂಚಿಯನ್ನು ವಿತ್ತಮಂತ್ರಿಗಳು ನೀಡಿದ್ದಾರೆ. ಅದು ಏನೆಂದರೆ, ಕೃಷಿ ಉತ್ಪಾದನೆ ಹೆಚ್ಚಳ, ಪೋಲಾಗುವಿಕೆಯ ನಿಯಂತ್ರಣ, ಸಾಲದ ಬೆಂಬಲ ಹಾಗೂ ಆಹಾರ ಸಂಸ್ಕರಣೆ ಮತ್ತು ಸಾಗುವಳಿ ನಂತರದ ತಾಂತ್ರಿಕತೆ ಸುಧಾರಣೆ. ಕೃಷಿ ಉತ್ಪಾದನೆ ಹೆಚ್ಚಿಸುವ ನಿಟ್ಟಿನಲ್ಲಿ ಕೃಷಿಕರಿಗೆ ಶೇ. ೫ರ ಬಡ್ಡಿದರದಲ್ಲಿ ಬೆಳೆ ಸಾಲ, ಸಕಾಲದಲ್ಲಿ ಬೆಳೆ ಸಾಲ ಮರುಪಾವತಿ ಮಾಡುವ ರೈತರಿಗೆ ಶೇ. ೨ರ ರಿಯಾಯಿತಿ, ಇವು ಬಹುಶಃ ಸಹಕಾರಿಯಾಗಲಿವೆ. ಹಾಗೆಯೇ, ಐದು ಮೆಗಾ ಫುಡ್ ಪಾರ್ಕ್‌ಗಳ ನಿರ್ಮಾಣ ದ್ವಿದಳ ಧಾನ್ಯ ಮತ್ತು ಎಣ್ಣೆಕಾಳು ಉತ್ಪಾದನೆಯನ್ನು ಹೆಚ್ಚಿಸಬಹುದಾಗಿದೆ. ಆದರೆ ಅದು ಕಾರ್ಪೊರೇಟ್‌ಗಳ ವ್ಯವಹಾರ ಮಾತ್ರ. ೨೦೦೮-೦೯ರ ಮಧ್ಯಂತರ ಬಜೆಟ್‌ನಲ್ಲಿ ಕೃಷಿ ಕ್ಷೇತ್ರದ ಯೋಜನಾ ವೆಚ್ಚವನ್ನು ಶೇ. ೩೦೦ರಷ್ಟು ಹೆಚ್ಚಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ತೋಟಗಾರಿಕೆ ರೈತರಿಗೆ ಶೇ. ೧೫ರಷ್ಟು ಹೆಚ್ಚುವರಿ ಸಾಲ ಸೌಲಭ್ಯವನ್ನು ಪ್ರಸ್ತುತ ಬಜೆಟ್ ನೀಡಿದೆ. ಸಕಾಲದಲ್ಲಿ ಸಾಲ ಮರುಪಾವತಿ ಮಾಡಿದ ರೈತರಿಗೆ ಕಳೆದ ಬಜೆಟ್‌ನಲ್ಲಿ ನೀಡಲಾಗಿದ್ದ ಶೇ. ೧ರಷ್ಟು ರಿಯಾಯಿತಿಯನ್ನು ಪ್ರಸ್ತುತ ಬಜೆಟ್‌ನಲ್ಲಿ ಶೇ. ೨ಕ್ಕೆ ಏರಿಸಲಾಗಿದೆ. ಬಿಹಾರ, ಛತ್ತೀಸಗಢ, ಜಾರ್ಖಂಡ್, ಒರಿಸ್ಸಾ, ಉತ್ತರ ಪ್ರದೇಶ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳನ್ನು ಒಳಗೊಂಡಂತೆ ಕೃಷಿ ಹಾಗೂ ತೋಟಗಾರಿಕೆ ಅಭಿವೃದ್ಧಿಗೆ ೪೦೦ ಕೋಟಿ ರೂಪಾಯಿಗಳನ್ನು ಮೀಸಲಿಡಲಾಗಿದೆ.

ಹಸಿರು ಕ್ರಾಂತಿಯನ್ನು ಹಸಿರಾಗಿಡಲು ಪಂಜಾಬ್ ಮತ್ತು ಹರಿಯಾಣ, ಪಶ್ಚಿಮ ಬಂಗಾಳ, ಉತ್ತರ ಪ್ರದೇಶ ರಾಜ್ಯಗಳಿಗೆ ೨೦೦ ಕೋಟಿ ರೂಪಾಯಿಗಳನ್ನು ತೆಗೆದಿರಿಸಲಾಗಿದೆ. ೬೦,೦೦೦ ದ್ವಿದಳ ಧಾನ್ಯ ಮತ್ತು ಎಣ್ಣೆಕಾಳುಗಳ ಗ್ರಾಮಗಳ ವ್ಯವಸ್ಥೆಗಾಗಿ ೩೦೦ ಕೋಟಿ ರೂಪಾಯಿಗಳನ್ನು ಒದಗಿಸಿದ್ದಾರೆ. ಇದರ ಸದ್ಬಳಕೆ ಭಾರತೀಯ ಕೃಷಿ ಸಂಶೋಧನಾ ನಿಗಮ, ಕೃಷಿ ವಿಶ್ವವಿದ್ಯಾನಿಲಯಗಳ ಕಾರ್ಯವೈಖರಿಯನ್ನು ಅವಲಂಬಿಸಿದೆ. ಅಲ್ಲದೆ ೮೦ರ ದಶಕದಲ್ಲಿ ಪ್ರಚುರಪಡಿಸಲಾಗಿದ್ದ ಎಣ್ಣೆಕಾಳು ಮತ್ತು ದ್ವಿದಳ ಧಾನ್ಯ ಕ್ರಾಂತಿಯ ಕನಸು ನನಸಾಗಲಿದೆಯೇ ಎಂದು ಕಾದುನೋಡಬೇಕು.

ಪ್ರೊ॥ ಎಂ. ಎಸ್. ಸ್ವಾಮಿನಾಥನ್ ಹೇಳುವಂತೆ, ವಿತ್ತ ಮಂತ್ರಿಗಳು ಆಹಾರ ಸಂಸ್ಕರಣೆ ಮತ್ತು ಸಾಗುವಳಿ ನಂತರದ ತಾಂತ್ರಿಕತೆ ಬಗ್ಗೆ ವ್ಯಕ್ತಪಡಿಸಿರುವ ಕಾಳಜಿ ತತ್‌ಕ್ಷಣದಲ್ಲಿ ಕಾರ್ಯಾಚರಣೆಗೆ ಬಂದರೆ ಕೃಷಿ ಪ್ರಗತಿ ಸಾಧ್ಯವಾಗಬಹುದು.

ಭಾರತದಲ್ಲಿ ಚಿಲ್ಲರೆ ವ್ಯಾಪಾರವನ್ನು ಮುಕ್ತಗೊಳಿಸಲು ಸೂಕ್ತನೀತಿಯ ಅವಶ್ಯಕತೆಯಿದ್ದು, ಉದ್ಯೋಗ ಪರಿಣಾಮ ವಿಶ್ಲೇಷಣೆ ಆಧಾರದ ಮೇಲೆ ಚಿಲ್ಲರೆ ವ್ಯಾಪಾರವನ್ನು ಮುಕ್ತಗೊಳಿಸಬೇಕಾಗಿದೆ. ೨೦೦೯ರ ಬರಪೀಡಿತ ವರ್ಷವೆನಿಸಿದ್ದಾಗ್ಯೂ ಪಂಜಾಬ್, ಹರಿಯಾಣದ ರೈತರು ನೀರಾವರಿ ಮೂಲಕ ಹೆಚ್ಚಿನ ಅಕ್ಕಿ ಬೆಳೆದದ್ದನ್ನು ಇಲ್ಲಿ ಸ್ಮರಿಸಬಹುದು. ಅದಕ್ಕಾಗಿ ಅವರು ಡೀಸೆಲ್ ಪಂಪ್‌ಗಳ ಬಳಕೆ ಹೆಚ್ಚಿಸಬೇಕಾಗಿದ್ದರಿಂದ ಉತ್ಪಾದನಾ ವೆಚ್ಚ ಅಧಿಕವಾಗಿತ್ತು. ೨೦೦೮-೦೯ರ ಬಜೆಟ್‌ಗೆ ಹೋಲಿಸಿದಾಗ ೨೦೦೯ರ ಬಜೆಟ್‌ನಲ್ಲಿ ಕೃಷಿ ಕ್ಷೇತ್ರಕ್ಕೆ ೧೪,೯೯.೧೩ ಕೋಟಿ ರೂಪಾಯಿಗಳನ್ನು ಅನುದಾನ ನೀಡಲಾಗಿತ್ತು. ಕೃಷಿ ಹಾಗೂ ಸಹಕಾರ ಅನುದಾನವನ್ನು ೨೦೦೯ರ ಬಜೆಟ್‌ನಲ್ಲಿ ೧೦,೬೫೧.೫೧ ಕೋಟಿಗೆ ಮತ್ತು ಕೃಷಿ ಸಂಶೋಧನಾ ಹಾಗೂ ಶಿಕ್ಷಣ ಸಂಸ್ಥೆಗಳಿಗೆ ನೀಡುವ ಅನುದಾನವನ್ನು ೩,೨೪೧.೪೦ ಕೋಟಿ ರೂ.ಗಳಿಗೆ ನಿಗದಿಪಡಿಸಲಾಗಿತ್ತು. ಶೇ. ೭ರ ಬಡ್ಡಿದರದಲ್ಲಿ ನೀಡುತ್ತಿದ್ದ ೩ ಲಕ್ಷ ರೂಪಾಯಿಗಳಷ್ಟು ಸಾಲವನ್ನು ೨೦೦೯ರ ಬಜೆಟ್‌ನಲ್ಲಿ ಮುಂದುವರಿಸಲಾಗಿತ್ತು.

ಪ್ರಸ್ತುತ ಬಜೆಟ್‌ನಲ್ಲಿ ಕೃಷಿ ಕ್ಷೇತ್ರವನ್ನು ಆದ್ಯತಾವಲಯವನ್ನಾಗಿ ಪರಿಗಣಿಸಿರುವ ವಿತ್ತಮಂತ್ರಿಗಳು ಬ್ಯಾಂಕುಗಳು ಈ ಕ್ಷೇತ್ರಕ್ಕೆ ನೀಡುವ ಸಾಲದ ಗುರಿಯನ್ನು ೩.೨೫ ಲಕ್ಷ ರೂಪಾಯಿಗಳಿಂದ ೩.೭೫ ಲಕ್ಷ ಕೋಟಿ ರೂಪಾಯಿಗಳಿಗೆ ಹೆಚ್ಚಿಸಿದ್ದಾರೆ. ಇದರಿಂದ ರೈತರು (ಕಾರ್ಪೊರೇಟ್ ರೈತರು!) ಅಭಿವೃದ್ಧಿ ಧೋರಣೆ ರೂಢಿಸಿಕೊಳ್ಳಲು ಸಹಾಯವಾಗಬಹುದು. ರೈತರ ಸಾಲ ಮರುಪಾವತಿ ಅವಧಿಯನ್ನು ೨೦೧೦ರ ಜೂನ್ ೩೦ರವರೆಗೆ ವಿಸ್ತರಿಸಲಾಗಿದೆ. ಪ್ರಸ್ತುತ ಬಜೆಟ್‌ನಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಹೆಚ್ಚಿಸಿರುವುದು ರೈತ ಪರ ಕ್ರಮಗಳನ್ನು ಕುಂಠಿತಗೊಳಿಸಲಿದೆ. ಈ ಕ್ರಮದಿಂದ ಎಲ್ಲಾ ವರ್ಗದ ಜನರೂ ಅಸಮಾಧಾನಗೊಂಡಿರುವುದೂ ಸತ್ಯವೇ. ಪ್ರಸ್ತುತ ಬಜೆಟ್‌ನಲ್ಲಿನ ಕೃಷಿ ಪರ ಕ್ರಮಗಳು ಫಲ ನೀಡಬೇಕಾದರೆ ಮುಂಬರುವ ಮುಂಗಾರೂ ರೈತನಿಗೆ ವರಪ್ರದವಾಗಬೇಕಿದೆ.

ಹೊಳೆಹೊನ್ನೂರು **ಡಾ॥ ಜೆ. ಜಯಂತಿ**

# ಅಪೂರ್ಣ...



ವಿರಹದ ಬೇನೆಯಿದು
ವಿಷಾನಿಲದಂತೆ
ಎದೆಯೊಳಗೆ ಚುಚ್ಚುತ್ತ
ಹೆಜ್ಜೆಗಳು ತಡವರಿಸುತ್ತ
ಉಣಿಸು-ನಿದ್ದೆ ಅಸಹಜವಾಗಿ
ಪ್ರಾಣದ ಅರ್ಥವೇ ಶೂನ್ಯ

ಶೂನ್ಯದಿಂದ ಪೂರ್ಣಕ್ಕೆ
ಕರೆದೊಯ್ವ ಮುಕ್ತಿಯೇ
ನಿನ್ನ ಕೂಡುವವರೆಗೆ
ಬೇನೆ ನಿರಂತರ
ಹೀಗೇ ಉರಿಯುತ್ತ ದೀಪವಾಗಿ
ತೇಯುತ್ತ ಗಂಧವಾಗಿ
ಒಟ್ಟಾರೆ ಸುತ್ತಲಿಗೆ ಹಾನಿಯಾಗದಂತೆ
ಮುಷ್ಟಿ ಬಿಗಿಹಿಡಿದು ಬದುಕಿಬಿಡಬೇಕು
ಆತ್ಮಹತ್ಯೆ ಮಹಾಪಾಪ
ಏನು ಮಾಡುವುದು ?
ಸಾವು ಕೂಡ ತಾನಾಗಿ ಒಲಿದು ಬರಬೇಕು
ಪ್ರಿಯತಮನಂತೆ.

**ಜ್ಯೋತಿ ಗುರುಪ್ರಸಾದ್**
'ಕಾವೇರಿ', ೧೬ನೇ ತಿರುವು, ತಳ್ಳಾರು ರಸ್ತೆ, ಕಾರ್ಕಳ - ೫೭೪ ೧೦೪

**ರಾಜ್ಯಮಟ್ಟದ ಸ್ಪರ್ಧೆ**

ಜನಪ್ರಿಯ ಪ್ರಕಾಶನವು **ಸ್ನೇಹದ ಬೆಸುಗೆಯಲ್ಲಿ ಸುಮಧುರ ಭಾವ** ಎಂಬ ಕೃತಿ ಹೊರತರಲು ನಿರ್ಧರಿಸಿ, ರಾಜ್ಯಮಟ್ಟದ ಸ್ಪರ್ಧೆ ಏರ್ಪಡಿಸಿದೆ. ಲೇಖಕರಿಂದ ಕತೆ, ಕವನ ಮತ್ತು ವಚನಗಳನ್ನು ಆಹ್ವಾನಿಸಲಾಗಿದೆ. ಕವನಗಳು ೩೦ ಸಾಲುಗಳ ಮಿತಿಯಲ್ಲಿರಬೇಕು. ಕತೆಗಳು ಐದು ಪುಟಕ್ಕೆ ಮೀರದಂತಿರಬೇಕು.

ವಿವರಗಳಿಗೆ ಸಂಪರ್ಕಿಸಿ :
**ಜನಪ್ರಿಯ ಪ್ರಕಾಶನ**
ಅಂಚೆಪೆಟ್ಟಿಗೆ ಸಂಖ್ಯೆ ೬೪, ನಂ. ೬-೪-೩೪
ತೇಲಿ ಗಲ್ಲಿ, ಗವಾನ್ ಚೌಕ್
ಬೀದರ್ - ೫೮೫ ೪೦೧

ಹಂಪಿಯಲ್ಲಿ ಕೃಷ್ಣದೇವರಾಯನ ಪಟ್ಟಾಭಿಷೇಕದ ೫೦೦ನೇ ವರ್ಷದ ಸಮಾರಂಭವನ್ನು ಉದ್ಘಾಟನೆ ಮಾಡುತ್ತಾ ಮಾನ್ಯ ಮುಖ್ಯಮಂತ್ರಿಗಳಾದ ಬಿ. ಎಸ್. ಯಡಿಯೂರಪ್ಪನವರು ಸಂಘ ಪರಿವಾರದ ನಿರ್ದೇಶನದಂತೆ ಕರ್ನಾಟಕ ಸರ್ಕಾರ ಈ ಕಾರ್ಯಕ್ರಮ ಹಮ್ಮಿಕೊಂಡಿರುವುದನ್ನು ಪ್ರಸ್ತಾಪಿಸಿದ್ದಾರೆ. ಸಮಾರೋಪ ಸಮಾರಂಭದಲ್ಲಿ ಐತಿಹಾಸಿಕವಾಗಿ ಮಹತ್ವ ಪಡೆದ ಈ ಉತ್ಸವದ ನೆನಪಿಗಾಗಿ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯವನ್ನು ಬಳ್ಳಾರಿಯಲ್ಲಿ ಶೀಘ್ರವೇ ಸ್ಥಾಪಿಸಲಾಗುವುದು ಎಂದೂ ಪ್ರಕಟಿಸಿದ್ದಾರೆ. ಇದನ್ನೆಲ್ಲ ಗಮನಿಸಿದರೆ, ಬುದ್ಧಿಜೀವಿಗಳು ಮತ್ತು ರಾಜಕಾರಣಿಗಳ ಹಗ್ಗ ಜಗ್ಗಾಟದಲ್ಲಿ ನಿಜದುದಯವು ನಾಪತ್ತೆಯಾಗಿರುವುದು ಸ್ಪಷ್ಟವಾಗುತ್ತದೆ.

ವಿ. ಚಂದ್ರಶೇಖರ ನಂಗಲಿ

# ಶ್ರೀಕೃಷ್ಣದೇವರಾಯರ ಸಾಹಿತ್ಯ ಮತ್ತು ಪ್ರಗತಿ

ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ 'ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು' – ಎಂಬ ಸಾಲ್ಕಾಣಿ ಪುಸ್ತಕದಲ್ಲಿ ಬಾ. ರಾ. ಗೋಪಾಲ ಅವರು (೧) ಮಯೂರ ಶರ್ಮ (೨) ದುರ್ವಿನೀತ (೩) ಪುಲಿಕೇಶಿ (೪) ಎರಡನೇ ವಿಕ್ರಮಾದಿತ್ಯ (೫) ಮೂರನೇ ಕೃಷ್ಣ (೬) ತೈಲಪ (೭) ಆರನೇ ವಿಕ್ರಮಾದಿತ್ಯ (೮) ಬಕ್ಕರಾಯ (೯) ಕೃಷ್ಣದೇವರಾಯ ಇವರನ್ನು ಹೆಸರಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದ ಕೀರ್ತಿಪತಾಕೆ ಮತ್ತು ಸ್ವರ್ಣಯುಗದ ಬಗ್ಗೆ ವಿದೇಶಿ ಪ್ರವಾಸಿಗರ ಮಾತುಗಳನ್ನು ಕೂಡ ಉಲ್ಲೇಖಿಸಿದ್ದಾರೆ. ಕೃಷ್ಣದೇವರಾಯನ ಆಳ್ವಿಕೆಯ ಬಗ್ಗೆ ಖಚಿತ ಮಾಹಿತಿಯನ್ನು ಪಡೆದಿದ್ದರಿಂದಲೇ ಕೊಲಂಬಸ್ ಮುಂತಾದವರು ಸಮುದ್ರ ಮಾರ್ಗದ ಮೂಲಕ ಭೌಗೋಳಿಕ ಸಂಶೋಧನೆಗಳನ್ನು ಕೈಗೊಂಡಿದ್ದರೆಂದು ಆರ್ಟ್ ಆಫ್ ಲಿವಿಂಗ್‌ನ ರವಿಶಂಕರ್ ಗುರೂಜಿ ಹಂಪಿಯ ವೈಭವೋಪೇತ ವೇದಿಕೆಯಿಂದ ಹೇಳಿದ್ದನ್ನು ಟಿ.ವಿ. ನೇರಪ್ರಸಾರ ಮಾಡಿದೆ.

'ಪ್ರಜಾಪ್ರಭುತ್ವ' ಮತ್ತು 'ಪ್ರಜಾನಾಮಕ ಪ್ರಭುತ್ವ' ಎಂಬ ಪರಿಭಾಷೆಗಳನ್ನು ಬಳಸಿ, ಭಾರತದಲ್ಲಿ ಅರವತ್ತು ವರ್ಷಗಳ ನಂತರ ಉಂಟಾಗಿರುವ ಬಿಕ್ಕಟ್ಟುಗಳನ್ನು ಅರ್ಥೈಸಿಕೊಳ್ಳಬಹುದು. ಆಧುನಿಕ ಭಾರತದ ೬೦ ವರ್ಷಗಳ ರಾಜಕೀಯ ಇತಿಹಾಸವನ್ನು ಒಮ್ಮೆ ಪುನರವಲೋಕನ ಮಾಡಿದರೆ, ಪ್ರಜೆಗಳ ಹೆಸರಿನಲ್ಲಿ ನಡೆಸಿರುವ ಸ್ವೇಚ್ಛಾಚಾರಗಳ ದರ್ಶನವಾಗುತ್ತದೆ. ಚುನಾಯಿತ ಸರ್ಕಾರಗಳ ವಜಾಮಾಡಿರುವುದು, ತುರ್ತು ಪರಿಸ್ಥಿತಿಯನ್ನು ಘೋಷಿಸಿರುವುದು, ಬಾಬರಿ ಮಸೀದಿಯನ್ನು ಧ್ವಂಸಗೊಳಿಸಿರುವುದು, ಬಾಳಾತ್ಯಾಕರೆ ಮರಾಠರ ಹೆಸರಿನಲ್ಲಿ ಅಟ್ಟಹಾಸ ಮಾಡುತ್ತಿರುವುದು – ಇವೆಲ್ಲ ಪ್ರಜೆಗಳ ಹೆಸರಿನಲ್ಲೇ! ಪ್ರಜಾಪ್ರಭುತ್ವದ ಕೊರಳಿಗೆ ಉರುಳು ಬಿಗಿದು ಉಸಿರುಕಟ್ಟಿಸಿದ ಉದಾಹರಣೆಗಳಿಗೆ ಲೆಕ್ಕವೇ ಇಲ್ಲ. ಪ್ರಜಾಪ್ರಭುತ್ವವು ಮೇಕೆಯಾಗಿದ್ದರೆ, ಮುಖಂಡರುಗಳೆಲ್ಲ ಕೋತಿಗಳಾಗಿದ್ದಾರೆ. ಕೋತಿಗಳೆಲ್ಲ ಗುಂಪುಗೂಡಿ ಮೊಸರನ್ನ ತಿಂದು ಮೇಕೆಯ ಮೂತಿಗೆ

ಒರೆಸಿದಂತೆ ಪ್ರತಿಯೊಂದು ಸ್ವೇಚ್ಛಾಚಾರಕ್ಕೂ ಜನತೆಯ ಹೆಸರನ್ನು ಮುಂದಿಡಲಾಗುತ್ತಿದೆ. ಪ್ರಜಾಪ್ರಭುತ್ವಕ್ಕೆ ಬದಲು 'ಪ್ರಜಾನಾಮಕ ಪ್ರಭುತ್ವ'ದಲ್ಲಿರುವುದೇ ಈ ಅರವತ್ತು ವರ್ಷಗಳ ಸಾಧನೆಯಾಗಿದೆ. ಆದ್ದರಿಂದ, ರಾಜಪ್ರಭುತ್ವ ಮಿಗಿಲೊ ಪ್ರಜಾಪ್ರಭುತ್ವ ಮಿಗಿಲೊ ಎಂಬ ಪರ-ವಿರೋಧ ಶೈಲಿಯ ಚರ್ಚೆಗಳನ್ನು ಬೆಳೆಸುವುದರಲ್ಲಿ ಅರ್ಥವಿಲ್ಲ. 'ರಾಮರಾಜ್ಯ ಬಂದರೂ ರಾಗಿ ಬೀಸೋದು ತಪ್ಪುವುದಿಲ್ಲ' ಎಂಬ ಗಾದೆಮಾತಿನಲ್ಲಿ ಜನಹಿತದ ಪ್ರಶ್ನೆಯಿರುವುದನ್ನು ಪರಾಮರ್ಶಿಸಬೇಕು. ಕಟ್ಟಿಕೊಂಡ ಚರಿತ್ರೆಗಾಗಿ ಪರಿತಪಿಸದೆ, ಹುಟ್ಟಿಕೊಂಡ ಪ್ರಜೆಗಳಿಗಾಗಿ ಪರಿತಪಿಸಬೇಕು. ಇದಿಷ್ಟು ಹಿನ್ನೆಲೆಯಲ್ಲಿ ಶ್ರೀಕೃಷ್ಣದೇವ ರಾಯನ ವ್ಯಕ್ತಿತ್ವ, ಸಾಹಿತ್ಯ ಮತ್ತು ಪ್ರಗತಿಯನ್ನು ಪರಿಶೀಲಿಸಬೇಕಾಗಿದೆ.




ಶ್ರೀಕೃಷ್ಣದೇವರಾಯ (೧೫೧೦-೧೫೩೦) ನಾಗಲಾಂಬಾ ಮತ್ತು ನರಸಾನಾಯಕರ ಮಗ, ಬಹುಮುಖಿ ಪ್ರತಿಭಾವಂತ. ಅತ್ಯುತ್ತಮ ವ್ಯಾಯಾಮ ಪಟು, ಜಗಜಟ್ಟಿ, ಗಂಡುಗಲಿ, ರಾಜನೀತಿಜ್ಞ, ದಕ್ಷ ಆಡಳಿತಗಾರ, ಮಹಾಕವಿ, ಘನ ವಿದ್ವಾಂಸ, ಕಲಾಪೋಷಕ, ಸಹೃದಯ ಸಾರ್ವಭೌಮ, ಪ್ರಜಾನುರಾಗಿ, ಮಹಾ ಚಕ್ರವರ್ತಿ. ಇಲ್ಲಿ ಬಳಸಿರುವ ವಿಶೇಷಣಗಳೆಲ್ಲ ನಿಜಗುಣಗಳೆಂಬುದನ್ನು ವಿಶೇಷವಾಗಿ ಹೇಳಬಯಸುತ್ತೇನೆ.

ಕೃಷ್ಣದೇವರಾಯ ಎಂಟು ಕೃತಿಗಳನ್ನು ರಚಿಸಿದ್ದಾನೆಂದು ಪ್ರತೀತಿ. (೧) ಮದಾಲಸಾ ಚರಿತ್ರ (೨) ಸತ್ಯಾವಧೂ ಪ್ರೀಣವಮು (೩) ಸಕಲ ಕಥಾಸಾರ ಸಂಗ್ರಹಮು (೪) ರಸಮಂಜರಿ (೫) ಜ್ಞಾನ ಚಿಂತಾಮಣಿ (೬) ಉಷಾಪರಿಣಯಮು (೭) ಜಾಂಬವತೀ ಕಲ್ಯಾಣಮು (ಸಂಸ್ಕೃತ ನಾಟಕ) (೮) ಆಮುಕ್ತಮಾಲ್ಯದ (ತೆಲುಗು ಮಹಾಕಾವ್ಯ).

ಕೃಷ್ಣದೇವರಾಯನ ಆಸ್ಥಾನದಲ್ಲಿ 'ಅಷ್ಟದಿಗ್ಗಜರು' ಇದ್ದರೆನ್ನಲಾಗಿದೆ : (೧) ಅಲ್ಲಸಾನಿ ಪೆದ್ದನ (೨) ನಂದಿತಿಮ್ಮನ (೩) ದೂರ್ಜಟಿ (೪) ಅಯ್ಯಲರಾಜು ರಾಮಭದ್ರ ಕವಿ (೫) ಮಲ್ಲನ (೬) ತೆನಾಲಿ ರಾಮಕೃಷ್ಣ (೭) ಪಿಂಗಳಿಸೂರನ (೮) ರಾಮರಾಜು ಭೂಷಣ ಅಥವಾ ಭಟ್ಟುಮೂರ್ತಿ (ನೋಡಿ : ರಾಳ್ಳಪಲ್ಲಿ ಅನಂತಕೃಷ್ಣಶರ್ಮ). ಈ ಎಂಟು ಹೆಸರುಗಳಲ್ಲಿ ಕೊನೆಯ ಮೂವರು ಕೃಷ್ಣದೇವರಾಯನ ಕಾಲದವರಲ್ಲವೆಂಬ ಅಭಿಪ್ರಾಯವಿದೆ. ಈ ಅಷ್ಟ ದಿಗ್ಗಜರ ಸಾಲಿನಲ್ಲಿ ತಿರುವೇಂಗಡನಾಥ, ಕಂದುಕೂರಿ ರುದ್ರಯ್ಯ, ನೃಸಿಂಹ ಕವಿ, ರಾಧಾ ಮಾಧವ ಕವಿ – ಇವರ ಹೆಸರುಗಳು ಕೇಳಿಬರುತ್ತವೆ. ಇವರೆಲ್ಲರೂ ಸಮಕಾಲೀನರಲ್ಲ ಎಂಬುದು ಸುಸ್ಪಷ್ಟವಾಗಿದೆ.

ಭೂಮಿಯನ್ನು ಎಂಟು ದಿಕ್ಕುಗಳಲ್ಲಿ ಅಷ್ಟ ದಿಗ್ಗಜಗಳು ಹೊತ್ತುಕೊಂಡಿವೆಯೆಂಬುದು ಪುರಾಣ ಪ್ರಸಿದ್ಧವಾಗಿದೆ. ವಿಜಯನಗರ ಸಾಮ್ರಾಜ್ಯವನ್ನು, ಅದರ ಕೀರ್ತಿ ವೈಭವಗಳನ್ನು ಎಂಟು ದಿಕ್ಕಿಗೆ ಹಬ್ಬುವಂತೆ ಕೃತಿಗಳನ್ನು ಕವಿಗಳು ರಚನೆ ಮಾಡಿದ್ದರಿಂದ 'ಅಷ್ಟ ದಿಗ್ಗಜರು' – ಎಂಬ ನಾಣ್ಣುಡಿ ಸುದ್ದಿಯಲ್ಲಿರಬಹುದು. ಕೃಷ್ಣದೇವರಾಯನು ಕವಿ-ಕಾವ್ಯಗಳನ್ನು ಕುರಿತ ಚರ್ಚಾಗೋಷ್ಠಿಗಳಿಗಾಗಿಯೇ ಮೀಸಲಾದ ಸಭಾಭವನವನ್ನು ಕಟ್ಟಿಸಿದ್ದು, ಇದನ್ನು 'ಚತುಶ್ಶಾಲಿಕಾ' – ಎಂದು ಕರೆಯುತ್ತಿದ್ದರು. ರಾಜರು ಕುಳಿತುಕೊಳ್ಳುವ ಆಸನಗಳಿಗೆ 'ಸಿಂಹಪೀಠ'ವೆಂಬ ಹೆಸರಿದ್ದರೆ, ಕವಿಗಳು ಕುಳಿತುಕೊಳ್ಳುವ ಆಸನಗಳನ್ನು 'ಶಂಖಪೀಠ' ಎಂದು ಕರೆಯುತ್ತಿದ್ದರು.

ಕೃಷ್ಣದೇವರಾಯನು ಅಲ್ಲಸಾನಿ ಪೆದ್ದನ ಕವಿಯನ್ನು ಆಂಧ್ರ ಕವಿತಾ ಪಿತಾಮಹನೆಂದು ಕರೆದಿದ್ದಾನೆ. ಅಲ್ಲಸಾನಿ ಪೆದ್ದನನು ಸ್ವಾರೋಚಿಷ ಮನುಸಂಭವಮು ಅಥವಾ ಮನುಚರಿತ್ರ ಎಂಬ ಮಹಾಕಾವ್ಯವನ್ನು ಬರೆದಿದ್ದಾನೆ. ಸುಪ್ರಸಿದ್ಧವಾದ ವರೂಥಿನಿ-ಪ್ರವರಾಖ್ಯರ ಕತೆ ಇಲ್ಲಿದೆ. ನಂದಿತಿಮ್ಮನ 'ಪಾರಿಜಾತಾಪಹರಣಮು' ರಚಿಸಿದ್ದಾನೆ. ಶೈವ ಕವಿಯಾದ ದೂರ್ಜಟಿಯು ಶ್ರೀ ಕಾಳಹಸ್ತೀಶ್ವರ ಶತಕಮು, ಶ್ರೀ ಕಾಳಹಸ್ತಿ ಮಾಹಾತ್ಮ್ಯಮು ಬರೆದಿದ್ದಾನೆ. ಕೃಷ್ಣದೇವರಾಯ ದೂರ್ಜಟಿಯ 'ಅತುಲಿತ ಮಾಧುರೀ ಮಹಿಮೆ' (= ಹೋಲಿಸಲಾಗದ ಮಾಧುರ್ಯ ಗುಣ) ಕುರಿತು ಮುಕ್ತ ಮನಸ್ಸಿನಿಂದ ಕೊಂಡಾಡಿದ್ದಾನೆ. ಪಿಂಗಳಿಸೂರನ 'ರಾಘವ ಪಾಂಡವೀಯಮು' (= ರಾಮಾಯಣ + ಮಹಾಭಾರತಗಳೆರಡೂ ಪ್ರತೀತ ವಾಗುವ ದ್ವ್ಯರ್ಥಕಾವ್ಯ) ಬರೆದಿದ್ದಾನೆ. ಕಳಾಪೂರ್ಣೋದಯಮು, ಪ್ರಭಾವತೀ ಪ್ರದ್ಯುಮ್ನಮು ಎಂಬ ಕಾವ್ಯಗಳನ್ನು ಕೂಡ ಪಿಂಗಳಿ ಸೂರನ ಬರೆದಿದ್ದಾನೆ. ರಾಮರಾಜು ಭೂಷಣನು 'ವಸುಚರಿತ್ರ' ಜೊತೆಗೆ 'ಹರಿಶ್ಚಂದ್ರ ನಳೋಪಾಖ್ಯಾನಮು' ಬರೆದಿದ್ದಾನೆ. ತೆನಾಲಿ ರಾಮಕೃಷ್ಣನು 'ಪಾಂಡುರಂಗ ಮಾಹಾತ್ಮ್ಯಮು, ಉದ್ಭಟಾರಾಧ್ಯ ಚರಿತ್ರಮು' ರಚಿಸಿದ್ದಾನೆ.

...''ಅಗ್ರ ಕವಿಯಾದ ಅಲ್ಲಸಾನಿ ಪೆದ್ದನ ಕವಿಗೆ ಕೃಷ್ಣದೇವರಾಯನು ಸ್ವತಃ ತಾನೆ ಕಾಲು ತೊಳೆದು ಗಂಡ ಪೆಂಡೇರವನ್ನು ತೊಡಿಸುವುದು, ಆತನ ಪಲ್ಲಕ್ಕಿಯನ್ನು ಸ್ವತಃ ತಾನೆ ಹೊರುವುದು, ಆತನು ಎದುರಾದಾಗ ರಾಯನು ಪಟ್ಟದಾನೆಯಿಂದ ಕೆಳಗಿಳಿದು ತನ್ನ ಕೈ ಆಧಾರ ಕೊಟ್ಟು ಅಂಬಾರಿಯ ಮೇಲೆ ಹತ್ತಿಸಿಕೊಳ್ಳುವುದು – ಪ್ರಸಿದ್ಧವಾದ ಐತಿಹ್ಯಗಳಾಗಿವೆ''... (ಆಂಧ್ರುಲ ಸಾಂಘಿಕ ಚರಿತ್ರ, ಸುರವರಂ ಪ್ರತಾಪರೆಡ್ಡಿ, ಓರಿಯಂಟ್ ಲಾಂಗ್ಮನ್). ಅಲ್ಲಸಾನಿ ಪೆದ್ದನನು 'ಮನುಚರಿತ್ರೆ'ಯಲ್ಲಿ ಕೃಷ್ಣದೇವರಾಯನ ಸಹೃದಯತೆಯನ್ನು ವಿಶೇಷವಾಗಿ ಸ್ಮರಿಸಿದ್ದಾನೆ :

೧. ಮನುಚರಿತ್ರಂಬು ಅಂದು ಕುನ್ನವೇಳ ಪಲ್ಲಕಿ ತನ ಕೇಲ ಮೋಸೆ (= ಮನುಚರಿತ್ರೆಯನ್ನು ಎತ್ತಿಕೊಂಡ ವೇಳೆ ಪಲ್ಲಕ್ಕಿಯನ್ನು ತನ್ನ ಕೈಯಲ್ಲಿ ಹೊತ್ತನು)

೨. ಎದುರೈನ ಚೋ ತನ ಮದಕರೀಂದ್ರಮು ಡಿಗ್ಗಿ ಕೇಲೂತ ನಿಚ್ಚಿ ಎಕ್ಕಿಂಚು ಕೊನಿಯೆ (= ಎದುರಾದರೆ ತನ್ನ ಪಟ್ಟದಾನೆಯಿಂದ ಕೆಳಗಿಳಿದು ಕೈ ಆಧಾರವಿತ್ತು ಹತ್ತಿಸಿಕೊಳ್ಳುತ್ತಿದ್ದನು).

ಇದು ರಾಜಪ್ರಭುತ್ವವೊಂದು ಕವಿಯನ್ನು ನಡೆಸಿಕೊಂಡ ರೀತಿ. ಇಂಥ ಒಂದೇ ಒಂದು ಉದಾಹರಣೆ ಪ್ರಜಾಪ್ರಭುತ್ವದ ಈ ಕಾಲದಲ್ಲಿದೆಯೇ ? ಪ್ರಜಾಪ್ರಭುತ್ವದ ಕಾಲದಲ್ಲಿ ನಿರ್ಭಿಡೆಯಿಂದ ನಡೆಯುತ್ತಿರುವ ಜಂಬೂ ಸವಾರಿಗಳು, ಅಡ್ಡಪಲ್ಲಕ್ಕಿಗಳು, ಪಟ್ಟಾಭಿಷೇಕ ಮಹೋತ್ಸವಗಳನ್ನು ನೋಡಿದಾಗ ರಾಷ್ಟ್ರಕವಿ ಕುವೆಂಪು ಅವರಿಗೆ ಯಾರಾದರೂ ಮುಖ್ಯಮಂತ್ರಿಗಳು ಕೃಷ್ಣದೇವರಾಯನಂತೆ ಸಹೃದಯ ಗೌರವವನ್ನು ಸಲ್ಲಿಸಿದ್ದಾರೆಯೇ, ಎಂದು ಪ್ರಶ್ನಿಸಬೇಕಾಗುತ್ತದೆ.

ಕೃಷ್ಣದೇವರಾಯನ 'ಆಮುಕ್ತ ಮಾಲ್ಯದ' ಕೃತಿಯ ಸ್ವರೂಪವನ್ನು ಪರಿಚಯಿಸಿ ಕೊಳ್ಳೋಣ. 'ಆಮುಕ್ತ + ಮಾಲ್ಯ + ದ' ಎಂದರೆ ಧರಿಸಿದ ಹೂಮಾಲೆಯನ್ನು (ಭಗವಂತನಿಗೆ) ಅರ್ಪಿಸುವುದು ಎಂದರ್ಥ ! ಕನ್ನಡದಲ್ಲಿ ಹರಿಹರನು ಕಾವ್ಯ ವಸ್ತುವಿಗಾಗಿ ತಮಿಳುನಾಡಿನ ೬೩ ಪುರಾತನರನ್ನು ಆರಿಸಿಕೊಂಡು, ನೂತನರನ್ನು ಒಳಗೊಂಡಂತೆ ನೂರಾರು ರಗಳೆಗಳನ್ನು ರಚಿಸಿದ್ದಾನೆ. ಇದೇ ರೀತಿಯಲ್ಲಿ ಕೃಷ್ಣದೇವರಾಯನು ತಮಿಳುನಾಡಿನ ೧೨ ಆಳ್ವಾರುಗಳಲ್ಲಿ ಮೊದಲನೆಯವನಾದ ವಿಷ್ಣುಚಿತ್ತನ ಕಥನವನ್ನು ಪ್ರಧಾನವಾಗಿ 'ಆಮುಕ್ತಮಾಲ್ಯದ' ಕೃತಿಯಲ್ಲಿ ನಿರೂಪಿಸಿದ್ದಾನೆ. ತೋಟ ಮಾಲಿಯಾದ ವಿಷ್ಣುಚಿತ್ತನ ಮಗಳು ಗೋದಾದೇವಿ. ಈಕೆಗೆ ಆಂಡಾಳಮ್ಮ ಅಥವಾ ಚೂಡಿ ಕುಡುತ್ತಾಳ್ ಎಂಬ ಹೆಸರುಗಳಿವೆ. ಶ್ರೀರಂಗನಾಥನಿಗಾಗಿ ಕಟ್ಟಿದ ಹೂಮಾಲೆಯನ್ನು ಮೊದಲಿಗೆ ಗೋದಾದೇವಿ ತಾನು ಧರಿಸಿಕೊಂಡು ಸಂತೋಷಪಟ್ಟು ನಂತರ ಶ್ರೀರಂಗನಾಥನಿಗೆ ಕಳುಹಿಸುತ್ತಿದ್ದಳು. ಮಡಿಮೈಲಿಗೆಯನ್ನು ಪಾಲಿಸುವ ಪುರೋಹಿತಶಾಹಿಯ ವಿರುದ್ಧ, ಎಂಜಲು ಭಕ್ತಿಯ ಕತೆಗಳೆಷ್ಟೋ ಇವೆ. ಶಬರಿಯ ಎಂಜಲು ಹಣ್ಣುಗಳಂತೆಯೇ, ಗೋದಾದೇವಿಯ ಎಂಜಲು ಹೂಮಾಲೆಯೂ ಪ್ರಸಿದ್ಧವಾಗಿದೆ. ಕೃಷ್ಣದೇವರಾಯನು 'ಆಮುಕ್ತ ಮಾಲ್ಯದ' ಕೃತಿಯನ್ನು ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಗೆ ಅಂಕಿತ ಮಾಡಿದ್ದಾನೆ. ಈ ಮಹಾಕಾವ್ಯವನ್ನು 'ವಿಷ್ಣುಚಿತ್ತೀಯಮು' – ಎಂದೂ ಕರೆಯುತ್ತಾರೆ. ಇದರಲ್ಲಿ ಎರಡು ಅರ್ಥಗಳಿವೆ : (೧) ವಿಷ್ಣುಚಿತ್ತನ ಮಗಳು ಗೋದಾದೇವಿಯ ಪರಿಣಯವಿರುವುದರಿಂದ ಇದು ವಿಷ್ಣುಚಿತ್ತೀಯಮು. (೨) ಸಹೃದಯರನ್ನು ವಿಷ್ಣುಚಿತ್ತರನ್ನಾಗಿ ಮಾಡುವುದರಿಂದ ಇದು ವಿಷ್ಣುಚಿತ್ತೀಯಮು. ಏಳು ಆಶ್ವಾಸಗಳಿಂದ ಕೂಡಿದ ಈ ಕಾವ್ಯದಲ್ಲಿ ಕೊನೆಯ ಮೂರು ಆಶ್ವಾಸಗಳಲ್ಲಿ ಮಾತ್ರ ವಿಷ್ಣುಚಿತ್ತ – ಗೋದಾದೇವಿಯ ಕತೆಯಿದೆ. ಮೊದಲ ನಾಲ್ಕು ಆಶ್ವಾಸಗಳಿಗೂ ಗೋದಾದೇವಿಗೂ ಯಾವುದೇ ಸಂಬಂಧವಿಲ್ಲ. ಆದರೂ ಈ ಕೃತಿಗೆ 'ಆಮುಕ್ತ ಮಾಲ್ಯದ' ಎಂಬ ಹೆಸರಿತ್ತು ಕೃಷ್ಣದೇವರಾಯ ತನ್ನ ಒಲವನ್ನು ತೋರಿಸಿಕೊಂಡಿದ್ದಾನೆ. ಈ ಕಾವ್ಯದಲ್ಲಿ ಮುಖ್ಯವಾಗಿ ಮೂರು ಉಪಾಖ್ಯಾನಗಳಿವೆ :

೧. ಖಾಂಡಿಕ್ಯ – ಕೇಶಿಧ್ವಜ ಉಪಾಖ್ಯಾನ
೨. ಪಾಂಡ್ಯ – ಯಾಮುನಾಚಾರ್ಯ ಉಪಾಖ್ಯಾನ
೩. ಮಾಲ ದಾಸರಿ (ಹೊಲೆಯ ದಾಸಯ್ಯ) ಉಪಾಖ್ಯಾನ

ಶೈವ ದೊರೆಯಾದ ಪಾಂಡ್ಯನನ್ನು ವೈಷ್ಣವನನ್ನಾಗಿ ಪರಿವರ್ತಿಸುವುದು ಯಾಮುನಾಚಾರ್ಯ ಉಪಾಖ್ಯಾನದಲ್ಲಿದೆ. ಯಾಮುನಾಚಾರ್ಯರ ಮೂಲಕ ಕೃಷ್ಣದೇವರಾಯನು ರಾಜನೀತಿ ಬೋಧೆಯನ್ನು ಅಳವಡಿಸಿದ್ದಾನೆ. ಇದನ್ನು ಲಕ್ಷಿಸಿಯೇ 'ಆಮುಕ್ತ ಮಾಲ್ಯದ'ವನ್ನು ರಾಜನೀತಿಶಾಸ್ತ್ರವೆಂದು (= ತಪ್ಪಾಗಿ) ಕರೆಯುವುದುಂಟು.

'ಆಮುಕ್ತ ಮಾಲ್ಯದ' ಕೃತಿರಚನೆಗೆ ಸಂಬಂಧಪಟ್ಟಂತೆ ಸ್ವಪ್ನ ಪ್ರಸಂಗವೊಂದರ ನಿರೂಪಣೆಯಿದೆ. ಶ್ರೀ ಮಹಾವಿಷ್ಣುವು ಕೃಷ್ಣದೇವರಾಯನ ಕನಸಿನಲ್ಲಿ ಬಂದು ಕಾವ್ಯರಚನೆ ಮಾಡಿ ತನಗೆ ಅರ್ಪಿಸೆಂದು ಹೇಳಿದ್ದಲ್ಲದೆ, ತೆಲುಗಿನಲ್ಲೆ ಬರೆಯಬೇಕೆಂದು ಸೂಚಿಸಿದ್ದಾನೆ :

...ತೆಲುಗಿನಲ್ಲೆ ಅದೇಕೆ ಬರೆಯಬೇಕೆಂದರೆ, ದೇಶವು
ತೆಲುಗು, ದೊರೆಯು ತೆಲುಗು, ಖಂಡ ಸಕ್ಕರೆಯಂಥ
ತೆಲುಗು ನುಡಿಗೆ ಬಹು ಹಿಂದಿನಿಂದಲೂ ದೊರೆಗಳೆಲ್ಲ
ಸೇವೆ ಮಾಡಿದ್ದಾರೆ. ಆದ್ದರಿಂದ ನಾಣ್ನುಡಿಯೇ ಹೇಳುವಂತೆ
ದೇಶಭಾಷೆಗಳಲ್ಲಿ ತೆಲುಗು ಲೇಸು...

ಪಂಪ ಕವಿಯ 'ಮನುಷ್ಯ ಜಾತಿ ತಾನೊಂದೆ ವಲಂ' – ಎಂಬ ನುಡಿಯು ಸರ್ಕಾರಿ ಬಸ್ಸುಗಳಲ್ಲಿ ಸೂಕ್ತಿಯಂತೆ ಬಳಕೆಗೊಂಡಿದೆ. ಇದೇ ರೀತಿ ಕೃಷ್ಣದೇವರಾಯನ ''ದೇಶ ಭಾಷಮ್ಮುಲಂದು ತೆಲುಗು ಲೆಸ್ಸ...'' ಎಂಬ ನುಡಿಯು ಆಂಧ್ರದ ಸರ್ಕಾರಿ ಬಸ್ಸುಗಳಲ್ಲಿ ಸೂಕ್ತಿಯಂತೆ ಬಳಕೆಯಾಗಿದೆ. ತೆಲುಗು ಸಾಹಿತ್ಯಕ್ಕೆ ಪ್ರಥಮ ಬಾರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟಿರುವ ವಿಶ್ವನಾಥ ಸತ್ಯನಾರಾಯಣ ಅವರು 'ಆಮುಕ್ತ ಮಾಲ್ಯದ' – ಕೃತಿಯ ಪ್ರಸ್ತುತತೆಯನ್ನು ಎದೆತುಂಬಿ ಕೊಂಡಾಡಿದ್ದಾರೆ :

...ಆಮುಕ್ತ ಮಾಲ್ಯದ ಗ್ರಂಥವು ಆಂಧ್ರಭಾಷೆಗೆ ಬನಾರಸ್
ರೇಷ್ಮೆಸೀರೆ. ಅದರ ತುಂಬ ಬಂಗಾರದ ಹೂವುಗಳೇ.
ಅದಕ್ಕೆ ಅಗಲವಾದ ಜರಿ ಅಂಚು ಇದೆ. ಈ ಅಂಚೇ
ಮಾಲದಾಸರಿ (= ಹೊಲೆಯ ದಾಸಯ್ಯ) ಕತೆ. ಈ ಗ್ರಂಥ
ದಲ್ಲಿ ಮಾಲದಾಸರಿ ಕತೆಯಿಲ್ಲದಿದ್ದರೆ ಕೃಷ್ಣದೇವರಾಯನು
ಬರಿಯ ಕವಿಯಾಗುಳಿಯುತ್ತಿದ್ದನು. ಮಾಲದಾಸರಿ ಕತೆ
ಯಿಂದಲೇ ಈತನನ್ನು ಮಹಾಕವಿಯೆಂದು ಕರೆಯಬಹುದು...

ಗೋದಾದೇವಿಯ ಚಿತ್ತಗ್ಲಾನಿಯಿಂದ ದುಃಖಿತನಾಗಿರುವ ವಿಷ್ಣುಚಿತ್ತನಿಗೆ ಪರಮೇಶ್ವರನು ಹೇಳಿದ ಕತೆಯೇ ಮಾಲದಾಸರಿ ಕತೆ. ಶಾಪಗ್ರಸ್ತನಾಗಿ ಬ್ರಹ್ಮರಾಕ್ಷಸನಾಗಿದ್ದ ಬ್ರಾಹ್ಮಣನೊಬ್ಬನಿಗೆ ಅಸ್ಪೃಶ್ಯನಾದ ಮಾಲದಾಸರಿಯ ವಿಷ್ಣುಭಕ್ತಿಯಿಂದ ಶಾಪ ವಿಮೋಚನೆಯಾಗುವ ಕತೆಯಿದು. ಮಾಲದಾಸರಿಯು ಪ್ರತಿನಿತ್ಯ ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಕುರುಂಗುಡಿಗೆ ತೆರಳಿ ಅಂಗಳದಲ್ಲಿ ಹೊತ್ತೇರುವವರೆಗೂ ಭಕ್ತಿಯಿಂದ ಹಾಡುತ್ತಾ ಕುಣಿಯುತ್ತಾ ಸಂತೋಷ ಪಡುತ್ತಿದ್ದನು. ಅಸ್ಪೃಶ್ಯನಾದ್ದರಿಂದ ಗುಡಿಯೊಳಗೆ ಪ್ರವೇಶವಿಲ್ಲದೆ, ಪಾನವಟ್ಟದಿಂದ ಹರಿದುಬರುವ ನೀರನ್ನು ಯಾರಿಂದಲಾದರೂ ಕೇಳಿ ಪಡೆದು ಕುಡಿಯುತ್ತಿದ್ದನು. ತನ್ನ ತಂಬೂರಿ ದಂಡೆಯನ್ನು ಮುಂದಕ್ಕೆ ಚಾಚಿ ಅದರ ಮೇಲೆಸೆದ ಪ್ರಸಾದವನ್ನು ತೆಗೆದುಕೊಂಡು ತಿನ್ನುತ್ತಿದ್ದನು. ಇದೇ ಮಾಲದಾಸರಿಯ ವ್ರತ ಮತ್ತು ದಿನಚರಿ.

ಒಮ್ಮೆ ಅರ್ಧರಾತ್ರಿಯಲ್ಲಿ ಬೆದರಿದ ಕೋಳಿಗಳ ಕೂಗಿನಿಂದ ಎಚ್ಚತ್ತು, ಬ್ರಾಹ್ಮೀ ಮುಹೂರ್ತವೆಂಬ ಭ್ರಾಂತಿಯಿಂದ ಎದ್ದು ಕುರುಂಗುಡಿಗೆ ತೆರಳುತ್ತಿರುವಾಗ ದಾರಿಯಲ್ಲಿ ಮರುಳು ಬಳ್ಳಿಯನ್ನು ತುಳಿದು, ದಿಕ್ಕುತಪ್ಪಿ ಕಾಡುಪಾಲಾಗಿ ಬ್ರಹ್ಮರಾಕ್ಷಸನಿಗೆ ಆಹಾರವಾಗಿ ಸಿಕ್ಕಿಕೊಳ್ಳುತ್ತಾನೆ. ಇಲ್ಲಿಂದಾಚೆಗೆ ಕತೆ ಕನ್ನಡದ ಗೋವಿನ ಹಾಡಿನೊಂದಿಗೆ ಹೋಲುತ್ತದೆ.

ಹುಲಿ ಅರ್ಬುದ ಮತ್ತು ಹಸು ಪುಣ್ಯಕೋಟಿಯಂತೆಯೇ ಬ್ರಹ್ಮರಾಕ್ಷಸ ಮತ್ತು ಮಾಲದಾಸರಿಯ ಸಂವಾದವಿದೆ. ಕೊನೆಗೆ ಬ್ರಹ್ಮರಾಕ್ಷಸನು ತನಗೆ ಸುಲಭವಾಗಿ ಸಿಕ್ಕಿದ ಆಹಾರವಾದ ದಾಸರಿಯನ್ನು ಮಾತುಪಡೆದು ನಿತ್ಯನೇಮಕ್ಕಾಗಿ ಬಿಟ್ಟುಬಿಡುತ್ತಾನೆ. ಮಾಲದಾಸರಿ ಎಂದಿನಂತೆ ಕುರುಂಗುಡಿಯಲ್ಲಿ ಭಕ್ತಿಯಿಂದ ಹಾಡಿ ಕುಣಿದು ನಿತ್ಯನೇಮ ಪೂರೈಸಿ, ಬ್ರಹ್ಮರಾಕ್ಷಸನ ಬಳಿಗೆ ಹಿಂದಿರುಗುತ್ತಾನೆ.

ಮಾಲದಾಸರಿಯ ಸತ್ಯನಿಷ್ಠೆಯನ್ನು ಕಂಡು ಬೆರಗಾಗುವ ಬ್ರಹ್ಮರಾಕ್ಷಸ ಈತನ ಮಹಾನುಭಾವತ್ವವನ್ನು ಅರಿತುಕೊಂಡು ಆತನು ಗಳಿಸಿದ ಪುಣ್ಯದಲ್ಲಿ ಕನಿಷ್ಠ ಈ ಒಂದು

## ಹಂಪಿ ವಿ.ವಿ.ನಿಲಯದ ಭೂಮಿ : ಎಚ್ಚರ ಇರಬೇಕು

ಇಡೀ ರಾಜ್ಯದ ಪ್ರಾಜ್ಞರನ್ನು ಮತ್ತು ಸಾಮಾನ್ಯ ಜನರನ್ನು ಕಳೆದ ಕೆಲವು ದಿನಗಳಿಂದ ಪ್ರತಿಭಟನೆಗೆ ಪ್ರಚೋದಿಸಿದ್ದ ಹಂಪಿ ವಿ.ವಿ.ನಿಲಯದ ಭೂಮಿ ಪರಭಾರೆಯ ಪ್ರಶ್ನೆಯನ್ನು ಕೈಬಿಡಲಾಗಿದೆ ಎಂದು ಮುಖ್ಯಮಂತ್ರಿಗಳು ಘೋಷಿಸಿರುವುದು ಸಮಾಧಾನ ತಂದಿದೆ. ಆದರೆ ಇದು ಕೇವಲ ಹೇಳಿಕೆಯಾಗಿ ಉಳಿಯಬಾರದು. ಕಾರ್ಯತಃ ವಿಜಯನಗರ ಸಾಮ್ರಾಜ್ಯ ಪುನಶ್ಚೇತನ ಪ್ರತಿಷ್ಠಾನದ ಹೆಸರಿನಲ್ಲಿ ಬಳ್ಳಾರಿ ಜಿಲ್ಲೆಯ ಗಣಿ ಭೂಮಿ ಕಬಳಿಕೆದಾರರು ಸರಕಾರದ ರಕ್ಷಣೆಯಲ್ಲಿ ಅಮೂಲ್ಯ ನೈಸರ್ಗಿಕ ಸಂಪತ್ತನ್ನು, ಅರಣ್ಯ ಭೂಮಿ ಮತ್ತು ಕೃಷಿ ಭೂಮಿ ಇತ್ಯಾದಿಗಳನ್ನು ಕಬಳಿಸದಂತೆ ಪಾರದರ್ಶಕ ಕ್ರಮಗಳನ್ನು ಮುಖ್ಯಮಂತ್ರಿಗಳು ವಿಧಾನಸಭೆಯಲ್ಲಿ ಘೋಷಿಸಬೇಕೆಂದು ಒತ್ತಾಯಿಸುತ್ತೇನೆ. ಜನರಿಗೆ ಕನ್ನಡ ಭಾಷೆ, ಸಂಸ್ಕೃತಿ, ನಾಡುಗಳ ಅಭಿವೃದ್ಧಿ ಆಗಬೇಕೆಂಬ ಆಸಕ್ತಿ ಇದೆ. ಆ ಕಾರ್ಯವನ್ನು ಆರಂಭದಿಂದ ಈವರೆಗೆ ನಡೆಸುತ್ತಾ ಬಂದಿರುವ ಹಂಪಿ ವಿ.ವಿ.ನಿಲಯಕ್ಕೆ ಹೆಚ್ಚಿನ ಭೂಮಿ, ಅನುದಾನಗಳು ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ನೆರವು ಮೊದಲಾದವುಗಳನ್ನು ನೀಡುವುದಲ್ಲದೆ ಆ ವಿ.ವಿ.ನಿಲಯವು ಒಂದು ಸ್ವಾಯತ್ತ ಸಂಸ್ಥೆಯಾಗಿ ಕೆಲಸ ಮಾಡುವುದಕ್ಕೆ ಅವಕಾಶ ಮಾಡಿಕೊಡುವಂತೆ ಮಾನ್ಯ ಮುಖ್ಯಮಂತ್ರಿಗಳನ್ನು ನಾನು ಒತ್ತಾಯಿಸುತ್ತೇನೆ. ಮುಖ್ಯಮಂತ್ರಿಗಳ ಹೇಳಿಕೆ ಪ್ರಾಮಾಣಿಕವಾಗಿದ್ದರೆ ಅವರು ಬಳ್ಳಾರಿಯ ಗಣಿಗಾರಿಕೆಗೆ ಸಂಬಂಧಿಸಿದ ಭೂಹಗರಣಗಳ ಬಗ್ಗೆ ಜಸ್ಟಿಸ್ ಯು. ಎಲ್. ಭಟ್ ಅವರ ತನಿಖಾ ಆಯೋಗವು ನಡೆಸುತ್ತಿದ್ದ ವಿಚಾರಣೆಯನ್ನು ನಿಲ್ಲಿಸಿ ಅದನ್ನು ಮುಂದುವರಿಸುವುದಕ್ಕೆ ಕರ್ನಾಟಕ ಲೋಕಾಯುಕ್ತಕ್ಕೆ ಒಪ್ಪಿಸಲಾಗಿದೆಯಷ್ಟೆ. ಲೋಕಾಯುಕ್ತವು ಈಗಾಗಲೇ ತನಿಖೆ ಮುಗಿಸಿ ಸರಕಾರಕ್ಕೆ ನೀಡಿರಬಹುದಾದ ವರದಿಯನ್ನು ಸರಕಾರವು ತಡಮಾಡದೆ ಸ್ವೀಕರಿಸಿ, ಅದರನ್ವಯ ಎಲ್ಲ ಅಪರಾಧಿಗಳ ಮೇಲೆ ಕ್ರಮ ಜರುಗಿಸಲು ಸೂಕ್ತ ನ್ಯಾಯಾಲಯಗಳಿಗೆ ಒಪ್ಪಿಸಬೇಕೆಂದು ಮುಖ್ಯಮಂತ್ರಿಗಳನ್ನು ನಾನು ಒತ್ತಾಯಿಸುತ್ತೇನೆ. ಅವರ ಇತ್ತೀಚೆಗಿನ ಕಾರ್ಯಕಲಾಪಗಳನ್ನು ಮತ್ತು ನಡೆನುಡಿಗಳನ್ನು ವೀಕ್ಷಿಸಿದಾಗ ಅವರು ಬಳ್ಳಾರಿ ಮೂಲದ ಭೂ ಕಬಳಿಕೆದಾರರ ಮತ್ತು ಗಣಿ ಕಬಳಿಕೆದಾರರ ಅಂಕಿತ ಮೀರಿ ವರ್ತಿಸುವ ಶಕ್ತಿ ಮತ್ತು ಧೈರ್ಯವನ್ನು ಹೊಂದಿಲ್ಲ ಎಂದು ಕಂಡುಬರುತ್ತದೆ. ಮುಖ್ಯಮಂತ್ರಿಗಳಾಗಿ ಅಂತಹ ದುಷ್ಟ ಶಕ್ತಿಗಳನ್ನು ಹದ್ದುಬಸ್ತಿಗೆ ತರುವ ಧೈರ್ಯವನ್ನು ತಳೆದು ತನಗಿರುವ ಅಧಿಕಾರವನ್ನು ಪ್ರಯೋಗಿಸಬೇಕೆಂದು ಸಾರ್ವಜನಿಕರು ಅಪೇಕ್ಷಿಸುತ್ತಾರೆ. ಕರ್ನಾಟಕದ ಜನ ನಾಡಿನ ನೆಲ, ಜಲ, ಅರಣ್ಯ ನೈಸರ್ಗಿಕ ಸಂಪತ್ತುಗಳನ್ನು ಕಾಪಾಡುವುದಕ್ಕೆ ಮತ್ತು ಅಭಿವೃದ್ಧಿಪಡಿಸುವುದಕ್ಕೆ ಸುಸಂಘಟಿತ ಹೋರಾಟಕ್ಕೆ ಸಿದ್ಧರಾಗಬೇಕೆಂದು ಕನ್ನಡದ ಜನತೆಗೆ ಈ ಸಂದರ್ಭದಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಅದೊಂದೇ ಇಂದಿನ ಸಮಸ್ಯೆಗಿರುವ ಪರಿಹಾರ.

– ಬಿ. ವಿ. ಕಕ್ಕಿಲ್ಲಾಯ
ಮಂಗಳೂರು

ವಿಗದ ಪುಣ್ಯವನ್ನಾದರೂ ಕೊಟ್ಟರೆ ತನಗೆ ಶಾಪ ವಿಮೋಚನೆಯಾಗುವುದೆಂದು ನಿವೇದಿಸಿಕೊಳ್ಳುತ್ತಾನೆ. ಮಾಲದಾಸರಿ ತಾನೆಂದು ಹಾಡಿದ ಕೈಶಿಕೀಗಾನ ಫಲದಿಂದ ಬ್ರಹ್ಮರಾಕ್ಷಸನ ದೇಹವಳಿದು ತುಷವ ನೀಗಿದ ತಂಡುಲದಂತೆ ಸೋಮಶರ್ಮ ಕಾಣಿಸುತ್ತಾನೆ.

ಸಾಮಾಜಿಕವಾಗಿ ಅಂಚುಗಳಲ್ಲಿರುವ ಕೀಳುಜಾತಿಯ ಜನಸಮುದಾಯಗಳಿಗೆ ಆಧುನಿಕ ಕಾಲದಲ್ಲಿ ಪ್ರಾಪ್ತಿಯಾಗಿರುವ ಪುನರ್ಜನ್ಮವನ್ನು ಲಕ್ಷ್ಯದಲ್ಲಿಟ್ಟುಕೊಂಡರೆ, ಕ್ರಿ. ಶ. ೧೬ನೇ ಶತಮಾನದಲ್ಲೇ ಕೃಷ್ಣದೇವರಾಯನು ತೋರಿದ ಸಾಮಾಜಿಕವಾದ ಮುಂಗಾಣ್ಕೆಗೆ ಮಾಲದಾಸರಿಯ ಕತೆ ಉತ್ತಮ ನಿದರ್ಶನವಾಗಿದೆ.

ವರ್ಣೋತ್ತಮನಾದ 'ಭೂಸುರ'ನೊಬ್ಬನ ಶಾಪ ವಿಮೋಚನೆಯನ್ನು ವರ್ಣಾಧಮನಾದ ಹೊಲೆಯ ದಾಸಯ್ಯನಿಂದ ಮಾಡಿಸಿರುವುದನ್ನು (= ತಮಿಳಿನ ಆಳ್ವಾರು ಕತೆಯ ಕಥನವಾಗಿದ್ದರೂ) ಕೃಷ್ಣದೇವರಾಯನ ಸಾಮಾಜಿಕ ಮುಂಗಾಣ್ಕೆಗೆ ಉದಾಹರಿಸಬಹುದು. ಪಿ. ಲಂಕೇಶ್ ಅವರ 'ಮುಟ್ಟಿಸಿಕೊಂಡವನು' ಎಂಬ ಸಣ್ಣಕತೆಯನ್ನಿಲ್ಲಿ ನೆನಪು ಮಾಡಿಕೊಳ್ಳಬಹುದು. ಅಸ್ಪೃಶ್ಯನಾದ ಡಾಕ್ಟರ್‌ಅನ್ನು ಮುಟ್ಟಿಸಿಕೊಂಡು ಉಳಿದೊಂದು ಕಣ್ಣನ್ನು ಮರಳಿ ಪಡೆದುಕೊಳ್ಳುವ ವರ್ಣೋತ್ತಮನಂತೆಯೇ, ಹೊಲೆಯ ದಾಸಯ್ಯ ಕತೆಯಲ್ಲಿ ಸೋಮಶರ್ಮನೆಂಬ ಭೂಸುರನು ತನ್ನ ಜಾತಿ ಪ್ರತಿಷ್ಠೆಯನ್ನು ತೊರೆದು ಹೊಲೆಯ ದಾಸಯ್ಯನ ಕಾಲಮೇಲೆ ಬಿದ್ದು ಅವನಿಂದ ಮುಟ್ಟಿಸಿಕೊಂಡು 'ಮುಕ್ತ'ನಾಗುವುದು ಪುರಾಣೋಕ್ತ ಭಕ್ತಿಕತೆಯಂತಿದ್ದರೂ ಹೃದ್ಯವಾಗಿದೆ.

ಯಾಮುನಾಚಾರ್ಯರ ಕತೆಯಲ್ಲಿರುವ ರಾಜನೀತಿಯ ಸಾರವನ್ನು ಸಂಕ್ಷೇಪಿಸಿ ಮುಖ್ಯಾಂಶಗಳನ್ನು ಮಾತ್ರ ಕೊಡಲಾಗಿದೆ :

೧. ರಾಜನು ತನ್ನ ದೇಹಾರೋಗ್ಯದ ಬಗ್ಗೆ ಕಾಳಜಿ ಉಳ್ಳವನಾಗಿರಬೇಕು. ಸಮರ್ಥ ವೈದ್ಯರ ಸಲಹೆ ಮತ್ತು ಪ್ರತಿನಿತ್ಯ ಅಂಗಸಾಧನೆಯಿಂದ ದೇಹವನ್ನು ದೃಢವಾಗಿಟ್ಟುಕೊಳ್ಳಬೇಕು.

೨. ಉತ್ತಮರಾದ ಪಂಡಿತರು, ಆಡಳಿತದಲ್ಲಿ ಸಮರ್ಥರು, ಉಚಿತಾನುಚಿತ ವಿವೇಕಿಗಳೂ, ರಾಜ್ಯ ಹಿತಾಕಾಂಕ್ಷಿಗಳೂ ಆದ ಸುಬುದ್ಧಿಯ ಬ್ರಾಹ್ಮಣರನ್ನು ಮಂತ್ರಿಗಳನ್ನಾಗಿ ಇಟ್ಟುಕೊಳ್ಳಬೇಕು. ದುಷ್ಟಬುದ್ಧಿಯ ಬ್ರಾಹ್ಮಣರನ್ನು ಇಟ್ಟುಕೊಳ್ಳಬಾರದು. ದುಷ್ಟಬುದ್ಧಿಯವರಿಂದ ರಾಜನೂ ಪ್ರಜೆಗಳೂ ಹಾಳಾಗುವುದರಿಂದ, ಸ್ವಂತ ವಿವೇಚನಾಶಕ್ತಿಯು ಮೇಲು.

೩. ಗೂಢಚಾರರು ರಾಜನಿಗೆ ಕಣ್ಣು ಮತ್ತು ಕಿವಿಗಳಿದ್ದಂತೆ! ಇದು ರಾಜ್ಯ ನಿರ್ವಹಣೆಯ ಧೀಮಂತಿಕೆಗೆ ನಿದರ್ಶನವಾಗಿದೆ. ಇವರಿಗೆ ಹೆಚ್ಚು ಧನವನ್ನು ಕೊಟ್ಟು ರಕ್ಷಿಸಬೇಕು.

೪. ರೈತ ಮತ್ತು ರಾಜನ ಅಭೇದ ಕಲ್ಪನೆ. ರೈತನ ಜಮೀನು ನಿರ್ವಹಣೆ ಮತ್ತು ರಾಜನ ರಾಜ್ಯ ನಿರ್ವಹಣೆ ಎರಡೂ ಒಂದೇ. ಹೊರಗಣ ಶತ್ರುಗಳು ಮತ್ತು ಒಳಗಣ ಶತ್ರುಗಳಿಂದ ರೈತನು ಬೆಳೆಯ ಭೂಮಿಯನ್ನು ರಕ್ಷಿಸುವಂತೆ ರಾಜನು ಸಾಮ್ರಾಜ್ಯವನ್ನು ರಕ್ಷಿಸಬೇಕು. ಮುಂದೊದಗುವ ಅನಾಹುತಗಳನ್ನು ಲಕ್ಷಿಸಿ ಎಚ್ಚರಿಕೆಯಿಂದ ಕಾದುಕೊಂಡಿರಬೇಕು.

೫. ರಾಜ್ಯ ಮಧ್ಯದಲ್ಲಿ ಕಾಡುಗಳಿರಬಾರದು. ಇವು ಶತ್ರುಗಳ ಅಡಗುದಾಣಗಳಾಗಿ ನಿತ್ಯ ಕಿರುಕುಳ ನೀಡುತ್ತವೆ. ಕಾಡುಗಳು ರಾಜ್ಯದ ಗಡಿಗಳಾಚೆ ಇರಬೇಕು. ಈ ಕಾಡುಗಳನ್ನು ಒತ್ತುವರಿ ಮಾಡಿಕೊಂಡು ಬೆಳೆದು ತಿನ್ನಲು ಬಡಜನರನ್ನು ಪ್ರೋತ್ಸಾಹಿಸಬೇಕು. ಬೆಳೆಯ ಭೂಮಿಯನ್ನು ರಕ್ಷಿಸಿಕೊಳ್ಳುವ ಬಡಜನರೇ ರಾಜ್ಯಕ್ಕೆ ಜೀವಂತ ಬೇಲಿಯಾಗುವರು.

೬. ಅಡವಿ ಜನರು ಕೋಪಿಷ್ಠರು ಮತ್ತು ಧರ್ಮಿಷ್ಠರು. ಅವರ ಬಳಿ ನ್ಯಾಯಬದ್ಧವಾಗಿ ನಡೆದುಕೊಂಡರೆ ನಮಗಾಗಿ ಪ್ರಾಣವನ್ನೇ ಕೊಡುವರು. ಯುದ್ಧ ಕಾಲದಲ್ಲಿ ರಾಜರು ಇವರ ನೆರವನ್ನು ಪಡೆಯಬಹುದು.

೭. ರಾಜನು ಪಟ್ಟಕ್ಕೆ ಬಂದಕೂಡಲೆ ಮೊದಲಿಗೆ ಸುಭದ್ರವಾದ ಸೈನ್ಯವನ್ನು ಕಟ್ಟಿಕೊಳ್ಳಬೇಕು. ಸೈನ್ಯದ ಪೂರ್ವ ತಯಾರಿ ಮತ್ತು ಸೈನ್ಯದ ನಿಯಂತ್ರಣಗಳೆರಡೂ ರಾಜನಿಗೆ ಬಹುಮುಖ್ಯ. ಆತುರದಿಂದ ಎಲ್ಲ ಕಾರ್ಯಗಳು ಕೆಡುತ್ತವೆ.

೮. ದೇಶದಲ್ಲಿ ಕೆರೆಗಳನ್ನು ಕಟ್ಟಿಸಲು ಶ್ರಮಿಸಬೇಕು. ಇದರಿಂದ ರಾಜ್ಯಕೋಶಗಳ ಅಭಿವೃದ್ಧಿ ಮತ್ತು ಪ್ರಜಾಭ್ಯುದಯಗಳೆರಡೂ ಸಿದ್ಧಿಸುವುವು.

೯. ನೈಸರ್ಗಿಕ ವಿಕೋಪಗಳಿಗೆ ಸ್ಪಂದಿಸುತ್ತಾ ಪ್ರಜೆಗಳ ಯೋಗಕ್ಷೇಮವನ್ನು ಸದಾ ನೋಡಿಕೊಳ್ಳುತ್ತಿರಬೇಕು.

೧೦. ಪರದೇಶಗಳೊಡನೆ ವಾಣಿಜ್ಯ ವ್ಯವಹಾರ ಹೆಚ್ಚಿಸಬೇಕು. ಕುದುರೆಗಳು, ಆನೆಗಳು, ಫಿರಂಗಿಗಳು, ಬಂದರುಗಳನ್ನು ಅಭಿವೃದ್ಧಿಪಡಿಸುತ್ತಿರಬೇಕು.

೧೧. ಶತ್ರು ಸ್ತ್ರೀಯರನ್ನು ತನ್ನ ಮನೆಯ ಸ್ತ್ರೀಯರಂತೆಯೇ ಆದರಿಸಿ, ಗೌರವಿಸಬೇಕು. ಅವಮಾನಗೊಳಿಸಬಾರದು.



೧೨. ಶತ್ರುರಾಜ ದೂತರನ್ನು ಆದರದಿಂದ ನೋಡಬೇಕು. ಅವರೊಡನೆ ಕಠಿಣ ನುಡಿಗಳನ್ನು ಆಡಬಾರದು.

೧೩. ನ್ಯಾಯಬದ್ಧ ಶಿಕ್ಷೆಯಿಂದ ಯಾವ ಪಾಪವೂ ಬರುವುದಿಲ್ಲ. ಅಪರಾಧಿಗಳಿಗೆ ಕನಿಕರ ತೋರಬಾರದು. ನಿರಪರಾಧಿಗಳಿಗೆ ಶಿಕ್ಷೆಯಾಗಬಾರದು. ತಿಳಿಯದೆ ಮಾಡಿದ ಪಾಪಗಳು ದಾನ ಧರ್ಮಾದಿಗಳಿಂದ ಹೊರಟುಹೋಗುತ್ತವೆ.

ಮೇಲೆ ವಿವರಿಸಿದ ಎಷ್ಟೋ ಅಭಿಪ್ರಾಯಗಳು 'ರಾಜ ಪ್ರಭುತ್ವ' ಮತ್ತು 'ಪ್ರಜಾಪ್ರಭುತ್ವ' ಎಂಬ ಪರಿಭಾಷೆಗಳನ್ನು ಮೀರಿ, ಜನಹಿತವನ್ನು ಗುರಿಯಾಗಿಟ್ಟುಕೊಂಡಿರುವುದು ಸುಸ್ಪಷ್ಟವಾಗಿದೆ. ರಾಯಲಸೀಮೆಯ ಕೆರೆಗಳನ್ನು ಕುರಿತು ಸರ್ ಥಾಮಸ್ ರೊ ಹೇಳಿದ ಮಾತುಗಳನ್ನು ಮನನ ಮಾಡಿದರೆ, ರಾಯನ ಆಳ್ವಿಕೆ ಮತ್ತು ಜನ ಹಿತಾಕಾಂಕ್ಷೆಗಳೇನೆಂಬುದು ಅರಿವಾಗುತ್ತದೆ : ''ಈ ಪ್ರಾಂತ್ಯದಲ್ಲಿ ಹೊಸ ಕೆರೆಗಳನ್ನು ಕಟ್ಟಲು ಪ್ರಯತ್ನಿಸುವುದು ವ್ಯರ್ಥ ಪ್ರಯತ್ನ. ಪ್ರಶಸ್ತವಾದ ಪ್ರತಿಯೊಂದು ಸ್ಥಳದಲ್ಲೂ ಪೂರ್ವಕಾಲದಲ್ಲೆ ಕೆರೆಗಳನ್ನು ಕಟ್ಟಿದ್ದಾರೆ. ಕಡಪ ಜಿಲ್ಲೆಯ ಒಂದು ತಾಲೂಕಿನಲ್ಲೆ ೩೫೭೪ ಚದರ ಮೈಲಿ ವಿಸ್ತೀರ್ಣದೊಳಗೆ ೪೮೯೪ ಕೆರೆಗಳಿವೆ.''

ಕೊನೆಯದಾಗಿ, ಕವಿರಾಜಮಾರ್ಗದಲ್ಲಿರುವ ಕಾವೇರಿಯಿಂದ ಗೋದಾವರಿವರೆಗಿರ್ದ ಕನ್ನಡನಾಡು ಮತ್ತು ತೆಲುಗಿನ ಮಹಾಕವಿಗಳಾದ ಶ್ರೀನಾಥ, ಅಲ್ಲಸಾನಿ ಪೆದ್ದನ ಹೇಳಿರುವ ಮತ್ತು ವಿಜಯನಗರ ಶಾಸನಗಳಲ್ಲಿರುವ ಕನ್ನಡ ಸಾಮ್ರಾಜ್ಯ ಲಕ್ಷ್ಮಿ, ಕನ್ನಡ ವಲ್ಲಭ, ಕರ್ನಾಟಕ ರಾಜ್ಯ ರಮಾರಮಣ ಮುಂತಾದ ನುಡಿಗಳನ್ನು ಕುರಿತು ಒಂದು ಸ್ಪಷ್ಟೀಕರಣದ ಅಗತ್ಯವಿದೆ. ಈ ಎಲ್ಲ ನುಡಿಗಳು ಕ್ರಿ. ಶ. ೯ನೇ ಶತಮಾನದಿಂದ ಹಿಡಿದು ೧೬ನೇ ಶತಮಾನದವರೆಗೆ ಪ್ರಯೋಗವಾಗಿವೆ. ೨೦ನೇ ಶತಮಾನದಲ್ಲಿ ಪ್ರಕಟಗೊಂಡ ಕರ್ನಾಟಕ ಏಕೀಕರಣ ಚಳುವಳಿ ಮತ್ತು ಭಾಷಾವಾರು ಪ್ರಾಂತ್ಯರಚನೆಗಳು ಇದಕ್ಕೆ ಮೊದಲು ಅಸ್ತಿತ್ವಕ್ಕೆ ಬಂದಿರಲಿಲ್ಲ. ಒಂದು ಹೊಸ ವಸ್ತು ಮತ್ತು ಹೊಸ ವಿಚಾರದೊಂದಿಗೆ ಒಂದು ಹೊಸ ಪದ ಬರುವುದರೊಂದಿಗೆ, ಈಗಾಗಲೇ ಇರುವ ಪದಗಳ ಅರ್ಥವ್ಯಾಪ್ತಿ ಬದಲಾಗುವುದು ಅತ್ಯಂತ ಸಹಜಕ್ರಿಯೆ. ಮೊಬೈಲ್ ಎಂಬ ಹೊಸ ವಸ್ತುವಿನ ಜೊತೆಗೆ ಮೊಬೈಲು ಎಂಬ ಪದ ಕನ್ನಡಕ್ಕೆ ಬಂದಿದೆ. ಹಾಗೆಯೇ ಏಕೀಕರಣ ಚಳುವಳಿಯಿಂದ ಕರ್ನಾಟಕ ಎಂಬ ಪದ ಮತ್ತು ಭಾಷಾವಾರು ಪ್ರಾಂತ್ಯರಚನೆಯಿಂದ ಕನ್ನಡನಾಡು ಎಂಬ ಪದಗಳ ಅರ್ಥವ್ಯಾಪ್ತಿ ಹೆಚ್ಚು ಖಚಿತಗೊಂಡಿದೆ. ಇಂಥ ವಿಚಾರಗಳೇ ಇಲ್ಲದ ಕವಿರಾಜಮಾರ್ಗ ಮತ್ತು ಕೃಷ್ಣದೇವರಾಯನ ಕಾಲದ ಕನ್ನಡನಾಡು, 'ಕನ್ನಡ ಸಾಮ್ರಾಜ್ಯ', 'ಕರ್ನಾಟಕ ರಾಜ್ಯ'ವೆಂಬ ಪದಗಳ ಅರ್ಥವ್ಯಾಪ್ತಿ ತುಂಬ ವಿಶಾಲವಾದುದು. ಇದರಲ್ಲೆ ಹಲವು ಭಾಷೆಗಳ ಕೂಡಲಸಂಗಮವಿದೆ. ಆಗ ಕನ್ನಡ-ತೆಲುಗು ಎಂಬ ಪ್ರಾದೇಶಿಕವಾದ ಪ್ರತ್ಯೇಕ ಭಾವನೆಗಳಿರಲಿಲ್ಲ. ಆದ್ದರಿಂದ, ಭಾವುಕರಾಗಿ ಕನ್ನಡ ದ್ರೋಹಿ, ತೆಲುಗು ದ್ರೋಹಿ ಮುಂತಾದ ಮಾತುಗಳನ್ನಾಡುವುದು ಆಚಾರವಿಲ್ಲದ ನಾಲಗೆಯಾಗಿಬಿಡುತ್ತದೆ. ಕೃಷ್ಣದೇವರಾಯ ಮೊಬೈಲ್ ಬಳಸುವುದು ಹೇಗೆ ಸಾಧ್ಯವಿರಲಿಲ್ಲವೋ ಹಾಗೆಯೇ ಕನ್ನಡ ದ್ರೋಹಿಯಾಗುವುದು ಕೂಡ ಸಾಧ್ಯವಿರಲಿಲ್ಲವೆಂಬುದನ್ನು ಅರಿತುಕೊಳ್ಳಬೇಕು.

ಎ. ಚಂದ್ರಶೇಖರ ನಂಗಲಿ
ನಂ. ೧೬, 'ಶ್ರೀಗೌರಿ', ೪ನೇ ಅಡ್ಡರಸ್ತೆ ಕನಕನಗರ
ಹೊಸಕೋಟೆ - ೫೬೨ ೧೧೪, ಬೆಂಗಳೂರು ಗ್ರಾಮಾಂತರ

# ಬಂಗಾಳದ ಬಾವುಲರ ಸಂಗದಲ್ಲಿ

ಚಿತ್ರ-ಲೇಖನ
ರಹಮತ್ ತರೀಕೆರೆ

ಠಾಕೂರ್ ಮತ್ತು ಗಾಯಕರ ಜೊತೆಗೆ ಲೇಖಕ

ನನಗೆ ಬಂಗಾಳದ ಬಾವುಲರನ್ನು ನೋಡಬೇಕೆಂಬ ಇರಾದೆ ಬಹಳ ದಿನಗಳಿಂದ ಇತ್ತು. ಈ ಬಾವುಲರು ದುಂಬಿಗಳಂತೆ ಮಧುರವಾಗಿ ಹಾಡುವ ಜನಪದ ಅನುಭಾವಿಗಳು. ಸೂಫಿಗಳ ಸೋದರ ಸಂಬಂಧಿಗಳು. ಸೂಫಿ ಸಂಗೀತ ಸಭೆಗಳಾದ 'ಮೆಹಫಿಲೆ ಸಮಾ'ಗಳಲ್ಲಿ ಭಾಗವಹಿಸಿರುವ ನನಗೆ ಬಾವುಲರ ಸಂಗೀತಗೋಷ್ಠಿಗಳಲ್ಲಿ ಕುಳಿತುಕೊಳ್ಳುವ ಆಸೆಯಿತ್ತು. ಅದು ಈ ಸಲದ ಬಂಗಾಲ ಪ್ರವಾಸದಲ್ಲಿ ಈಡೇರಿತು.

ಬೀರಭೂಮ್ ಜಿಲ್ಲೆ ಬಾವುಲರ ನೆಲೆಮನೆ. ಇದು ರವೀಂದ್ರನಾಥ ಟಾಗೂರರು ಕಟ್ಟಿದ ಶಾಂತಿನಿಕೇತನ ಇರುವ ಜಿಲ್ಲೆ ಕೂಡ. ಶಾಂತಿನಿಕೇತನ ಟಾಗೂರರ ಕನಸಿನ ಕೂಸು. ಪಶ್ಚಿಮದ ವಿದ್ಯಾಭ್ಯಾಸ ಪಡೆದ ಟಾಗೂರರು ಬ್ರಿಟಿಶರ ಶಿಕ್ಷಣ ಪದ್ಧತಿಗೆ ಪರ್ಯಾಯವಾದ ಕಲಿಕಾ ವ್ಯವಸ್ಥೆ ಕಟ್ಟಲು ಯತ್ನಿಸಿದವರು. ದೇಶೀಯತೆ ಕಲ್ಪನೆಯಲ್ಲೇ ಮೈತಳೆದಿರುವ ಕನ್ನಡ ವಿಶ್ವವಿದ್ಯಾಲಯದಲ್ಲಿರುವ ನನಗೆ, ಶಾಂತಿನಿಕೇತನ ಕುರಿತು ಕುತೂಹಲವಿತ್ತು. ಒಂದು ಬೆಳಿಗ್ಗೆ ಹೌರಾದಿಂದ ನಸುಕಿನಲ್ಲಿಯೇ ಹೊರಡುವ ಗಣದೇವತಾ (ಬಂಗಾಳಿಗಳ ಬಾಯಲ್ಲಿ 'ಗೊಣೊದೇವೊತಾ') ಎಕ್ಸ್‌ಪ್ರೆಸ್ ರೈಲಿನಲ್ಲಿ ನಾನು ಮತ್ತು ಬಾನು ಬೋಲ್ಪುರಕ್ಕೆ ಹೊರಟೆವು. ಬೋಲ್ಪುರ ಪಟ್ಟಣದ ಹೊರವಲಯದಲ್ಲಿ ಶಾಂತಿನಿಕೇತನವಿದೆ. ಸ್ಟೇಶನ್ನಿನಲ್ಲಿ ಇಳಿದು, ಸೈಕಲ್ ರಿಕ್ಷಾ ಹತ್ತಿ ಶಾಂತಿನಿಕೇತನಕ್ಕೆ ಹೋದೆವು. ಮಿತ್ರರಾದ ಬೆಂಗಳೂರಿನ ಕಲಾವಿದ ಜಿ. ಜಯಕುಮಾರ್, ಶಾಂತಿನಿಕೇತನದಲ್ಲಿರುವ ತಮ್ಮ ಗೆಳೆಯರಾದ ರತಿ ಮತ್ತು ಪ್ರೊಫುಲ್ಲೊ ದೊತ್ತೊ ಎಂಬುವರಿಗೆ ಪತ್ರ ಬರೆದು, ಬಾವುಲರನ್ನು ನೋಡಲು ನಮಗೆ ನೆರವಾಗಬೇಕೆಂದು ಸೂಚಿಸಿದ್ದರು. ಶಾಂತಿನಿಕೇತನದಲ್ಲಿ 'ಅಡವಿ ಮರದಡಿಯಲ್ಲಿ' ಮಕ್ಕಳು ಕೂತು ಕಲಿಯುವ ಪದ್ಧತಿ ನೋಡಲು ಖುಷಿಯಾಗುತ್ತದೆ. ಗ್ರಾಮೀಣ ಭಾಗದಲ್ಲಿ ತಾಳೆಮರಗಳ ನಡುವೆ ಥಳುಕು ಬಳುಕಿಲ್ಲದೆ ಸರಳವಾಗಿ ಶಾಂತಿನಿಕೇತನವಿದೆ. ಆದರೂ ರವೀಂದ್ರರ ಆರಾಧನೆ ಇಲ್ಲಿ ಯಾಂತ್ರಿಕವಾಗಿದೆಯೆಂದೂ, ಅವರ ಆದರ್ಶದ ಚಿತ್ರಗಳೆಲ್ಲ ಬಣ್ಣಗೆಟ್ಟು ಸಪ್ಪಗಾಗಿವೆಯೆಂದೂ ಭಾಸವಾಗುತ್ತಿತ್ತು. ಎಲ್ಲ ಕನಸಿನ ಸಂಸ್ಥೆಗಳು ತಮ್ಮ ಹಳೆಯ ಆದರ್ಶವನ್ನು ಸಾಂಕೇತಿಕವಾಗಿ ಇಟ್ಟುಕೊಂಡು, ಗತಕಾಲದ ನೆನಪುಗಳಲ್ಲಿ ಬದುಕುತ್ತ ಒಳಗೇ ಬದಲಾಗುತ್ತಿರುತ್ತವೆಯಷ್ಟೆ.

ಅದಿರಲಿ, ಬೀರಭೂಮ್ ಪ್ರದೇಶದ ಬಾವುಲ್ ಗಾಯಕರು ಶಾಂತಿನಿಕೇತನದಲ್ಲಿ ಸೇರಿ ಹಾಡುವ ಒಂದು ಮೇಳ ನಡೆಯುತ್ತದೆ. ಇಲ್ಲಿಗೆ ಸಮೀಪವಿರುವ ಕೆಂಧೂಲ್ ಎಂಬಲ್ಲಿ ಕೂಡ ಮಧ್ಯಕಾಲದ 'ಗೀತಗೋವಿಂದ' ರಚಿಸಿದ ಜಯದೇವ ಕವಿಯ ಹೆಸರಲ್ಲಿ ಬಾವುಲ್ ಮೇಳ ನಡೆಯುತ್ತದೆ. ನಾವು ಹೋಗುವ ಹೊತ್ತಿಗೆ ಈ ಎರಡೂ ಮೇಳಗಳು ಮುಗಿದಿದ್ದವು. ಟಾಗೂರರ ಕಾವ್ಯ ಮತ್ತು ಸಂಗೀತಗಳ ಮೇಲೆ ಬಾವುಲರ ಗಾಢವಾದ ಪ್ರಭಾವವಿದೆ. ಬಂಗಾಳದ ಹಳ್ಳಿಗಳಲ್ಲಿ ವಾಸ ಮಾಡಿದ್ದ ಅವರು ಮನುಷ್ಯಕೇಂದ್ರಿತ ದರ್ಶನವನ್ನು ರೂಪಿಸಿಕೊಂಡಿದ್ದೇ ಬಾವುಲರ ಸಹವಾಸದಿಂದ. ಇದನ್ನು ಟಾಗೂರರು ಬರೆದುಕೊಂಡೂ ಇದ್ದಾರೆ. ಬಂಗಾಳಿ ಸಾಹಿತ್ಯ, ತತ್ವಶಾಸ್ತ್ರ, ಸಂಗೀತ, ಅನುಭಾವ ಯಾವುದನ್ನೂ ಬಾವುಲರನ್ನು ಬಿಟ್ಟು ಚರ್ಚೆ ಮಾಡುವುದು ಕಷ್ಟ.

ರತಿ ಮತ್ತು ಪ್ರೊಫುಲ್ಲೊ ದತ್ತೊ ನಾವು ಹೋದಾಗ ಮರದಡಿಯಲ್ಲಿ ಹಾಸಿರುವ ಕಲ್ಲುಕಟ್ಟೆಗಳಲ್ಲಿ ಕುಳಿತು ಚಿತ್ರಕಲೆಯ ಪಾಠ ಹೇಳುತ್ತಿದ್ದರು. ನಮ್ಮನ್ನು ಬರಮಾಡಿಕೊಂಡು, ಕ್ಯಾಂಟೀನಿನಲ್ಲಿ ಕೇರಳದ ಕಟ್ಟಂಚಾಯ್ ತರಿಸಿ ಕುಡಿಸಿದರು. ಬಾವುಲರಿರುವ ಹಳ್ಳಿಗಳ ಹೆಸರನ್ನು ಹೇಳಿದರು. ಕೊನೆಗೆ ''ಅವರ ಜತೆ ಬೆರೆಯುವಾಗ ಹುಷಾರಾಗಿರಿ. ಅವರಲ್ಲಿ ಕೆಲವರು ಕ್ರಿಮಿನಲ್ಸ್ ಇರುವುದುಂಟು. ಭಂಗಿ ಸೇವಿಸಿದಾಗ ವಿಚಿತ್ರವಾಗಿ ವ್ಯವಹರಿಸುತ್ತಾರೆ'' ಎಂದು ಎಚ್ಚರಿಸಿ, ನಮ್ಮ ಆಕರ್ಷಣೆಗೆ ಆತಂಕದ ಅಂಚು ಜೋಡಿಸಿದರು. ಆದರೆ ನಾಥರ ಮತ್ತು ಜಲಾಲಿ ಫಕೀರರ ಬಳಕೆ ನನಗೆ ಸಾಕಷ್ಟಿದ್ದುದರಿಂದ ಅಂತಹ ಕಳವಳವಾಗಲಿಲ್ಲ.

ಸೈಕಲ್ ರಿಕ್ಷಾದಲ್ಲಿ ಶಾಂತಿನಿಕೇತನದ ಬಗಲಲ್ಲೇ ಇರುವ ಶಾಂಭಾಟಿ ಎಂಬ ಜಾಗಕ್ಕೆ ಹೊರಟೆವು. ಅದು ಈ ಭಾಗದ ಪ್ರಸಿದ್ಧ ಗಾಯಕ ಬಸುದೇವದಾಸ್ ಬಾವುಲ್ ಎಂಬುವರ ಮನೆಯಿರುವ ಜಾಗ. ನಾವು ಹೋದಾಗ ಸಂಜೆಯಾಗುತ್ತಿತ್ತು. ಅದೊಂದು ಊರ ಕೊನೆ. ತಗ್ಗುಪ್ರದೇಶದಲ್ಲಿ ಇರುವ ಗುಡಿಸಲು. ಬಂಗಾಳಿ ಮತ್ತು ಇಂಗ್ಲಿಷಿನಲ್ಲಿ ''ಬಸುದೇವದಾಸ್

ಬಸುದೇವ್ ಭಾರತದ ಅನೇಕ ಕಡೆ
ಹೋಗಿಬಂದಿದ್ದಾರೆ. ಆದರೂ ಅವರು
ಇರುವುದು ಗುಡಿಸಲಿನಲ್ಲಿ, ಸೈಕಲ್
ಇಟ್ಟುಕೊಳ್ಳುವಷ್ಟು ಸ್ಥಿತಿವಂತರಾಗಿದ್ದಾರೆ.
ನಮ್ಮ ಧಾರ್ಮಿಕ ಕಲೆಗಳಿಗೂ
[illegible] ಎಂಥದೋ ಒಂದು
[illegible]
[illegible]
[illegible]
[illegible]
ಬೆಂಗಳೂರಿಗೆ [illegible] ರೈಲಿನಲ್ಲಿ
[illegible]
[illegible]
[illegible]
[illegible]
[illegible] ನೋಡುತ್ತಿದ್ದರು.
[illegible] ಹಾಕಿಕೊಂಡು
ಯಾವುದೋ ಸಂಗೀತ ಕೇಳುತ್ತಿದ್ದರು.
ಅವರ ಜತೆ ಹರಟುತ್ತ ನಾನು ಬಾವುಲರ
[illegible]
[illegible]
[illegible]



ನೃತ್ಯ ಹಾಡು ನಿರತ ಬಾವುಲ ಗಾಯಕರು

ಬಾವುಲ್, ಶ್ಯಾಮಭಾಟಿ, ಸುಭಾಷ್ ಪಲ್ಲಿ, ಶಾಂತಿನಿಕೇತನ ಅಂಚೆ, ಬೀರ್‌ಭೂಂ ಜಿಲ್ಲೆ'' ಎಂಬ ಬೋರ್ಡು ಕಾಣಿಸಿತು. ವಾಸದ ಗುಡಿಸಲಿನ ಮಗ್ಗುಲಲ್ಲಿ ಹಾಡಿಕೆಗೋ ಯೋಗಸಾಧನೆಗೋ ಗುಪ್ತಾಚರಣೆಗಳಿಗೋ ಕಟ್ಟಿದ ಇನ್ನೊಂದು ವೃತ್ತಾಕಾರದ ಕುಟೀರವಿತ್ತು. ನುಣುಪಾಗಿ ಸಾರಿಸಿದ ಅಂಗಳ ತೊಳೆದ ತಟ್ಟೆಯಂತಿತ್ತು. ನಾವು ತಿರುಗಾಡಿದ ಬಂಗಾಳದ ಬಹುತೇಕ ಹಳ್ಳಿಗಳಲ್ಲಿ ಹೀಗೆಯೇ ಚಂದದ ಅಂಗಳಗಳಿದ್ದವು. ನಮ್ಮ ಹಸಲರ ಮತ್ತು ಹಾಲಕ್ಕಿಗಳ ಮನೆಯಂಗಳಗಳೂ ಹೀಗೇ ಇರುತ್ತವೆ. ಬಹುಶಃ ಬುಡಕಟ್ಟು ಜನರು ಮನೆಯ ಹೆಚ್ಚು ಹೊತ್ತನ್ನು ಅಂಗಳಗಳಲ್ಲಿ ಕಳೆಯುವುದಕ್ಕೂ ಈ ಸಾರಣೆಯ ಚಂದಕ್ಕೂ ಸಂಬಂಧವಿರಬೇಕು.

ನಾವು ಬಿದಿರ ಗೇಟು ತೆಗೆಯುವ ಸಪ್ಪಳಕ್ಕೆ ಒಬ್ಬ ಮಹಿಳೆ ಹೊರಬಂದರು. ಆಕೆ ಬಸುದೇವರ ಮಡದಿ. ಕುಟೀರದಲ್ಲಿ ಜಮಖಾನೆ ಹಾಸಿ 'ಬಶೂನ್ ಬಶೂನ್' ಎಂದು ಕೂರಿಸಿ ''ಅವರು ಈಗ ಒಂದು ಕಾರ್ಯಕ್ರಮಕ್ಕೆ ಹೋಗಲು ರೆಡಿಯಾಗುತ್ತಿದ್ದಾರೆ. ನಿಮ್ಮ ಜತೆ ಮಾತಾಡಲು ಸಮಯವಿದೆಯೊ ಇಲ್ಲವೊ'' ಎಂದು ಹೇಳಿದರು. ಆಕೆ ಬಂಗಾಳಿ ಮಿಶ್ರಿತ ಹಿಂದಿಯಲ್ಲಿ ಮಾತಾಡುತ್ತಿದ್ದರು. ನಡುನಡುವೆ ಇಂಗ್ಲಿಷ್ ಶಬ್ದಗಳು ನುಸುಳುತ್ತಿದ್ದವು. ಇದಕ್ಕೆ ಶಾಂತಿನಿಕೇತನದಲ್ಲಿ ಇಂಗ್ಲಿಷ್ ಮಾತಾಡುವ ಭಾರತದ ಬೇರೆಬೇರೆ ಪ್ರಾಂತ್ಯದ ಜನ ನೆಲೆಸಿರುವುದೊ, ಈಕೆ ನಗರ ಪ್ರದೇಶಗಳಿಗೂ ಹೋಗಿ ಕಾರ್ಯಕ್ರಮ ಕೊಟ್ಟಿರುವುದೊ ಕಾರಣವಿರಬೇಕು. ಒಟ್ಟಿನಲ್ಲಿ ಅಪಾರ ಜೀವನೋತ್ಸಾಹ ತುಂಬಿದ ಮಹಿಳೆ.

ಕುಟೀರದೊಳಗೆ ಕಾಳಿವಿಗ್ರಹವಿತ್ತು. ಅದರ ತಲೆಯ ಮೇಲೆ ಕೆಂಪು ದಾಸವಾಳದ ಹಾರ. ರಾಧಾಕೃಷ್ಣರ ಮೂರ್ತಿಗಳಿದ್ದವು. ಅವುಗಳ ಮುಂದೆ ನಿಶ್ಚಲ ಬೆಳಗುತ್ತಿರುವ ನೀಲಾಂಜನ. ಗೋಡೆಯ ಮೇಲೆ ತೂಗಿಬಿಟ್ಟ ಏಕತಾರ. ಅವಧೂತನೊಬ್ಬನ ದೊಡ್ಡಪಟ. ತ್ರಿಶೂಲ ಹಿಡಿದು ಕುಳಿತ ಸಾಧುವಿನ ಇನ್ನೊಂದು ಪಟ. ನಡುವೆ ಶಿವಲಿಂಗ. ಅದರ ಬದಿ ನೆಟ್ಟ ತ್ರಿಶೂಲ. ಗೋಡೆಗೆ ನೇತುಹಾಕಿರುವ ಬಗೆಬಗೆಯ ಬಾವುಲ್ ವಾದ್ಯಗಳು. ಬಸುದೇವ್ ಹಾಡುತ್ತಿರುವ ಫೋಟೊ. ಒಟ್ಟಿನಲ್ಲಿ ಕುಟೀರವು ಯಾವುದೊ ತಾಂತ್ರಿಕ ಸಾಧಕನ ಕೋಣೆಯಂತಿದ್ದು ಸಣ್ಣಗೆ ತಲ್ಲಣ ಹುಟ್ಟಿಸುವಂತಿತ್ತು.

ಅಷ್ಟರಲ್ಲಿ ಕಾವಿ ನಿಲುವಂಗಿಯನ್ನುಟ್ಟು ಉದ್ದನೆಯ ಕೂದಲು ಬಿಟ್ಟ ಕುಳ್ಳನೆಯ ಬಸುದೇವ್ ಬಂದರು. ನಾನು ಕರ್ನಾಟಕದವನೆಂದೂ ಬಾವುಲ್ ಗಾಯಕರನ್ನು ನೋಡಲು ಬಂದಿರುವೆನೆಂದೂ ಹೇಳಿ ನಮಸ್ಕರಿಸಿದೆ. ಬಸುದೇವ್ ''ಭಾಲೊಭಾಲೊ'' ಎಂದು ಹೇಳಿದರು. ಬಾವುಲರ ಬಗ್ಗೆ ನನಗೆ ತಿಳಿಸಿಕೊಡಬೇಕು ಎಂದು ಕೇಳಿದೆ: ''ನೋಡಿ. ನಾವು ಗುಡಿ ಮಸೀದಿಗಳಿಗೆ ಹೋಗುವವರಲ್ಲ. ವಿಗ್ರಹಾರಾಧನೆ ಮಾಡುವವರಲ್ಲ. ಜಾತಿಪದ್ಧತಿ ಒಪ್ಪುವವರಲ್ಲ. ನಮ್ಮ ಪ್ರಕಾರ ಎಲ್ಲ ಮನುಷ್ಯರೂ ಒಂದೇ. ನಾವು ಮಾನುಷ್ ಆರಾಧಕರು. ನಮ್ಮ ಅಂತರಾತ್ಮನೇ ನಮ್ಮ ಠಾಕೂರ್'' ಎಂದು ತಿಳಿಸಿದರು. ನಿಮ್ಮ ಗುರು ಯಾರು ಎಂದಾಗ ''ಏಕ್ ಗುರು ದೀಕಾ ಚಾರ್ ಗುರು ಗೀಖಾ'' (ದೀಕ್ಷಾಗುರು ಒಬ್ಬ. ಪದ ಕಲಿಸಿದ ಗುರುಗಳು ನಾಲ್ವರು)'' ಎಂದು ಒಗಟಿನಂತೆ ಉತ್ತರಿಸಿದರು. ನಡುನಡುವೆ ಬಾಸುದೇವರ ಮಡದಿ ಬಾಯಿಹಾಕಿ ವಿವರಣೆ ಕೊಡುತ್ತಿದ್ದರು. ನನ್ನಲ್ಲೊ ಪ್ರಶ್ನೆಗಳ ಒಂದು ದೊಡ್ಡಗಂಟೇ ಇತ್ತು. ಇದರ ಸುಳಿವನ್ನರಿತ ಬಸುದೇವ್ ''ಕ್ಷಮಿಸಿ. ನಾನೊಂದು ಕಾರ್ಯಕ್ರಮಕ್ಕೆ ಹೋಗಬೇಕಿದೆ. ನೀವು ನಾಳೆ ಬೆಳಿಗ್ಗೆ ಬನ್ನಿ. ಮಾತಾಡೋಣ'' ಎಂದರು.



ನಾನು ''ನಿಮ್ಮ ಕಾರ್ಯಕ್ರಮಕ್ಕೆ ನಾವೂ ಬರಬಹುದೇ ?'' ಎಂದು ಕೇಳಿದೆ. ಬಸುದೇವ್ ''ಬೇಡಬೇಡ. ಬಹಳ ದೂರ. ಅದೂ ಸಾರ್ವಜನಿಕ ಕಾರ್ಯಕ್ರಮವಲ್ಲ. ಒಬ್ಬ ಠಾಕೂರರ ಮನೆಯಲ್ಲಿ ಏರ್ಪಾಟಾಗಿರುವ ಖಾಸಾಗೋಷ್ಠಿ. ಅವರು ಹೊರಗಿನವರಿಗೆ ಅನುಮತಿ ಕೊಡಲಿಕ್ಕಿಲ್ಲ. ನಾಳೆ ಬನ್ನಿ. ನಿಮಗಾಗಿ ಸಾಕಾಗುವಷ್ಟು ಹಾಡುತ್ತೇನೆ'' ಎಂದರು. ನಾನು ''ಬಹಳ ದೂರದಿಂದ ಬಂದಿದ್ದೇವೆ. ಜೀವನದಲ್ಲಿ ಬಾವುಲ್ ಗಾಯನ ಕೇಳಿಯೇ ಇಲ್ಲ. ಠಾಕೂರರು ಅನುಮತಿ ಕೊಟ್ಟರೆ ಒಳ ಬರುತ್ತೇವೆ. ಇಲ್ಲದಿದ್ದರೆ ಚಿಂತೆಯಿಲ್ಲ ವಾಪಾಸಾಗುತ್ತೇವೆ'' ಎಂದೆ. ಬಸುದೇವ್ ಕೊಂಚಹೊತ್ತು ಆಲೋಚಿಸಿ, ಬಾನು ಕಡೆ ನೋಡುತ್ತ ''ದಾದಾ, ನೀನು ಬೇಕಾದರೆ ಬಾ. ಬಹೆನ್ ಬೇಡ'' ಎಂದರು. ಜೋಗಿಗೆ ಜೋಗಿಣಿಯಂತೆ ಬೆನ್ನುಬಿದ್ದಿರುವ ಬಾನು, 'ಅದ್ಯಾಕೆ ನಾನೂ ಬರುತ್ತೇನೆ' ಎಂದು ಹಟಹಿಡಿದಳು. ಬಾವುಲ ಗಾಯನ ಕೇಳುವ ನನ್ನ ಆಸೆಗೆ ಕಲ್ಲುಬೀಳತೊಡಗಿತು. ಬಸುದೇವರ ಮಡದಿ ''ಮಹಿಳೆಯರೂ ಹೋಗಬಹುದು. ತಪ್ಪೇನಿಲ್ಲ. ಗೋಷ್ಠಿಗಳಲ್ಲಿ ನಾವು ಹೋಗಿ ಹಾಡುತ್ತೇವಲ್ಲ. ಪಾಪ, ಅಕ್ಕ ಅಷ್ಟೊಂದು ಹೇಳುತ್ತಿದ್ದಾರೆ. ಕರೆದುಕೊಂಡು ಹೋಗು'' ಎಂದು ವಕೀಲಿ ಮಾಡಿದರು. ಬಸುದೇವ್ ಅವಳತ್ತ ದುರುಗುಟ್ಟಿದರು. ಆಕೆ ಚಹ ಮಾಡಿ ತರಲು ಒಳಗೆ ಹೋದರು. ಈಗ ಬಸುದೇವ್ ನಿಷ್ಠುರವಾಗಿ ''ದಾದಾ, ಬರುವುದಾದರೆ ನೀನು ಬಾ. ತಂಗಿ ಬೇಡ. ಗಾಯನ ನಡುರಾತ್ರಿಯವರೆಗೆ ಇರುತ್ತದೆ. ಅಲ್ಲಿ ಭಂಗಿಸೇವನೆ ಇರಬಹುದು. ಮೇಲಾಗಿ ನಮ್ಮ ತಬಲಾ ಸಾಥಿಯದೊಂದು ಬೈಕ್ ಇದೆ. ಅದರಲ್ಲಿ ಮೂರು ಜನ ಮಾತ್ರ ಹೋಗಬಹುದು'' ಎಂದರು. ಬಾನುವನ್ನು ಶಾಂತಿನಿಕೇತನದ ಗೆಸ್ಟ್‌ಹೌಸಿಗೆ ಹೋಗಲು ಹೇಗೊ ಒಪ್ಪಿಸಿದೆ. ಅವಳು ನಿರಾಶಳಾಗಿ ನೋಡುತ್ತಿರುವಂತೆ, ಬಸುದೇವ್ ಮತ್ತು ನಾನು ಊರೊಳಗೆ ನಡೆಯುತ್ತ ಹೊರಟೆವು.

ಒಂದು ಕಿ.ಮೀ. ನಡೆದ ಬಳಿಕ ಬಸುದೇವ್ ಶಿಷ್ಯನ ಮನೆ ಬಂತು. ಅವನು ಅಪರಿಚಿತನಾದ ನನ್ನನ್ನು ನೋಡಿ ಯಾರೆಂದು ವಿಚಾರಣೆ ಮಾಡಿದನು. ಬಸುದೇವ್ ಏನು ಹೇಳಿದರೊ ಏನೊ, ಮುಖ

ಗಂಟಿಕ್ಕಿಕೊಂಡು "ಈತ ಬಂದರೆ ತಬಲಗಳನ್ನು ಇಟ್ಟುಕೊಂಡು ನಾನು ಗಾಡಿ ಬಿಡುವುದು ಹೇಗೆ?" ಎಂದನು. ನಾನು ತವಕದಿಂದ "ತಬಲ ನಾನು ಹಿಡಿದುಕೊಂಡು ಕೂರುವೆ" ಎಂದೆ. ಇದೊಂದು ಜಿಗಣೆ ಎಂದು ಅವನಿಗೆ ಅನಿಸಿರ ಬೇಕು. ಕಡೆಗೆ ತಬಲಾಗಳಿರುವ ದೊಡ್ಡ ಬ್ಯಾಗನ್ನು ನಡುವೆ ಹೇಗೊ ಬೈಕಿನ ಮುಂದೆ ಇಡಲಾಯಿತು. ಎರಡು ತಬಲಗಳನ್ನೂ ಮೂವರು ಮನುಷ್ಯರನ್ನೂ ಹೊತ್ತ ಬೈಕು ಹೊರಟಿತು. ಬೈಕಿನ ಹಿಂದೆ ಅಂಗೈ ಅಗಲದ ಜಾಗದಲ್ಲಿ ಕೂತಿದ್ದ ನಾನು ಯಾವಾಗಲಾದರೂ ಬೀಳಬಹುದಿತ್ತು. ಇಟ್ಟುಕೊಳ್ಳಲು ಆಧಾರವಿಲ್ಲದೆ ಕಾಲುಗಳು ಗಾಳಿಯಲ್ಲಿ ಜೋಲುತ್ತಿದ್ದವು. ಹೇಗಾದರೂ ಇರಲಿ ಎಂದು ಬಸುದೇವ್ ಸೊಂಟವನ್ನು ತಬ್ಬಿಕೊಂಡು ಕೂತಿದ್ದೆ.

ಎಷ್ಟೋ ದೂರ ಹೋದ ಬಳಿಕ, ಠಾಕೂರರ ಬಂಗಲೆ ಬಂದಿತು. ಬಂಗಲೆ ಚಿಕ್ಕದು. ಅದರ ಸುತ್ತಲಿನ ತೋಟ ಹುಲ್ಲುಹಾಸು ದೊಡ್ಡದು. ಮನೆಯ ಹಿಂದಿದ್ದ ಖಾಲಿ ಜಾಗದಲ್ಲಿ ದೊಡ್ಡದೊಡ್ಡ ಒಲೆ ಹೂಡಿ ಅಡುಗೆ ಮಾಡಲಾಗುತ್ತಿತ್ತು. ಬಹುಶಃ ಮಾಂಸದಡಿಗೆ ಇರಬೇಕು, ಮಸಾಲೆ ಹುರಿಯುವ ಘಮಘಮ ರಸ್ತೆ ತನಕ ಹಾದಿತ್ತು. ಠಾಕೂರರು ದೊಡ್ಡ ಜಮೀನ್ದಾರರು. ಕಲ್ಕತ್ತೆಯಲ್ಲಿ ಬಿಸಿನೆಸ್ ಇದೆ. ಬೇಸರವಾದಾಗ ಬಂದು ತಮ್ಮ ಹಿರೀಕರ ಮನೆಯಲ್ಲಿದ್ದು ಗೋಷ್ಠಿಗಳನ್ನು ನಡೆಯಿಸಿ ವಿಶ್ರಾಂತಿ ತೆಗೆದುಕೊಂಡು ಹೋಗುತ್ತಾರೆಂದು ತಿಳಿಯಿತು. ಠಾಕೂರರು ತಮ್ಮ ಮಡದಿ ಮತ್ತು ಗೆಳೆಯರ ಜತೆ ಹುಲ್ಲುಹಾಸಿನಲ್ಲಿ ಕುರ್ಚಿ ಹಾಕಿಕೊಂಡು ಹರಟೆ ಹೊಡೆಯುತ್ತಿದ್ದರು. ನಾನು ಗೇಟಿನ ಹೊರಗೇ ನಿಂತಿದ್ದೆ. ಬಸುದೇವ್ ಅವರ ಬಳಿ ಹೋಗಿ ನನ್ನತ್ತ ತೋರಿಸುತ್ತ ಏನನ್ನೋ ಹೇಳಿದರು. ಠಾಕೂರರು ತಟ್ಟನೆ ಎದ್ದು ಬಂದು "ನೊಮೊಸ್ಕಾರ್ ಪ್ರೊಫೆಸರ್, ಸಂಕೋಚವಿಲ್ಲದೆ ಬರಬಹುದು. ನೀವು ಬಂದಿದ್ದು ಸಂತೋಷ" ಎಂದು ಕೈಹಿಡಿದು ಒಳಗೆ ಕರೆದುಕೊಂಡು ಹೋದರು. ಜಗಲಿಯ ಮೇಲೆ ನಾಲ್ಕು ಕುರ್ಚಿ ಹಾಕಲಾಗಿತ್ತು. ಅದರ ಎದುರು ಗೋಡೆಗಾನಿಸಿ ಗಾಯಕರಿಗೆ ವೇದಿಕೆ ಸಿದ್ಧವಾಗಿತ್ತು. ಕೆಳಗೆ ವರಾಂಡದಲ್ಲಿ ಮನೆಯ ಆಳುಕಾಳುಗಳು ನೆಲದ ಮೇಲೆ ಹಾಸಿದ ಜಮಖಾನೆಯ ಮೇಲೆ ಕೂತಿದ್ದರು. ನಾನು ಜಮಖಾನೆಯ ಮೇಲೆ ಕೂರಲು ಹೋದೆ. ಅದನ್ನು ಕಂಡ ಠಾಕೂರರು "ಛೀ ಛೀ ಮೇಲೆ ಬನ್ನಿ. ನೀವು ಅಷ್ಟು ದೂರದಿಂದ ಬಂಗಾಳಕ್ಕೆ ಬಂದಿದ್ದೀರಿ. ನೀವು ಇವತ್ತಿನ ಚೀಫ್‌ಗೆಸ್ಟ್" ಎಂದು ಘೋಷಿಸಿ, ತಮ್ಮ ಪಕ್ಕದ ಕುರ್ಚಿಯಲ್ಲಿ ಕೂರಿಸಿಕೊಂಡರು. ನನಗೆ ಸಿಗುತ್ತಿರುವ ಮರ್ಯಾದೆ ಕಂಡು ಬಸುದೇವ್ ಮೊಗದಲ್ಲಿ ಸಮಾಧಾನ ಸೂಸುಯುತ್ತಿತ್ತು. ಬಾನು ಕರೆದುಕೊಂಡು ಬಂದಿದ್ದರೆ ಏನೂ ಆಗುತ್ತಿರಲಿಲ್ಲ ಅನಿಸಿತು. ಠಾಕೂರರು "ನೀವು ನಾಥರ ಬಗ್ಗೆ ಸೂಫಿಗಳ ಬಗ್ಗೆ ಕೆಲಸ ಮಾಡಿದ್ದೀರಿ ಎಂದು ಬಸುದೇವ್ ಹೇಳಿದ. ಸೂಫಿಗಳಿಗೂ ನಾಥರಿಗೂ ಯಾವ ತರಹದ ಸಂಬಂಧ?" ಎಂದು ಕೇಳಿದರು. ನಾನು ವಿವರಣೆಯನ್ನು ನನ್ನ ಹರುಕು ಇಂಗ್ಲಿಷಿನಲ್ಲಿ ಕೊಟ್ಟೆ. ಅವರಿಗದು ಮುಟ್ಟಿತೊ ಇಲ್ಲವೊ; "ನಿಜ ನಿಜ. ನೋಡಿ, ಈ ಜಾತಿಧರ್ಮ ಎಲ್ಲ ನಾವು ಮಾಡಿಕೊಂಡಿದ್ದು. ನಾವೆಲ್ಲ ಮಾನೂಷ್ ಅಷ್ಟೆ. ಈ ಬಾವುಲರ ಮುಖ್ಯ ತತ್ವವೇ



ಬಸುದೇವ ಬಾವುಲರ ಮಡದಿ ಏಕತಾರ ನುಡಿಸುತ್ತಿರುವುದು

ಮಾನವತಾವಾದ. ಪ್ರೇಮವಾದ" ಎಂದರು.

ಠಾಕೂರರು ಹೇಳಿದ್ದು ನಿಜ. ಬಾವುಲರು ಎಂಬುದು ಒಂದು ಜಾತಿಯಲ್ಲ. ಅದೊಂದು ಅನುಭಾವಿ ಪಂಥ. ಅದು ಸೂಫಿಪಂಥ, ವೈಷ್ಣವ ಭಕ್ತಿಪಂಥ ಹಾಗೂ ಬೌದ್ಧ ಸಹಜೀಯ ಪಂಥಗಳ ಸಮ್ಮಿಲನದಿಂದ ಹುಟ್ಟಿದ್ದು. ಲಾಲನ್ ಫಕೀರ್ ಇವರ ಗುರು. ಚೈತನ್ಯಪ್ರಭು ಇವರ ಪ್ರೇರಣೆ. ಲೋಕ ವ್ಯವಹಾರದಲ್ಲಿ ನಿರಾಸಕ್ತರಾದ ಬಾವುಲರು ದೈಹಿಕ ಆನಂದದಲ್ಲಿ ಮೈಮರೆಯುವವರು; ಪ್ರೇಮದ ಉತ್ಕಟತೆಯಲ್ಲಿ ಸಾಮಾಜಿಕ ನಿಯಮಗಳ ಉಲ್ಲಂಘನೆ ಮಾಡುವವರು; ತಮ್ಮ ದೇಹವೇ ದೇಗುಲ ಎಂದು ನಂಬಿದವರು. ದೇಹದ ಮೂಲಕವೇ ಎಲ್ಲ ಬಗೆಯ ಅನುಭವ ಮತ್ತು ಸಾಧನೆ ಮಾಡಬೇಕಾಗಿರುವುದರಿಂದ, ಅದು ಬಹಳ ಪವಿತ್ರವೆಂದು ಭಾವಿಸಿದವರು. ದೇಹದೊಳಗೆ ಹೃದಯವಂತ ಮಾನವರ ಚೈತನ್ಯವಿದ್ದು ಅದನ್ನು ಹುಡುಕ ಬೇಕು ಎಂದು ತಿಳಿದವರು. ಅಂತರಂಗದೊಳಗಿನ ಮನುಷ್ಯ ಹುಡುಕಾಟವನ್ನು ಮನೇರ್ ಮಾನುಷ್ ಎಂದು ಕರೆಯುತ್ತಾರೆ. ಬಂಗಾಳದ ಜಾನಪದದಲ್ಲಿ ಆಳವಾಗಿ ಬೇರು ತಳೆದಿರುವ ಬಾವುಲರ ವಿಶೇಷತೆಯೆಂದರೆ, ಸಂಗೀತವನ್ನು ಆತ್ಮಸಾಕ್ಷಾತ್ಕಾರದ ಸಾಧನವಾಗಿಸಿಕೊಂಡಿದ್ದು.

ಬಾವುಲರ ಪ್ರಮುಖ ಸಂಗೀತವಾದ್ಯವಾದ ಏಕತಾರಾ ನಮ್ಮ ದಾಸರ ಗೋಪಾಳ ಬುಟ್ಟಿಯಂತೆ ಕಾಣುತ್ತದೆ. ಚರ್ಮ ಬಿಗಿದ ಬುರುಡೆಯನ್ನು ಸೀಳುಬಿದಿರಿನೊಳಗೆ ಇಕ್ಕಡಿಸಿ ಅದನ್ನು ಮಾಡಿರುತ್ತಾರೆ. ಇದರ ಜತೆಗೆ ಕೊಳಲು, ತಾಳ, ಡಗ್ಗ, ತಬಲ, ಆನಂದಲಹರಿ, ಚಿಮುಟ, ಖೊಮೊಕ್, ಗೆಜ್ಜೆ ಹೀಗೆ ಅನೇಕ ವಾದ್ಯಗಳನ್ನು ಬಳಸುತ್ತಾರೆ. ಡಗ್ಗ ಎಂದರೆ ಮಡಕೆಗೆ ಬಿಗಿದು ಮಾಡಿದ ಚರ್ಮವಾದ್ಯ. ಆನಂದಲಹರಿ ಎಂದರೆ ಎರಡು ತಂತಿಯ ದೋತಾರಾ. ಖೊಮೊಕ್ ಎಂದರೆ ಚೌಡಿಕೆಯಂತಹ ವಾದ್ಯ. ದೆಹಲಿ ಸಂಗೀತ ನಾಟಕ ಅಕಾಡೆಮಿಯ ಮ್ಯೂಸಿಯಂನಲ್ಲಿ ಇವನ್ನೆಲ್ಲ ನಾನು ನೋಡಿದ್ದೆ. ಅವು ಸಂಗೀತಗಾರರ ಕೈಯಲ್ಲಿ ನುಡಿಗೊಡುವುದನ್ನು ಕೇಳಿರಲಿಲ್ಲ. ಬಾವುಲರು ಏಕಕಾಲಕ್ಕೆ ಕಾಲಿಗೆ ಕಟ್ಟಿದ ಗೆಜ್ಜೆಯಿಂದ ನಾದ ಹೊರಡಿಸುತ್ತ, ಸೊಂಟದಲ್ಲಿ ಕಟ್ಟಿದ ಡಗ್ಗವನ್ನು ಒಂದು ಕೈಲಿ ಬಾರಿಸುತ್ತ, ಇನ್ನೊಂದು ಕೈಲಿ ಏಕತಾರಾ ನುಡಿಸುತ್ತ ಹಾಡುತ್ತಾರೆ. ಅವರದು ಅತ್ಯಂತ ಸರಳವಾದ ಆದರೆ ವಿವಶಗೊಳಿಸುವ ಸಂಗೀತ ಗೋಷ್ಠಿ.

ರಾತ್ರಿ ಹತ್ತುಗಂಟೆಯ ಹೊತ್ತಿಗೆ ಕಾರ್ಯಕ್ರಮ ಆರಂಭವಾಯಿತು. ಊರು ನಿಶ್ಶಬ್ದವಾಗಿತ್ತು. ಮೊದಲ ಘಟ್ಟದಲ್ಲಿ ಬಸುದೇವದಾಸ್ ಏಕತಾರ ನುಡಿಸುತ್ತ ಕುಳಿತು ಹಾಡಲಾರಂಭಿಸಿದರು. ಸೌಮ್ಯವಾದ ಪಳಗಿದ ದನಿ. ಹಾಡಿಂದ ಹಾಡಿಗೆ ಮಾಧುರ್ಯ ಹೆಚ್ಚುತ್ತಿತ್ತು. ಆದರೂ ಗತಿ ಮಂದವಾಗಿತ್ತು. ನಾದದ ಪ್ರವಾಹವೊಂದು ಎದ್ದು



ಅವರಲ್ಲಿ ಶ್ರೋತೃಗಳನ್ನು ಸೆಳೆದೊಯ್ಯುವ ರಭಸ ಅಲ್ಲಿ ಕಾಣಲಿಲ್ಲ. ಅದು ಮುಂದಿನ ಅವಸ್ಥೆಗೆ ಮನಸ್ಸನ್ನು ಹದಗೊಳಿಸುವ ಬುನಾದಿಯೆಂದು ನಂತರ ತಿಳಿಯಿತು. ಐದಾರು ಹಾಡುಗಳ ಬಳಿಕ ಬಸುದೇವ್ ವಿಶ್ರಮಿಸಿದರು. ಚಹ ಮತ್ತು ಹಾಲು ಸರಬರಾಯಿ ಆಯಿತು. ಚಹ ನಮಗೆ. ಹಾಲು ಹಾಡುಗಾರರಿಗೆ. ಹಾಲೊಳಗೆ ಏನಿತ್ತೊ ಕಾಣೆ.

ಎರಡನೇ ಘಟ್ಟದಲ್ಲಿ ಸೊಂಟದೊಳಗೆ ಡಗ್ಗವನ್ನು ಬಾರಿಸುತ್ತಿದ್ದ ಬಸುದೇವರ ಶಿಷ್ಯ ಹಾಡಲು ಎದ್ದನು. ಆತನ ಹೆಸರು ನರೋತ್ತಮದಾಸ್. ೨೫ರ ಹರೆಯದ ಆತ ಕಾಲಿಗೆ ಗೆಜ್ಜೆ ಕಟ್ಟಿದ್ದನು. ನಡುವಿಗೆ ರುಮಾಲು ಬಿಗಿದಿದ್ದನು. ಏಕತಾರಿಯನ್ನು ಕೊರಳಿಗೆ ನಾರದನಂತೆ ನೇತುಹಾಕಿಕೊಂಡು ನುಡಿಸುತ್ತ ಹಾಡಲಾರಂಭಿಸಿದನು. ಅವನಲ್ಲಿ ಬಸುದೇವರ ಮಾಧುರ್ಯವಿರಲಿಲ್ಲ. ಬದಲಿಗೆ ತಾರುಣ್ಯದ ಗಡಸುತನವಿತ್ತು. ಕಸುವಿತ್ತು. ಹಾಡುವಾಗ ಕಣ್ಮುಚ್ಚಿಕೊಂಡು ತನ್ಮಯನಾಗಿ ಬುಗುರಿಯಂತೆ ತಿರುಗುತ್ತಿದ್ದನು. ಬಾವುಲರು ಪುಟ್ಟಪುಟ್ಟ ಕುಣಿಹೆಜ್ಜೆ ಹಾಕುತ್ತ ಚಿಕ್ಕ ವರ್ತುಲದಲ್ಲಿ ನರ್ತಿಸುವುದು ಬಹಳ ಆಕರ್ಷಕ. ಬಾವುಲ್ ಗಾಯಕರು ಸಾಮಾನ್ಯವಾಗಿ ಅಂತರ್ಮುಖಿಗಳಾಗಿ ಹಾಡುತ್ತಾರೆ. ಸೂಫಿಗಳ ಸಮಾ ಗೋಷ್ಠಿಯಲ್ಲಿ ಆನಂದಾತಿರೇಕದಿಂದ ಶ್ರೋತೃಗಳು ಮೈದುಂಬಿದರೆ, ಇಲ್ಲಿ ಸ್ವತಃ ಗಾಯಕರೇ ಆವೇಶಕ್ಕೆ ಒಳಗಾಗುತ್ತಾರೆ.

ವಿಶೇಷವೆಂದರೆ, ನರೋತ್ತಮದಾಸನ ಜತೆ ನರ್ತಿಸುತ್ತಿದ್ದ ಭೋಲಾನಾಥ್ ಎಂಬ ಬಸುದೇವನ ಮತ್ತೊಬ್ಬ ಶಿಷ್ಯನದು. ಕೊಂಚ ವಯಸ್ಸಾಗಿದ್ದ ಈತನು ತೆಳ್ಳಗೆ ಕೋಲಿನಂತಿದ್ದನು. ಮುಂದಿನೆರಡು ಹಲ್ಲುಬಿದ್ದು ನಕ್ಕರೆ ಮಗುವಿನಂತೆ ತೋರುತ್ತಿದ್ದನು. ಈತ ಮುಖ್ಯ ಗಾಯಕನ ಗಂಭೀರ ನಿಲುವಿನ ಸುತ್ತ ದುಂಬಿಯಂತೆ ಸುತ್ತುತ್ತ, ಬಳ್ಳಿಯಂತೆ ಬಳುಕುತ್ತ, ಕೃಷ್ಣನ ಜತೆಯಲ್ಲಿರುವ ರಾಧೆಯಂತೆ ವರ್ತಿಸುತ್ತ ಆನಂದಲಹರಿ ನುಡಿಸುತ್ತಿದ್ದನು. ಸವದತ್ತಿ ಎಲ್ಲಮ್ಮನ ಜೋಗಪ್ಪನಂತೆ ಕಾಣುತ್ತಿದ್ದ ಭೋಲಾನಾಥ್ ಬಹುಶಃ ನಪುಂಸಕನಿರಬೇಕು. ಈತ ನುಡಿಸುವಾಗ ಹೊಟ್ಟೆಯೊಳಗೆ ಅಡಗಿದ್ದ ನಾದದ ಕರುಳನ್ನು ಬಗೆದು ಹೊರಗೆ ಹಾಕುತ್ತಿದ್ದಾನೊ ಎಂಬಂತೆ ತೋರುತ್ತಿತ್ತು. ಅವನ ಕುಣಿತದ ಭಂಗಿ ಮತ್ತು ಮುಖ್ಯ ಗಾಯಕನ ಮುಖವನ್ನು ನೋಡುವ ಬಗೆಯು, ಲೈಂಗಿಕ ಪ್ರಚೋದನೆಯ ರಸಿಕ ಚೇಷ್ಟೆಗಳನ್ನು ಒಳಗೊಂಡಿತ್ತು. ಬಾವುಲರು ತಮ್ಮ ದೇಹಚಲನೆಯಲ್ಲೇ ಮಾದಕತೆಯನ್ನು ಹೊಮ್ಮಿಸಬಲ್ಲರು. ಅವರು ತಮ್ಮ ಹಾಡು ಕುಣಿತಗಳಿಂದ ಸ್ತ್ರೀಯರನ್ನು ಮರುಳುಮಾಡಿ ಎಬ್ಬಿಸಿಕೊಂಡು ಹೋಗುತ್ತಾರೆಂಬ ಮಿತ್ ಬಂಗಾಳದಲ್ಲಿದೆ. ನಮ್ಮಲ್ಲಿ ಜೋಗಿಗಳನ್ನು ಕುರಿತು ಇಂಥವೇ ಕತೆಗಳಿವೆಯಷ್ಟೆ. ಅನೇಕ ಬಾವುಲರು ಸಂಸಾರಸ್ಥರಲ್ಲ. ಸಂಗಾತಿಯನ್ನು ಹುಡುಕಿಕೊಂಡು ಒಟ್ಟಿಗೆ ಹಾಡುತ್ತ ಊರೂರು ತಿರುಗಿಕೊಂಡು ಇರುತ್ತಾರೆ. ಶಾಕ್ತಪಂಥದ ಪ್ರಭಾವವುಳ್ಳ ಬಾವುಲರಲ್ಲಿ ಅನೇಕ ಗುಪ್ತಸಾಧನೆಗಳಿವೆ. ಅವುಗಳಲ್ಲಿ ಕೆಲವು ಕಾಮಕ್ಕೂ ಸಂಬಂಧಿಸಿವೆ. ಅವರ ಪ್ರಕಾರ ಮಾನವ ದೇಹವು ಒಂದು ಪವಿತ್ರ ವಸ್ತು ಮಾತ್ರವಲ್ಲ ಒಂದು ತತ್ವ ಕೂಡ. ಸಮಸ್ತ ಸತ್ಯಗಳ ಆವಾಸಸ್ಥಾನ ಅದು. ಅದರ ಮೂಲಕವೇ ದೈಹಿಕ ಅನುಭವ ದೊರಕಬೇಕು. ತಾಂತ್ರಿಕರ ಪ್ರಭಾವವುಳ್ಳ ಬಾವುಲರಿಗೆ ಕಾಮವು ಸತ್ಯವನ್ನು ಕಾಣಲು ಇರುವ ಒಂದು ಸಾಧನ. ಅವರು ಗಂಡುಹೆಣ್ಣಿನ ದೈಹಿಕ ಮಿಲನದ ಮೂಲಕ ಅಲೌಕಿಕ ಅನುಭವ ಪಡೆಯಬೇಕು ಎಂದು ನಂಬಿದವರು.

ಮೂರನೆಯ ಹಂತದಲ್ಲಿ ಭೋಲಾನಾಥನು ಕುಣಿಯುತ್ತ ಹಾಡಲಾರಂಭಿಸಿದನು. ಅವನ ದನಿಯಲ್ಲಿ ಗೊಗ್ಗರುತನವಿತ್ತು. ಹಾಡಿಹಾಡಿ ನುರಿತ ಕಾರಣ, ಅದರ ಒಡಕಲ್ಲೂ



ಬಸುದೇವ ಕುಟುಂಬದ ಜೊತೆ ಬಾನು



ಬಸುದೇವದಾಸ ಬಾವುಲ

ವಿಚಿತ್ರ ಇಂಪಿತ್ತು. ಗಾಯಕರೇ ಹಾಗೆ. ಹಾಡುವ ಮುನ್ನ ಸಾಮಾನ್ಯ ವ್ಯಕ್ತಿಗಳಂತೆ ಕಾಣುತ್ತಾರೆ; ಹಾಡನ್ನು ಹುಟ್ಟಿಸತೊಡಗಿದ ಕೂಡಲೇ ಮುಖದಲ್ಲಿ ವಿಚಿತ್ರ ತೇಜಸ್ಸು ಸ್ಫುರಿಸುತ್ತ ಜಗತ್ತಿನ ಅತಿಸುಂದರ ವ್ಯಕ್ತಿಗಳಾಗಿ ರೂಪಾಂತರಗೊಳ್ಳುತ್ತಾರೆ. ತಮ್ಮ ಶಿಷ್ಯರು ಒಬ್ಬೊಬ್ಬರಾಗಿ ಹಾಡುತ್ತ ಕುಣಿಯುವಾಗ ಬಸುದೇವ್ ಮೂಲೆಯಲ್ಲಿ ಕುಳಿತು, ಸಂತೋಷದಿಂದ ಕಣ್ಣನ್ನು ಹೊಳೆಸುತ್ತ ತಾಳ ಹಾಕುತ್ತ ಇದ್ದರು.

ಶಿಷ್ಯರಿಬ್ಬರ ಪಾಳಿ ಮುಗಿದ ಬಳಿಕ ಕೊನೆಯ ಘಟ್ಟದಲ್ಲಿ ಬಸುದೇವ್ ಹಾಡಿಕೆ ಮತ್ತೆ ಆರಂಭವಾಯಿತು. ಮೊದಲಿಗೆ ಕಾಣದ ಮಾಧುರ್ಯ ಈಗ ಕಾಣಿಸತೊಡಗಿತು. ಮಾದಕತೆ ಅಲೆಅಲೆಯಾಗಿ ಹೊಮ್ಮತೊಡಗಿತು. ಸಣ್ಣಗೆ ಮಳೆಬಂದು ತೋಯಿಸಿದಂತೆ, ತಣ್ಣನೆಯ ಗಾಳಿ ಮೈಮನವನ್ನು ಆವರಿಸಿಕೊಂಡಂತೆ, ಹಿತವಾಗಿ ಯಾರೊ ಹಿಂದಿನಿಂದ ಬಂದು ಅಪ್ಪಿದಂತೆ ಸುಖದ ಅನುಭವವಾಗುತ್ತಿತ್ತು. ಆತ ದೊಡ್ಡಗಾಯಕ ಎನ್ನುವುದು ಈಗ ಮನವರಿಕೆಯಾಯಿತು. ಹಿಂದೂಸ್ತಾನಿ ಸಂಗೀತದಲ್ಲಾಗಲಿ, ಸೂಫಿಗಳ ಮೆಹಫಿಲೆ ಸಮಾದಲ್ಲಾಗಲಿ ಸಂಗೀತಾನುಭವದಲ್ಲಿ ಪರವಶತೆಯ ಅನುಭವ ಆಗುವುದು ಕೊನೆಯ ಘಟ್ಟದಲ್ಲಿಯೇ. ಬಸುದೇವ್ ಕೊರಳಿಂದ ಒಂದಕ್ಕಿಂತ ಒಂದು ಮೋಹಕ ಗೀತೆಗಳು ಬರತೊಡಗಿದವು. ಅವುಗಳಲ್ಲಿ 'ಮಾನುಷ್ ಭಜ ಮಾನುಷ್ ಪೂಜ' ಹಾಡು ಬಹಳ ಇಷ್ಟವಾಯಿತು. ಸಂಸ್ಕೃತ ಜನ್ಯ ಬಂಗಾಳಿ ಶಬ್ದಗಳ ಮೂಲಕ ಹಾಡಿನ ಅರ್ಥವನ್ನು ನಾನು ಚೂರುಚೂರಾಗಿ ಊಹಿಸುತ್ತಿದ್ದೆ. ಆದರೆ ಅರ್ಥದ ಹಂಗಿಲ್ಲದೆಯೂ ನಾದವು ಮನಸ್ಸನ್ನು ತುಂಬಿಕೊಂಡು ಉನ್ನತ್ತಗೊಳಿಸುತ್ತಿತ್ತು. ಪ್ರತಿ ಹಾಡು ಮುಗಿದಾಗ, ಠಾಕೂರರು 'ಬಾ' ಎಂದು ಶಹಬಾಸ್‌ಗಿರಿ ಕೊಡುತ್ತಿದ್ದರು. ಬಸುದೇವ್ ಹಾಡಿದ ಹಾಡುಗಳಲ್ಲಿ ಟಾಗೂರರ 'ಏಕಲ ಚಲೊ' ರಚನೆ ಕೂಡ ಇತ್ತು. ''ಅಮಿ ಕೊಥಾಯ್ ಪಾಬೊ ತಾರೆ, ಅಮಾರ್ ಮನೇರ್ ಮಾನುಶ್ ಜೇರೆ'' ಹಾಡಂತೂ ಜೇನಿನಂತೆ ಸಿಹಿಯಾಗಿತ್ತು. ಇದರರ್ಥವೇನೆಂದು ಠಾಕೂರರಿಗೆ ಪಿಸುನುಡಿಯಲ್ಲಿ ಕೇಳಿದೆ. 'ಮಾನವ ಹೃದಯ ನನ್ನಲ್ಲಿದೆ. ಅದರೊಳಗೆ ಬೆಳಕಿದೆ. ಎತ್ತ ನೋಡಿದರೂ ಆ ಬೆಳಕು ನೆಲೆಸಿದೆ' ಎಂದೇನೊ ಹೇಳಿದರು. ಸೂಫಿಗಳ ಅನಲ್‌ಹಖ್ ತತ್ವವೂ, ಅದ್ವೈತಿಗಳ ಅಹಂ ಬ್ರಹ್ಮಾಸ್ಮಿ ದರ್ಶನವೂ ಇದನ್ನೇ ಹೇಳುತ್ತದೆ ತಾನೇ ?

ಬಾವುಲರು ಸಾಮಾನ್ಯವಾಗಿ ಹಾಡುವುದು ಲಾಲುನ್ ಫಕೀರನ ರಚನೆಗಳನ್ನು. ಲಾಲುನ್ ಒಳಗೊಂಡಂತೆ ಮಧ್ಯಕಾಲದ ಚೈತನ್ಯಪ್ರಭು, ಕಬೀರ, ಏಕನಾಥ, ಶಿಶುನಾಳ, ನಾನಕ – ಎಲ್ಲ ಸಂತರು ಧರ್ಮದ ಹೆಸರಲ್ಲಿ ಜನರನ್ನು ವಿಭಜಿಸುವ ತತ್ವಗಳನ್ನು ನಿರಾಕರಿಸಿದವರು. ಫಕೀರ್ ಬಾವುಲರೆಂದು ಕರೆಯಲಾಗುವ ಲಾಲುನ್ ಅನುಯಾಯಿಗಳು ಬಾಂಗ್ಲಾದೇಶದಲ್ಲಿದ್ದಾರೆ. ಬಾಂಗ್ಲಾ ಬಾವುಲರು ಬಿಳಿಬಟ್ಟೆ ಧರಿಸಿದರೆ ಬಂಗಾಳದ ಬಾವುಲರು ಕಾವಿ ಮತ್ತು ತುಳಸಿಮಾಲೆ ಧರಿಸುತ್ತಾರೆ. ಬಾಂಗ್ಲಾ ಬಾವುಲರು ಸೂಫಿ ಗಜಲುಗಳನ್ನು ಹಾಡಿದರೆ, ಬಂಗಾಳದ ಬಾವುಲರು ಹೆಚ್ಚಾಗಿ ವೈಷ್ಣವೀ ಗೀತೆ ಹಾಡುವರು. ಇಬ್ಬರೂ ಉದ್ದನೆಯ ಕೂದಲು ಬಿಡುತ್ತಾರೆ. ಭಿಕ್ಷಾಟನೆ ಮಾಡುತ್ತಾರೆ. ತಿರುಗಾಟ ನಡೆಸುತ್ತಾರೆ. ಬಂಗಾಳವು ರಾಜಕೀಯವಾಗಿ ಲಾರ್ಡ್ ಕರ್ಝನನಿಂದ ಎರಡು ತುಂಡಾಗಿರಬಹುದು. ಆದರೆ ಆ ಎರಡು ತುಂಡುಗಳನ್ನು ಒಟ್ಟಿಗೆ ಬೆಸೆದಿದ್ದ ಕೆಲವು ಸಾಂಸ್ಕೃತಿಕ ತಾರುಗಳು ಮಾತ್ರ ಹರಿಯಲಿಲ್ಲ. ಅವುಗಳಲ್ಲಿ ಒಂದು ಬಾವುಲರದು.

ಎರಡನೆಯದು ಬಂಗಾಳಿ ಭಾಷೆಯದು. ಮೂರನೆಯದು ಟಾಗೂರರದು. ಆಧುನಿಕ ಬಂಗಾಳಿ ಸಾಹಿತ್ಯದ ಇಬ್ಬರು ಮುಖ್ಯ ಕವಿಗಳಾದ ಟಾಗೂರ್ ಮತ್ತು ಖಾಜಿ ನಜರುಲ್ ಇಸ್ಲಾಮರ ಜೀವನ ಪ್ರಜ್ಞೆಯನ್ನು ರೂಪುಗೊಳಿಸಿದ್ದೇ ಬಾವುಲ್ ಸಂಪ್ರದಾಯ. ಬಹುಶಃ ಬಂಗಾಳಿ ಕಾವ್ಯ ಮತ್ತು ಸಂಗೀತಗಳನ್ನು ಬಾವುಲರನ್ನು ಬಿಟ್ಟು ಚರ್ಚಿಸುವುದು ಸಾಧ್ಯವಿಲ್ಲ. ಬಾವುಲರು ಬಂಗಾಳಿ ಸಂಸ್ಕೃತಿಯ ಪದರಗಳಲ್ಲಿ ಹೇಗೆ ಬೆರೆತುಹೋಗಿದ್ದಾರೆಂದರೆ, ಹಳ್ಳಿಗಳಲ್ಲಿ ರೈತರು, ನದಿಗಳಲ್ಲಿ ನಾವಿಕರು, ಬಾವುಲ್ ಹಾಡುಗಳನ್ನು ಹಾಡುತ್ತಾರಂತೆ. ನಮಗದು ಕೇಳಸಿಗಲಿಲ್ಲ. ಆದರೆ ಅನೇಕ ಮನೆಗಳ ಮೇಲೆ ಬಾವುಲರ ಭಿತ್ತಿಚಿತ್ರಗಳನ್ನಂತೂ ಕಂಡೆವು. ನೂರಾರು ಚಿತ್ರಗಳನ್ನು ನೋಡಿದೆವು. ಬಂಗಾಳದ ಕಲಾವಿದರು ಕಾಳಿಯನ್ನು ಬಿಟ್ಟರೆ ಅತಿಹೆಚ್ಚು ಚಿತ್ರಿಸಿರುವುದು ಬಾವುಲರನ್ನೇ ಎಂದು ಕಾಣುತ್ತದೆ.

ನಬನಿದಾಸ್ ಬಾವುಲ್ ಬಂಗಾಳ ಕಂಡ ದೊಡ್ಡ ಗಾಯಕ. ಈಗ ಬಾವುಲ್ ಸಂಗೀತದ ದೊರೆಯೆಂದರೆ ಕೊಲ್ಕೊತ್ತೆಯಲ್ಲಿರುವ ಪೂರ್ಣದಾಸ್. ಕೋಲ್ಕೊತ್ತೆಯಲ್ಲಿರುವ ಪೂರ್ಣದಾಸರೂ ಅವರ ಮಕ್ಕಳೂ ಈಗ ಬಂಗಾಳದ ಜನರ ಕೈಗೇ ಸಿಗದಷ್ಟು ಫಾರಿನ್ ಟೂರುಗಳಲ್ಲಿ ಬಿಜಿಯಾಗಿರುತ್ತಾರೆ. ಅವರ ಸಿ.ಡಿ.ಗಳು ಜನಪ್ರಿಯವಾಗಿವೆ. ಪೂರ್ಣದಾಸ್ ೬೦ರ ದಶಕದಲ್ಲಿ ಯೂರೋಪಿನಲ್ಲಿ ಇದರ ರುಚಿಯನ್ನು ಹರಡಿದವರು. ಅವರ ಮಕ್ಕಳು ಬಾವುಲ್ ಸಂಗೀತವನ್ನು ಅಮೆರಿಕಾದ ರಾಕ್, ಜಾಝ್ ಸಂಗೀತದ ಜತೆ ಬೆಸೆದವರು – ಕಾರಂತರು ಬ್ಯಾಲೆ ಜತೆ ಯಕ್ಷಗಾನ ಬೆಸೆದಂತೆ. ನನಗೆ ಕುತೂಹಲ ಇದ್ದುದು ಈ ಪಾಶ್ಚಾತ್ಯೀಕರಣದ ಪ್ರಯೋಗದಲ್ಲಿ ಅಲ್ಲ. ನೆರೆಯಲ್ಲಿರುವ ಬಾಂಗ್ಲಾದೇಶದಲ್ಲಿ ಇನ್ನೂ ಉಳಿದಿರುವ ಫಕೀರ್ ಬಾವುಲರ ಹಾಡಿಕೆಯಲ್ಲಿ; ಅಲ್ಲಿನ ಕಿಸ್ಮತಲಿ ಫಕೀರ್ ಹಾಗೂ ಅಸ್ಸಾದ್ ಶೇಕರ ಗಾಯನದಲ್ಲಿ. ಇಸ್ಲಾಮಿಕ್ ಮೂಲಭೂತವಾದವು ಹೆಚ್ಚಿಕೊಂಡಿರುವ ಹೊತ್ತಲ್ಲಿ, ಅದನ್ನು ಮೆಟ್ಟಿ ಬಾವುಲ್ ಪರಂಪರೆ ಹೇಗೆ ಬದುಕುಳಿದಿದೆಯೊ ಹೋಗಿ ಕಾಣಬೇಕು ಅನಿಸುತ್ತಿತ್ತು.

ಇತ್ತ ರಾತ್ರಿ ಸರಿಯುತ್ತಿತ್ತು. ಚಳಿ ಆಕ್ರಮಿಸುತ್ತಿತ್ತು. ಬಸುದೇವ್ ಹಾಡಿನ ಮೇಲೆ ಹಾಡು ಹಾಡುತ್ತ ಗೋಷ್ಠಿಯನ್ನು ಉತ್ಕಟ ಸ್ಥಿತಿಗೆ ಒಯ್ಯತೊಡಗಿದರು. ಶಿಷ್ಯನ ಕಸುವು ಇಲ್ಲದಿದ್ದರೂ ತನ್ಮಯಗೊಳಿಸುವ ಯಾವುದೊ ಚುಂಬಕ ಶಕ್ತಿ ಅವರ ಹಾಡಿಗಿತ್ತು. ಕೊನೆಯ ಹಾಡು ಮುಸ್ಲಿಮರಿಗೆ ಪೀರ್, ಹಿಂದೂಗಳಿಗೆ ಗುರುವಾಗಿರುವವನು ಒಬ್ಬನೇ ಎಂಬ ಅರ್ಥವನ್ನು ಒಳಗೊಂಡಿತ್ತು. ಬಸುದೇವ್ ಇದನ್ನು ನಾನಿದ್ದೇನೆಂದು ಹಾಡಿದರೆ? ನಾದದ ಗುಂಗು ಅಮಲಿನಂತೆ ತಲೆಯಲ್ಲಿ ತುಂಬಿಕೊಂಡು ಯಾಕೊ ಸಾಕು ಅನಿಸತೊಡಗಿತು. ಗೋಷ್ಠಿ ಮುಗಿದಾಗ ರಾತ್ರಿ ೧ ಗಂಟೆಯಿರಬೇಕು. ವರಾಂಡದ ಕೆಳಗೆ ಕುಳಿತಿದ್ದ ಕೆಲಸಗಾರರೆಲ್ಲ ಒಬ್ಬೊಬ್ಬರೇ ಮಾಯವಾಗಿ, ಮನೆಯ ಹಿಂದೆ ಊಟಕ್ಕೆ ಹೋಗಿದ್ದರು. ಠಾಕೂರರು ''ಹೇಗಿತ್ತು ಗೋಷ್ಠಿ?'' ಎಂದರು. ನಾನು ಚೆನ್ನಾಗಿತ್ತು ಎಂದರೆ ಕೃತಕವಾಗಬಹುದು ಎಂದು ಸುಮ್ಮನೆ ಮುಗುಳ್ನಕ್ಕು ಗೋಣನ್ನಲ್ಲಾಡಿಸಿದೆ. ಅಡಿಗೆ ಸಿದ್ಧವಾಗಿಟ್ಟುಕೊಂಡು ಒಳಗೆ ಸೇವಕರು ಯಜಮಾನರ ಸನ್ನೆಗಾಗಿ ಕಾಯುತ್ತಿದ್ದರು.



ಬಸುದೇವರ ಸಂಗಡಿಗರೊಂದಿಗೆ ಲೇಖಕ

ಬಹುಶಃ ಇದು ಮನೆಯೊಡೆಯನು ಕಲಾವಿದರ ಜತೆ ಕೂರುವ ಪಂಕ್ತಿ. ಮುಖ್ಯ ಅತಿಥಿಯೆಂದು ಘೋಷಿಸಲ್ಪಟ್ಟಿರುವ ನನ್ನನ್ನು ಬಿಟ್ಟು ಉಣ್ಣಲಾರರು ಎಂಬ ಅಚಲ ನಂಬಿಕೆ ನನಗೆ. ಮಾಂಸದ ಸಾರಿನ ಗಮಲು ಹಾಡಿಗಿಂತಲೂ ತೀಕ್ಷ್ಣವಾಗಿ ಬಂದು ಮೂಗಿನ ಮೂಲಕ ಹೊಕ್ಕು ಚೈತನ್ಯವನ್ನೆಲ್ಲ ವ್ಯಾಪಿಸಿಕೊಂಡಿತ್ತು. ಚಳಿಗೆ ಹೊಟ್ಟೆ ಮತ್ತಷ್ಟು ಹಸಿದು ಹುಲಿ ಒಳಗೆ ಹಾ ಎಂದು ಬಾಯಿ ಕಳೆದು ಕುಳಿತಿತ್ತು.

ಅಷ್ಟರಲ್ಲಿ ಠಾಕೂರರು ಬಂದು ನನ್ನ ಕೈಗಳನ್ನು ಬೊಗಸೆಯಲ್ಲಿ ಹಿಡಿದು ''ಪ್ರೊಫೆಸರ್, ನೀವು ಗೋಷ್ಠಿಗೆ ಬಂದಿದ್ದು ಬಹಳ ಆನಂದ. ಇನ್ನೊಮ್ಮೆ ಬಂಗಾಳಕ್ಕೆ ಬನ್ನಿ. ಕೊಲ್ಕೊತ್ತೆಯ ನಮ್ಮ ಮನೆಗೆ ಬನ್ನಿ. ಅಲ್ಲೂ ಒಂದು ಗೋಷ್ಠಿ ಮಾಡೋಣ. ಈಗ ನಮ್ಮ ಡ್ರೈವರ್ ನಿಮಗೆ ಗೆಸ್ಟ್‌ಹೌಸಿಗೆ ಬಿಟ್ಟುಬರುತ್ತಾನೆ'' ಎಂದು ಕೈಮುಗಿದರು. ನನ್ನ ನಸೀಬೇ ಖೊಟ್ಟಿಯಿತ್ತು. ಈ ಪಾಪಿಗಳು ಭಂಗಿರಸದ



ಬಸುದೇವರ ಸಂಗಡಿಗ

ಸೇವನೆಯಿದ್ದುದರಿಂದ ನನ್ನನ್ನು ಹೀಗೆ ಸಾಗಹಾಕಿದರೇ? ಅಲೌಕಿಕತೆಯ ಗುಂಗಿನಿಂದ ಜರ್ರನೆ ನೆಲಕ್ಕಿಳಿದು ಹೋದೆ. ಕಣ್ಣು ಕತ್ತಲೆ ಕಟ್ಟಿತು. ಡ್ರೈವರ್ ಗಾಡಿ ಸ್ಟಾರ್ಟು ಮಾಡಿ, ಒಮ್ಮೆ ಹಾರ್ನ್ ಮಾಡಿದ. ಠಾಕೂರರಿಗೂ ಗಾಯಕರಿಗೂ ಕೈಮುಗಿದು, ಚಳಿಯಲ್ಲಿ ನಡುಗುತ್ತ ವಿಧಿಯನ್ನು ಶಪಿಸುತ್ತ ಮರಳಿ ಬಂದೆ. ಕಾಯುತ್ತಿದ್ದ ಬಾನು ಗಾಯನ ಹೇಗಿತ್ತು ಎಂದಳು. ಬಹಳ ಚೆನ್ನಾಗಿತ್ತು ಎಂದೆ. ಹೊಟ್ಟೆ ಉರಿಸಿಕೊಂಡಳು. ಊಟಹಾಕದೆ ಕಳಿಸಿದರು ಎಂದೆ. ಅವಳಿಗೆ ಹಾಲುಕುಡಿದಷ್ಟು ಸಂತೋಷವಾಯಿತು.

ಶಾಂತಿನಿಕೇತನದಲ್ಲಿ ನಾವಿರುವಷ್ಟು ದಿನವೂ ಅನೇಕ ಬಾವುಲರು ಬೀದಿಯಲ್ಲಿ ಹಾಡುತ್ತ ಹೋಗುತ್ತಿದ್ದುದನ್ನು ನೋಡಿದೆವು. ಗುಡಿಗಳ ಮುಂದೆ ಭಿಕ್ಷುಕರ ಸಾಲಲ್ಲಿ ಕುಳಿತು ಹಾಡುವುದನ್ನು ನೋಡಿದೆವು. ನಮ್ಮ ಮಂಟೆಸ್ವಾಮಿ, ಎಲ್ಲಮ್ಮ, ಮಾದೇಶ್ವರ, ಜುಂಜಪ್ಪ, ಸಂಪ್ರದಾಯದ ಗಾಯಕರಂತೆ, ಖವಾಲಿ ಹಾಡುವ ಫಕೀರರಂತೆ ಇವರೂ ಸಹ 'ಧಾರ್ಮಿಕ ಭಿಕ್ಷುಕರು'. ಅಂಗಡಿ ಮುಂಗಟ್ಟುಗಳ ಮುಂದೆ ನಿಂತು ಬಾವುಲರು ಹಾಡುವಾಗ ಯಾರೂ ಗಮನವಿಟ್ಟು ಕೇಳುತ್ತಿರಲಿಲ್ಲ. ಆದರೆ ಕೆಲವು ಬಾವುಲರು, ಪೂರ್ಣದಾಸರ ಪ್ರಭಾವದಿಂದ ಸಣ್ಣಪುಟ್ಟ ಊರಲ್ಲಿರುವ ಬಾವುಲರು, ತಮ್ಮ ಹಾಡುಗಳ ಸಿ.ಡಿ. ಮಾಡಿಸಿಕೊಂಡಿರುವುದುಂಟು. ತಾರಾಪೀಠದಲ್ಲಿ ಭಿಕ್ಷೆ ಬೇಡುತ್ತಿದ್ದ ಒಬ್ಬ ಬಾವುಲನು ತನ್ನ ಹಾಡಿನ ಸಿ.ಡಿ.ಗಳನ್ನೂ ಮಾರುತ್ತಿದ್ದನು. ನಾನೊಂದು ಕೊಂಡುಕೊಂಡೆ. ಮನೆಗೆ ಬಂದು ಹಾಕಿದಾಗ ಅದು ಖಾಲಿ ಸಿ.ಡಿ.ಯಾಗಿತ್ತು. ಅನುಭಾವದಲ್ಲಿ ಶೂನ್ಯವೂ ಒಂದು ತತ್ವ ತಾನೇ?

ಬಸುದೇವ್ ಭಾರತದ ಅನೇಕ ಕಡೆ ಹೋಗಿ ಬಂದಿದ್ದಾರೆ. ಆದರೂ ಅವರು ಇರುವುದು ಗುಡಿಸಲಿನಲ್ಲಿ. ಸೈಕಲ್ ಇಟ್ಟುಕೊಳ್ಳುವಷ್ಟು ಸ್ಥಿತಿವಂತರಾಗಿದ್ದಾರೆ. ನಮ್ಮ ಧಾರ್ಮಿಕ ಕಲೆಗಳಿಗೂ ಬಡತನಕ್ಕೂ ಎಂಥದೊ ಒಂದು ಸಂಬಂಧವಿದೆ.



ಚೈತನ್ಯ ಪಂಥದ ಸಂತರ ಆನಂದೋನ್ಮಾದ



ಬಸುದೇವ್ ಅವರ ಮಡದಿ ಮೀನು ಸ್ವಚ್ಛಗೊಳಿಸುತ್ತಿರುವುದು

ಕಲೆಗಳು ಅನುಭಾವಿಕವಾಗಿರುತ್ತವೆ. ಆದರೆ ಅವಕ್ಕೆ ಸಾಮಾಜಿಕ ನಿಕೃಷ್ಟತೆಯಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಬೆಂಗಳೂರಿಗೆ ಬರುವಾಗ, ರೈಲಿನಲ್ಲಿ ನಮ್ಮ ಆಸುಪಾಸು ಐಟಿ ಕಂಪನಿಗಳಲ್ಲಿ ಕೆಲಸ ಮಾಡುವ ಬಂಗಾಳಿ ತರುಣರಿದ್ದರು. ಅವರು ಲ್ಯಾಪ್‌ಟಾಪುಗಳಲ್ಲಿ ಬಂಗಾಳಿ ಸಿನಿಮಾಗಳನ್ನು ನೋಡುತ್ತಿದ್ದರು. ಇಯರ್‌ಫೋನು ಹಾಕಿಕೊಂಡು ಯಾವುದೊ ಸಂಗೀತ ಕೇಳುತ್ತಿದ್ದರು. ಅವರ ಜತೆ ಹರಟುತ್ತ ನಾನು ಬಾವುಲರ ಸುದ್ದಿ ತೆಗೆದೆ. ಅವರು ಈ ಬಗ್ಗೆ ಹೆಚ್ಚು ಉತ್ಸಾಹ ತೋರಲಿಲ್ಲ. ಭಿಕ್ಷುಕರ ಹಾಡುಗಳೆಂದು ಅವರಿಗೆ ತಾತ್ಸಾರವೇ ?

ಬೆಳಿಗ್ಗೆಯೇ ಎದ್ದು ಬಸುದೇವರ ಮನೆಗೆ ಹೋದೆವು. ಬೆಳಗಿನ ಭೇಟಿಯಲ್ಲಿ ಬಾವುಲ್ ಹಾಡಿಕೆ ಈಗಲಾದರೂ ಕೇಳುವ ಆಸೆಯಿತ್ತು ಬಾನುಗೆ. ಬಸುದೇವ್ ಇನ್ನೂ ಠಾಕೂರರ ಮನೆಯಿಂದ ಬಂದಿರಲಿಲ್ಲ. ಅಲ್ಲಿಯತನಕ ಅವರ ೧೨ ವರ್ಷದ ಮಗ ನಮಗೆ ಏಕತಾರ ನುಡಿಸಿ ತೋರಿಸಿದನು. ಬಸುದೇವರ ಮಡದಿ ಆನಂದಲಹರಿ ನುಡಿಸಿ ತೋರಿದರು. ಕಡೆಯಲ್ಲಿ ಮೆತ್ತಗೆ ''ದಾದಾ ದಾದಾ, ನೀವು ನಮ್ಮನ್ನು ಬೆಂಗಳೂರಿಗೆ ಕರೆದರೆ ನಾನೂ ಬರುತ್ತೇನೆ. ನನಗೆ ಕರೆತರುವಂತೆ ಅವರಿಗೆ ಒಂದು ಮಾತು ಹೇಳು. ಕೇರಳಕ್ಕೆ ಹೋದಾಗ ಅವರು ನನ್ನನ್ನು ಬಿಟ್ಟುಹೋಗಿದ್ದರು'' ಎಂದು ದೂಷಿಸುವ ದನಿಯಲ್ಲಿ ಹೇಳಿದರು. 'ನಾನು ಆನಂದಲಹರಿ ಬಾರಿಸುತ್ತೇನೆ. ನನ್ನ ಮಗ ದೊಡ್ಡವನಾಗಲಿ, ಅವನ ಹಿಂದೆ ನಾನೂ ದೇಶ ತಿರುಗಿ ಬರುತ್ತೇನೆ' ಎಂದು ಷರಾ ಸೇರಿಸಿದರು.

ಬಿಸಿಲೇರುವ ಹೊತ್ತಿಗೆ ಸೈಕಲ್ಲಿನಲ್ಲಿ ಬಸುದೇವರ ಸವಾರಿ ಬಂತು. ಸೈಕಲ್ ಹ್ಯಾಂಡಲಿಗೆ ಸಿಕ್ಕಿಸಿದ ಚೀಲದಲ್ಲಿ ಒಂದು ಮೀನು. ಕೈಚೀಲದಲ್ಲಿ ಮಸಾಲೆ ಸಾಮಾನು. ನಮ್ಮನ್ನು ನೋಡಿ ಯಾಕೊ ಬಸುದೇವರ ಮುಖ ಅರಳಲಿಲ್ಲ. ಬಹುಶಃ ನಿದ್ದೆಯಿನ್ನೂ ಮುಗಿದಂತೆ ಕಾಣಲಿಲ್ಲ. ಒಣಗಿದ ದನಿಯಲ್ಲಿ ''ದಾದಾ ಕ್ಷಮಿಸಿ, ಇವತ್ತು ನಿಮಗೆ ಹಾಡಲಾರೆ. ದಣಿವಾಗಿದೆ. ನನಗೆ ವಿಶ್ರಾಂತಿ ಬೇಕು'' ಎಂದರು. ನಾವು ಕೂಡ ಶಾಕ್ತಕ್ಷೇತ್ರವಾದ ತಾರಾಪೀಠಕ್ಕೆ ರೈಲನ್ನು ಹಿಡಿಯಬೇಕಿತ್ತು. ಅವರಿಗೆ ನನ್ನ ವಿಳಾಸ ಕೊಟ್ಟು, ''ಬೆಂಗಳೂರಿನಿಂದ ಕರೆ ಬಂದರೆ ದಯವಿಟ್ಟು ಬರಬೇಕು'' ಎಂದೆ. ಅವರ ಮಡದಿ ಓರೆನೋಟದಲ್ಲಿ ನನ್ನನ್ನೇ ನೋಡುತ್ತಿದ್ದುದನ್ನು ಕಂಡು, ''ನಿಮ್ಮ ಮಡದಿಯನ್ನು ಮರೆಯದೆ ಕರೆದುಕೊಂಡು ಬನ್ನಿ'' ಎಂದು ಸೇರಿಸಿದೆ. ಬಸುದೇವ್ 'ಆಗಲಿ ಆಗಲಿ' ಎಂದು ಹೇಳಿ ಮಡದಿಯತ್ತ ಮೀನು ಕೊಟ್ಟು ಅಡುಗೆ ಮಾಡು ಎಂದರು. ನಾವು ಹೊರಡಬಹುದು ಎಂಬುದಕ್ಕೆ ಬೇಕಾದಷ್ಟು ಸೂಚನೆ ಸಿಕ್ಕವು. ಬಸುದೇವರಿಗೆ ಏನಾದರೂ ಸಂಭಾವನೆಯನ್ನು ಕೊಡಲೇ, ಎಷ್ಟು ಕೊಡಲಿ, ಕೊಟ್ಟರೆ ಭಿಕ್ಷೆಯೆಂದು ಎಲ್ಲಿ ತಿಳಿದುಕೊಳ್ಳುವರೊ ಎಂದೆಲ್ಲ ಒಳಗೇ ಪರಿತಪಿಸುತ್ತ, ನಮಸ್ಕಾರ ಮಾಡಿದೆ.

ತನ್ನನ್ನೂ ಬೆಂಗಳೂರಿಗೆ ಕರೆದುಕೊಂಡು ಬರಲು ಹೇಳೆಂದು ಬಗೆಬಗೆಯಲ್ಲಿ ಸನ್ನೆಮಾಡುತ್ತಿದ್ದ ಬಸುದೇವರ ಮಡದಿ, ಗಂಡ ಕೆಕ್ಕರಿಸಿದೊಡನೆ ತಣ್ಣಗೆ ಮೀನು ಇಸಿದುಕೊಂಡು, ಅಲ್ಲೇ ಅಂಗಳದಲ್ಲಿ ಕೂತು, ಈಳಿಗೆಮಣೆ ಮೆಟ್ಟಿಕೊಂಡು ಅದರ ಸಿಪ್ಪೆಯನ್ನು ಹೆರೆಯತೊಡಗಿದಳು. ಹೊರಡುತ್ತ ಆಕೆಗೂ ನಮಸ್ಕರಿಸಿದೆವು. ''ಆಗಲಿ, ಹೋಗಿಬನ್ನಿ'' ಎಂದಳು. ದನಿಯಲ್ಲಿ ಉಲ್ಲಾಸವಿರಲಿಲ್ಲ.


ರಹಮತ್ ತರೀಕೆರೆ

'ಸೂಫಿ', ಎಂ. ಪಿ. ಪ್ರಕಾಶ ನಗರ, ಹೊಸಪೇಟೆ - ೫೮೩ ೨೦೧






ಬಾವುಲರ ಒಂದು ಭಿತ್ತಿ ಚಿತ್ರ




# ವಿಜಯನಗರ ಪುನಶ್ಚೇತನ ಟ್ರಸ್ಟ್ ಸಂವಿಧಾನಬಾಹಿರ

ಶ್ರೀಕೃಷ್ಣದೇವರಾಯರ ಪಟ್ಟಾಭಿಷೇಕವು ಜರುಗಿದ ೫೦೦ನೇ ವರ್ಷಾಚರಣೆಯ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಗತವೈಭವವನ್ನು ಪುನರ್ ನೆನಪಿಸುವ ಹಾಗೂ ಭಾರತೀಯ ಸಂಸ್ಕೃತಿಯ ವೈವಿಧ್ಯತೆಯನ್ನು ಪ್ರೋತ್ಸಾಹಿಸುವ ಪ್ರೇರಣೆಯಿಂದ ಹಾಗೂ ವಿಜಯನಗರ ಸಾಮ್ರಾಜ್ಯ ನಡೆಸಿದ ಚಟುವಟಿಕೆಗಳನ್ನು ಬಿಂಬಿಸುವ ದೃಷ್ಟಿಯಿಂದ... ಕಮಲಾಪುರ ಗ್ರಾಮದಲ್ಲಿ ವಿಜಯನಗರ ಪುನಶ್ಚೇತನ ಪ್ರತಿಷ್ಠಾನ (ಟ್ರಸ್ಟ್) ರಚಿಸಲು ಸರ್ಕಾರ ದಿನಾಂಕ ೧-೧-೨೦೧೦ರಂದು ಒಂದು ಆದೇಶ ಹೊರಡಿಸಿತು. ಈ ಆದೇಶಕ್ಕೆ ಅನುಗುಣವಾಗಿ ದಿನಾಂಕ ೨೫-೧-೨೦೧೦ರಂದು ಒಂದು ಟ್ರಸ್ಟ್ ಡೀಡನ್ನು ಹೊಸಪೇಟೆ ಉಪನೋಂದಣಿ ಅಧಿಕಾರಿ ಕಛೇರಿಯಲ್ಲಿ ನೋಂದಣಿ ಮಾಡಲಾಯಿತು. ಈ ಟ್ರಸ್ಟ್‌ಗೆ ಕನ್ನಡ ವಿ.ವಿ.ದ ವ್ಯಾಪ್ತಿಯಲ್ಲಿ ಬರುವ ೮೦ ಎಕರೆ ಭೂಮಿಯನ್ನು ಹಸ್ತಾಂತರಿಸಲು ಉನ್ನತ ಶಿಕ್ಷಣ ಇಲಾಖೆ ದಿನಾಂಕ ೨೨-೦೧-೨೦೧೦ರ ಸಂಖ್ಯೆ ಇಡಿ ೦೩.ಕೆ.ವಿ.ವಿ :೨೦೧೦ ರಂದು ಆದೇಶಿಸಿತು.

ಈ ಆದೇಶ ಹೊರಬಿದ್ದೊಡನೆ ಕರ್ನಾಟಕಾದ್ಯಂತ ಕನ್ನಡ ಸಾಹಿತಿಗಳು, ಕಲಾವಿದರು, ಕನ್ನಡ ಭಾಷೆ, ಕರ್ನಾಟಕ ಹಿತರಕ್ಷಣೆಯ ಧುರಂಧರರು, ಕನ್ನಡ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳು, ಜ್ಞಾನಪೀಠ ಪ್ರಶಸ್ತಿ ವಿಜೇತರು, ಕವಿವಿ ನಾಡೋಜ ಪ್ರಶಸ್ತಿ ವಿಜೇತರು, ಕವಿವಿ ಅಧ್ಯಾಪಕ ವರ್ಗ, ...ಇತ್ಯಾದಿ ನಾಯಕರು ಆಕ್ರೋಶದಿಂದ 'ಅಂಬರಕ್ಕೆ ಪುಟ ನೆಗೆದು' ವಿವಿ ಭೂಮಿಯನ್ನು ಪ್ರತಿಷ್ಠಾನಕ್ಕೆ ಹಸ್ತಾಂತರ ಮಾಡಲೇ ಬಾರದೆಂದು ಅಬ್ಬರಿಸಿದರು. 'ಹೋರಾಟ' 'ಉಗ್ರ ಹೋರಾಟ', 'ಅತ್ಯುಗ್ರ ಹೋರಾಟ'... ನಡೆಸುವುದಾಗಿ ಪ್ರಚಂಡ ಚಳವಳಿಗೆ ಕರೆಕೊಟ್ಟರು. ಈ ಪತ್ರಿಕಾ ಹೇಳಿಕೆಯ ದಾವಾಗ್ನಿಯ ಚಳವಳಿಯ ವಿರೋಧದ ಮಧ್ಯದಲ್ಲಿಯೂ ದಿನಾಂಕ ೨೯-೦೧-೨೦೧೦ರಂದು ಶ್ರೀ ಅಡ್ವಾಣಿಯವರು ಭೂಮಿಪೂಜೆ ನಡೆಸಿದರು.



ಪ್ರತಿಷ್ಠಾನಕ್ಕೆ ವಿರೋಧ ರಾಜ್ಯಪಾಲರ ಗಮನಕ್ಕೂ ಹೋಯಿತು. ಉಭಯಸದನವಲ್ಲೂ ಗದ್ದಲ ಎದ್ದಿತು. ಆಗ ಮಾನ್ಯ ಮುಖ್ಯಮಂತ್ರಿಗಳು ವಿವಿ ಭೂಮಿಯ ಒಂದಂಗುಲ ಭೂಮಿಯನ್ನೂ ಟ್ರಸ್ಟಿಗೆ ವರ್ಗಾಯಿಸುವುದಿಲ್ಲ ಎಂದು ವಿಧಾನ ಪರಿಷತ್ತಿನಲ್ಲಿ ಹೇಳಿಕೆ ಕೊಟ್ಟರು. ಈ ಹೇಳಿಕೆ ಮುದ್ರಣ ಮಾಧ್ಯಮಗಳಲ್ಲಿ ಅಚ್ಚಾಗಿ ಮಸಿ ಆರುವ ಮೊದಲೇ ಹೋರಾಟ ಮತ್ತು ಚಳವಳಿಯ ನಾಯಕಮಣಿಗಳು ಮುಖ್ಯಮಂತ್ರಿಗಳ ಹೇಳಿಕೆಯನ್ನು ಸ್ವಾಗತಿಸಿ ಬಾಯ್ತುಂಬ ಹೊಗಳಿದರು. ಅಲ್ಲಿಗೆ ಎಲ್ಲ ತಣ್ಣಗಾಯಿತು ! ತಮ್ಮ ಹೋರಾಟಕ್ಕೆ ಜಯವಾಯಿತೆಂದು ಭುಜ ಚಪ್ಪರಿಸಿಕೊಂಡರು.

ಮುಖ್ಯಮಂತ್ರಿಗಳ ಹೇಳಿಕೆಯಿಂದ ಕವಿವಿ ಭೂಮಿ ಹಸ್ತಾಂತರ ಇತ್ಯರ್ಥವಾಯಿತೆ? ದಿನಾಂಕ ೨೨-೦೧-೨೦೧೦ರ ಉನ್ನತ ಶಿಕ್ಷಣ ಇಲಾಖೆ ಹೊರಡಿಸಿದ ಇಡಿ.೩.ಕವಿವಿ.೨೦೧೦ರ ಆದೇಶ ರದ್ದಾಯಿತೆ? ಇದು ಅಸಲು ಪ್ರಶ್ನೆ. **ಎಲ್ಲಿಯವರೆಗೆ ಉನ್ನತ ಶಿಕ್ಷಣ ಇಲಾಖೆಯ ಈ ಆದೇಶವನ್ನು ಸರ್ಕಾರ, ರಾಜ್ಯಪಾಲರ ಒಪ್ಪಿಗೆ ಮತ್ತು ಅಂಕಿತದ ಅಡಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಗಳು ಹಿಂತೆಗೆದುಕೊಳ್ಳುವುದಿಲ್ಲವೊ ಅಲ್ಲಿಯವರೆಗೆ ಮುಖ್ಯಮಂತ್ರಿಗಳು ಸದನದಲ್ಲಿ ಹೇಳಿದ ಮಾತು ಗಾಳಿಮಾತು !** ಅದಕ್ಕೆ ಸರ್ಕಾರೀ ಆದೇಶದ (ಆಜ್ಞೆಯ) ಸ್ವರೂಪ ಬರುವುದಿಲ್ಲ. ಹಾಗೆಂದು ಅರ್ಧತ್ತು ವರ್ಷಗಳ ಹಿಂದೆ ಮದ್ರಾಸ್ ಉಚ್ಚನ್ಯಾಯಾಲಯ ತೀರ್ಪು ಕೊಟ್ಟಿದೆ. ಮಂತ್ರಿಗಳ ಭರವಸೆ, ಆಶ್ವಾಸನೆ, ಸದನದ ಹೇಳಿಕೆ ಸರ್ಕಾರದ ಕಾರ್ಯದರ್ಶಿಗಳ ಅಂಕಿತದ ಮೂಲಕ ಆದೇಶದ ರೂಪ ಪಡೆದಾಗ ಅದಕ್ಕೊಂದು ಬೆಲೆ. ಇಲ್ಲದಿದ್ದರೆ ಅದಕ್ಕೆ ಕಿಮ್ಮತ್ತು ಏನೂ ಇಲ್ಲ. ಹಾಗಾದರೆ ಮುಖ್ಯಮಂತ್ರಿಗಳ ಘೋಷಣೆಯ ಪ್ರಯೋಜನವೇನು ? ಪತ್ರಿಕೆಗಳ ಮೂಲಕ ಅಬ್ಬರಿಸುವ ಚಳವಳಿಗಾರರ ಬಾಯಿಮುಚ್ಚಿಸಿದ್ದು! ಸದ್ಯ ಬೀಸುವ ದೊಣ್ಣೆಯ ಹೊಡೆತ ತಪ್ಪಿಸಿಕೊಂಡದ್ದು ಮಾತ್ರ. ಈ ಗದ್ದಲದ ಸದ್ದಡಗಿದ ಮೇಲೆ ಮತ್ತೊಬ್ಬ ದೇವರು ! ಇದು ಎಲ್ಲ ಸರ್ಕಾರಗಳ ಕಾರ್ಯತಂತ್ರ.

ಎಂಬತ್ತು ಎಕರೆ ಭೂಮಿಯ ಹಸ್ತಾಂತರ ಗೌಣ ವಿಚಾರ. ಅಸಲು ಈ ಟ್ರಸ್ಟ್ ರಚಿಸುವ ಅಧಿಕಾರ ಸರ್ಕಾರಕ್ಕೆ ಇದೆಯೆ ? ರಾಜ್ಯ ಅಥವಾ ಕೇಂದ್ರ ರಚಿಸಿದ ಯಾವ ಶಾಸನದ, ಎಷ್ಟನೆಯ ಕಲಮಿನ ಅಡಿಯಲ್ಲಿ ಪ್ರಾಪ್ತವಾದ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರದಿಂದ ಈ ಟ್ರಸ್ಟನ್ನು ರಚಿಸಲಾಗಿದೆ ? ಇದು ಮೂಲಭೂತವಾದ ಪ್ರಶ್ನೆ. ಜಾರಿಯಲ್ಲಿ ಇರುವ ಯಾವ ಕಾಯಿದೆಯಲ್ಲೂ ಇಂಥ ಸಾಮ್ರಾಜ್ಯ ಪುನಶ್ಚೇತನ ಟ್ರಸ್ಟ್ ಅನ್ನು ನಿರ್ಮಿಸುವ ಅಧಿಕಾರವನ್ನು ಸರ್ಕಾರಕ್ಕೆ ಕೊಟ್ಟಿಲ್ಲ (ನನಗೆ ತಿಳಿದಮಟ್ಟಿಗೆ). ಒಂದುವೇಳೆ ಸಂವಿಧಾನದ ೧೬೨ನೇ ಆರ್ಟಿಕಲ್ ಕೆಳಗೆ ಕಾರ್ಯಾಂಗದ ಅಧಿಕಾರವನ್ನು ಚಲಾಯಿಸಬಹುದೆ ? ಒಂದುವೇಳೆ ಆ ಅಧಿಕಾರವನ್ನು ಉಪಯೋಗಿಸಿಕೊಂಡು ಈ ಟ್ರಸ್ಟನ್ನು ರಚಿಸಲಾಗಿದೆ ಎಂದರೂ ೧೮೮೨ರ ಟ್ರಸ್ಟ್ ಆಕ್ಟ್‌ಗೆ ವಿರೋಧವಲ್ಲದ, ವ್ಯತಿರಿಕ್ತವಲ್ಲದ, ಜಾರಿಯಲ್ಲಿರುವ ಸಂವಿಧಾನ ಮತ್ತು ಯಾವುದೇ ಶಾಸನದ ಉಲ್ಲಂಘನೆ ಆಗುವಂಥ ಉದ್ದೇಶಗಳಿಗಾಗಿ ಟ್ರಸ್ಟ್ ಸ್ಥಾಪಿಸಕೂಡದು.

ನಮ್ಮ ಸಂವಿಧಾನದಲ್ಲಿ ಗಣರಾಜ್ಯ ಆಡಳಿತ Republican ಅಂಗೀಕರಿಸಲಾಗಿದೆ. ಸಂವಿಧಾನವನ್ನು ೨೬-೧೧-೪೯ರಲ್ಲಿಯೇ ಮಂಜೂರು ಮಾಡಿದರೂ ಅದು ಜಾರಿಯಲ್ಲಿ ಬಂದದ್ದು ೨೬-೧೧-೧೯೫೦. ಯಾಕೆಂದರೆ ೧೯೪೯ರಲ್ಲಿ ಭಾರತ ಬ್ರಿಟನ್ ಚಕ್ರವರ್ತಿಯ ಸಾಂಕೇತಿಕ ಅಧೀನ ದೇಶ Dominion ಆಗಿತ್ತು. ಎಲ್ಲಿಯವರೆಗೆ ಚಕ್ರವರ್ತಿ, ರಾಜ, ಮಹಾರಾಜರ ಅಧೀನರಾಗಿದ್ದೆವೊ ಅಲ್ಲಿಯವರೆಗೆ ನಮ್ಮ ದೇಶ ಗಣರಾಜ್ಯವಾಗಲು ಸಾಧ್ಯವಿರಲಿಲ್ಲ. ಗಣರಾಜ್ಯಕ್ಕೂ (ಪ್ರಜಾಸತ್ತೆಗೂ) ಅರಸೊತ್ತಿಗೆಗೂ ಅಜಗಜಾಂತರ ವ್ಯತ್ಯಾಸ! ಈ ಕಾನೂನಿನ ದೃಷ್ಟಿಯಿಂದ ವಿಜಯನಗರ ಪುನಶ್ಚೇತನ ಪ್ರತಿಷ್ಠಾನದ ಉದ್ದೇಶ ಪತನವಾಗಿಹೋದ, ಮರೆತುಹೋದ ಸಾಮ್ರಾಜ್ಯವನ್ನು ಮತ್ತೆ ವೈಭವೀಕರಿಸಿ, ಗಣರಾಜ್ಯದ ಸಂವಿಧಾನದ ಧ್ಯೇಯೋದ್ದೇಶಕ್ಕೆ ಭಂಗತರುವ ಸಂವಿಧಾನ ವಿರೋಧಿ ಸಂಸ್ಥೆ! ಸಂವಿಧಾನ ಆರ್ಟಿಕಲ್ ೧೭ರ ಪ್ರಕಾರ ಅಸ್ಪೃಶ್ಯತೆಯನ್ನು ಅನಾಮತ್ತು ನಿಷೇಧಿಸಿದೆ. ಒಂದು ವೇಳೆ ಯಾರೋ ಜಗದ್ಗುರು, ದೊಂಗಸನ್ಯಾಸಿ, ವಿಷಯ ಲಂಪಟ ಸನ್ಯಾಸಿ, ಅಸ್ಪೃಶ್ಯತಾ ಆಚರಣಾ ತರಬೇತಿ ಕೇಂದ್ರ ಸ್ಥಾಪನೆಗಾಗಿ ಒಂದು ಟ್ರಸ್ಟ್ ರಚಿಸಿದ್ದಾದರೆ ಅದು ಶಾಸನಬಾಹಿರವಾಗುತ್ತದೆ. ಹಾಗೆಯೆ ಈ ಪುನಶ್ಚೇತನ ಟ್ರಸ್ಟ್ ಅಳಿದುಹೋದ ಸಾಮ್ರಾಜ್ಯದ ಪುನಶ್ಚೇತನ ಮಾಡಲು ಸ್ಥಾಪಿಸುವುದು ಪ್ರಜಾಪೀಡಕರ, ಶೋಷಣೆಯ ತಾಯಿಬೇರು ಸಾಮ್ರಾಜ್ಯದ ಪುನಃಪ್ರತಿಷ್ಠಾಪನೆಯೇ ಸರಿ! ಈ ದೃಷ್ಟಿಯಿಂದ ಈ ಟ್ರಸ್ಟ್ ಸಂವಿಧಾನಬಾಹಿರ. ಲೋಹಿಯಾ ಅನುಯಾಯಿಗಳು ಈ ಟ್ರಸ್ಟ್ ರದ್ದತಿಗೆ ಮುಂದಾಗಬೇಕು. ಕವಿವಿಗೆ ಸೇರಿದ ೮೦ ಎಕರೆ ಭೂಮಿ ಉಳಿದರೇನು ? ಕೈತಪ್ಪಿದರೇನು ? ಗಣರಾಜ್ಯಾಡಳಿತೆಯ ರಕ್ಷಣೆಗಾಗಿ ಈ ಟ್ರಸ್ಟ್ ಬುಡಸಹಿತ ನಿರ್ಮೂಲನೆ ಆಗಬೇಕು. ಇದು ಮುಂದುವರಿದರೆ ಅದು ಸಂಘಪರಿವಾರದ ಸಂವರ್ಧನೆಯ ಆಶ್ರಮಕ್ಕೆ ವಜ್ರ ಕೋಟೆ ಆದೀತು. ಈಗಿರುವ ಟ್ರಸ್ಟಿಗಳ ಲಕ್ಷಣಗಳೆಲ್ಲ ಹಾಗೆಯೆ ಕಾಣುತ್ತದೆ. ಅಲ್ಲದೆ ಈ ಪ್ರತಿಷ್ಠಾನದ ಆಶ್ರಯದಲ್ಲಿ [illegible] ಚಕ್ರವರ್ತಿಗಳ ಪಟ್ಟಾಭಿಷೇಕ ಮಹೋತ್ಸವ, ಪುತ್ಥಳಿ ಅನಾವರಣಗೊಳ್ಳುವವು.

**ಕೋ. ಚೆನ್ನಬಸಪ್ಪ**



ವಿಶ್ವ ಕಥಾ ಕೋಶ, ಜ್ಞಾನ-ವಿಜ್ಞಾನ ಕೋಶ, ಗ್ಲೋಬಲ್ ಫಿಲಾಸಫಿ ಫಾರ್ ಎವೆರಿಮ್ಯಾನ್, ಮಾರ್ಕ್ಸ್‌ವಾದಿ ವಿಚಾರಧಾರೆ, ಸ್ವಾತಂತ್ರ್ಯೋತ್ತರ ಭಾರತ, ನವಕರ್ನಾಟಕ ಸಾಹಿತ್ಯ ಸಂಪದ, ಹೊಸತು ವಾಚಿಕೆ, ಮುಂತಾದ ನೂರಾರು ಮೌಲಿಕ ಗ್ರಂಥಮಾಲೆಗಳನ್ನು ಹಾಗೂ ನೂರಾರು ಉತ್ಕೃಷ್ಟ ಗ್ರಂಥಗಳನ್ನು ಹೊರತಂದಿರುವ ನವಕರ್ನಾಟಕ ಪ್ರಕಾಶನವು ತನ್ನ ಐವತ್ತನೆಯ ವರ್ಷದ ಸಂಭ್ರಮದಲ್ಲಿ ಆಗಸ್ಟ್ ೨೦೧೦ರ ವೇಳೆಗೆ ''ಕರ್ನಾಟಕ ಕಲಾದರ್ಶನ'' ಎಂಬ ಬೃಹದ್ಗ್ರಂಥವನ್ನು ಪ್ರಕಟಿಸಲಿದೆ. ಚಿತ್ರಕಲೆ, ಶಿಲ್ಪಕಲೆ, ರಂಗಭೂಮಿ, ನೃತ್ಯ, ಸಂಗೀತ, ಹೀಗೆ ಒಂಭತ್ತು ಕಲಾಪ್ರಕಾರಗಳನ್ನು ಸಮಗ್ರವಾಗಿ ಹಾಗೂ ವಿಮರ್ಶಾತ್ಮಕವಾಗಿ ಪರಿಚಯಿಸುವ ಈ ಗ್ರಂಥವನ್ನು ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ವಿಜಯಾ ಮತ್ತು ಶ್ರೀ. ಸಿ. ಆರ್. ಕೃಷ್ಣರಾವ್ ಸಂಪಾದಿಸಿದ್ದಾರೆ. ಆಯಾ ಕ್ಷೇತ್ರದ ೫೫ ಪರಿಣತರು ಬರೆದ ಲೇಖನಗಳೊಟ್ಟಿಗೆ ೪೨೦೦ ವರ್ಣಚಿತ್ರಗಳನ್ನು ಹೊಂದಿರುವ ಎರಡು ಸಂಪುಟಗಳ ಈ ಗ್ರಂಥವನ್ನು ಇಡಿಯಾಗಿ ಆರ್ಟ್ ಕಾಗದವನ್ನು ಬಳಸಿ ಮುದ್ರಿಸಲಾಗಿದೆ. ಅದರ ಮುಖಬೆಲೆ ರೂ. ೩,೦೦೦, ಆದರೆ ಪ್ರಕಟಣಾಪೂರ್ವದಲ್ಲಿ ನೋಂದಾಯಿಸಿಕೊಂಡರೆ ರೂ. ೨೦೦೦, ಎಂದು ಪ್ರಕಾಶನ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಶ್ರೀ. ಆರ್. ಎಸ್. ರಾಜಾರಾಮ್ ಮಾರ್ಚ್ ೧೫ರಂದು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು. ಒಂದೊಂದು ವಿಭಾಗವನ್ನೂ ವಿವರವಾಗಿ ಬರೆದರೆ ಒಂದೊಂದೂ ಇಡೀ ಗ್ರಂಥವಾಗಬಹುದಾದಂತಹ ಕಲಾಕ್ಷೇತ್ರ ಇದು; ಆದರೆ ಅದನ್ನು ಚಾರಿತ್ರಿಕ ದಾಖಲೆಯ ರೂಪದಲ್ಲಿ ಸಾಕಷ್ಟು ಸಂಕ್ಷಿಪ್ತವಾಗಿ, ಆದರೆ ಕ್ಲುಪ್ತವಾಗಿ,

# ಕರ್ನಾಟಕ ಕಲಾದರ್ಶನ



ಸಂಗ್ರಹಿಸಲಾಗಿದೆ, ಎಂದು ಸಂಪಾದಕರಲ್ಲೊಬ್ಬರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯ ಹೇಳಿದರು. ಎಲ್ಲ ಸಾಂಪ್ರದಾಯಿಕ ಕಲೆಗಳನ್ನು ವ್ಯಾಪಾರೀಕರಣದ ಭಾಗವಾಗಿ ಮಾಡಿಕೊಳ್ಳುವ ಹುನ್ನಾರ ವ್ಯಾಪಕವಾಗಿ ಹರಡಿರುವ ಇಂದಿನ ಸಂದರ್ಭದಲ್ಲಿ ಅವನ್ನು ಉಳಿಸಲು, ಮುಂದಿನ ಪೀಳಿಗೆಗಳಿಗೆ ಈ ಸಂಪತ್ತನ್ನು ಹಸ್ತಾಂತರಿಸಲು ಮತ್ತು ಘೋರವಾಗಿ ದಾಪುಗಾಲು ಹಾಕುತ್ತಿರುವ ಜಾಗತೀಕರಣದ ವಿನಾಶಕಾರಿ ಪ್ರಭಾವವನ್ನು ತಡೆಗಟ್ಟಲು ಪ್ರಸ್ತುತ ಗ್ರಂಥವು ಸಹಾಯ ಮಾಡಲಿದೆಯೆಂಬ ಭರವಸೆಯನ್ನು ಇನ್ನೊಬ್ಬ ಸಂಪಾದಕರಾದ ಡಾ॥ ವಿಜಯಾ ವ್ಯಕ್ತಪಡಿಸಿದರು. ೧೨೦೦ ಪುಟಗಳ ಈ ಗ್ರಂಥದಿಂದ ಆಯ್ದ ೧೦೦ ಪುಟಗಳ ಸಾಮಗ್ರಿಯನ್ನು ಸಿ. ಡಿ. ರೂಪದಲ್ಲಿ ಸಿದ್ಧಪಡಿಸಲಾಗಿದ್ದು ಅದನ್ನು ಮಾಧ್ಯಮ ಪ್ರತಿನಿಧಿಗಳಿಗೆ ಪತ್ರಿಕಾ ಗೋಷ್ಠಿಯಲ್ಲಿ ನೀಡಲಾಯಿತು. ಇಂತಹ ಮಹತ್ವದ ಕೃತಿಯನ್ನು ಕನ್ನಡದಲ್ಲಿ ಹೊರತರಲು ನವಕರ್ನಾಟಕ ಪ್ರಕಾಶನಕ್ಕೆ ಹೆಮ್ಮೆ ಎನಿಸುತ್ತದೆಂದು ತಿಳಿಸಿದ ಶ್ರೀ. ಸಿ. ಆರ್. ಕೃಷ್ಣರಾವ್ ಯೋಜನೆಯನ್ನು ನಾಲ್ಕು ವರ್ಷಗಳಲ್ಲಿ ಕಾರ್ಯಗತಗೊಳಿಸಲು ಹಲವು ಲೇಖಕರು, ಕಲಾವಿದರು ಮತ್ತು ಛಾಯಾಚಿತ್ರಗ್ರಾಹಕರು ಅಪೂರ್ವವಾದ ಸಹಕಾರ ನೀಡಿರುವುದನ್ನು ಸ್ಮರಿಸಿದರು.

'ಹೊಸತು' ಓದುಗರು ''ಕರ್ನಾಟಕ ಕಲಾದರ್ಶನ''ವನ್ನು ಸ್ವಾಗತಿಸಿ, ಪ್ರೋತ್ಸಾಹಿಸಿ, ಪ್ರಕಟಣಾಪೂರ್ವ ಬೆಲೆಗೆ ಅದನ್ನು ಪಡೆದುಕೊಳ್ಳುತ್ತಾರೆಂದು ಆಶಿಸುತ್ತೇವೆ.

— ಸಂ.






# ಸಂಬಂಧಗಳು

ವಸುಮತಿ ಉಡುಪ

ಕ್ಷಣಗಣನೆ ಅನ್ನುವುದು ಆರಂಭವಾಗಿಬಿಟ್ಟಿತ್ತು. ಇಷ್ಟು ಹೊತ್ತಿಗೆ ಮೀಟಿಂಗ್ ಹಾಲ್‌ನಲ್ಲಿ ಒಂದು ಸಭೆ ಸೇರಿರುತ್ತದೆ. ಪೇಪರ್ ಪ್ಲೇಟಿನಲ್ಲಿ ಸ್ವೀಟು, ಖಾರ, ಪ್ಲಾಸ್ಟಿಕ್ ಲೋಟದಲ್ಲಿ ಅರ್ಧರ್ಧ ಕಾಫಿ. ನಾಲ್ಕಾರು ಜನ ಗುಣಗಾನದ ಭಾಷಣ ಮಾಡುತ್ತಾರೆ. ಹೃದಯತುಂಬಿ ಬೀಳ್ಕೊಡುತ್ತಿರುವುದನ್ನು ಹಂಚಿಕೊಳ್ಳುತ್ತಾರೆ. ಮೇಲಧಿಕಾರಿ ಶಾಲು ಹೊದಿಸಿ, ಒಂದಿಬ್ಬರು ಸಂದರ್ಭವನ್ನು ಶಾಶ್ವತವಾಗಿ ಸೆರೆ ಹಿಡಿದು, ಕೊರಳಿಗೆ ಒಂದು ಹಾರ, ಕೈಗೆ ಫಲ ತಾಂಬೂಲದ ತಟ್ಟೆ, ವಂತಿಗೆ ಸೇರಿಸಿದ ದುಡ್ಡಿನಲ್ಲಿ ಒಂದು ಸ್ಮರಣಿಕೆ. ಒಬ್ಬೊಬ್ಬರಾಗಿ ಬಂದು ಕೈ ಕುಲುಕುವಾಗ ಯಜಮಾನರಿಗೆ ಮೂವತ್ಮೂರು ವರ್ಷಗಳಿಂದ ಅಭ್ಯಾಸವಾಗಿದ್ದ ದಿನಚರಿ ಏಕಾಏಕಿ ಅಂತ್ಯಗೊಂಡಿದ್ದರ ವಾಸ್ತವದ ಅರಿವಾಗಿ ಶೂನ್ಯಭಾವನೆ ಮನಸ್ಸನ್ನು ಆವರಿಸಬಹುದೇ? ಬದುಕು ಖಾಲಿಖಾಲಿಯಾದಂತೆ ವಿಷಣ್ಣಭಾವ? ಅಥವಾ ಸಂಕೋಲೆ ಕಳಚಿದ ಖುಷಿ? ಸ್ವತಂತ್ರರಾದ ಸಮಾಧಾನ?

ಹೀಗೆಲ್ಲಾ ಮನಸ್ಸಿನಲ್ಲೇ ಗುಡ್ಡಗುಣಿಸುತ್ತಾ ಕಾಮಾಕ್ಷಿ ಹಾಲ್‌ನ ಸೋಫಾದಲ್ಲಿ ಮೈಚೆಲ್ಲಿದ್ದರು. ಕೈಯಲ್ಲಿ ರಿಮೋಟ್. ಒಂದಾದ ಮೇಲೊಂದು ಚಾನಲ್ ಬದಲಿಸುತ್ತಾ ಕಣ್ಣ ತೆರೆಯ ಮೇಲೆ ಬಿಂಬಿಸುವುದರೊಳಗೆ ಮಾಯವಾಗುತ್ತಿದ್ದ ಟಿ.ವಿ. ಪರದೆಯ ಚಿತ್ರಗಳು. ಸ್ವತಃ ಅವರಿಗೆ ಏನೆನಿಸುತ್ತಿದೆ ಎಂಬ ಕಲಸುಮೇಲೋಗರದ ಮನೋಸ್ಥಿತಿಯ ಪ್ರತಿಫಲನಗಳು. ಹೀಗೆ ಕಾಮಾಕ್ಷಿ ಅದೆಷ್ಟು ಹೊತ್ತು ಕೂತಿರುತ್ತಿದ್ದರೋ, ನೆಪಕ್ಕೆ ಮುಂದೆ ಮಾಡಿದ್ದ ಬಾಗಿಲನ್ನು ತಳ್ಳಿಕೊಂಡು ಕಲಾವತಿ ಒಳಗೆ ಕಾಲಿಟ್ಟಳು.

''ಏನ್ಮಾಡ್ತಿದ್ದಿ ಅಮ್ಮಾ?''

''ಮಾಡೋದೇನಿದೆ? ಹೀಗೇ ಕೂತ್ಕೊಂಡು ನಿಮ್ಮಪ್ಪನ ದಾರಿ ಕಾಯ್ತಿದೀನಿ.''

''ಬೇಜಾರಾಗ್ತಿದೆಯಾ?''

''ಏನೋ, ಗೊತ್ತಾಗ್ತಿಲ್ಲಪ್ಪಾ...''

''ನಂಗಂತೂ ಸಖತ್ ಬೇಜಾರಾಗ್ತಿದೆ.''

ಕಲಾವತಿಗೆ ಬೇಜಾರಾಗಿರುವುದು ತುದಿನಾಲಿಗೆಯ ಮಾತು ಅಲ್ಲ ಎನ್ನುವಂತೆ ಅವಳ ಕಣ್ಣುಗಳು ತುಂಬಿಕೊಂಡವು.



''ಅಳೋದ್ಯಾಕೇ? ಹುಚ್ಚಿ...'' ಅಂದರು ಕಾಮಾಕ್ಷಮ್ಮ. ಅಷ್ಟು ಅನ್ನುವಾಗ ಅವರ ಗಂಟಲು ಗದ್ಗದವಾಯ್ತು. ಆಯ್ತು, ಇನ್ನು ಈ ಊರಿನ ನೀರಿನ ಋಣ ಮುಗಿಯಿತು. ಇಲ್ಲೂ ಕ್ಷಣಗಣನೆ ಆರಂಭವಾದ ಲೆಕ್ಕ. ಮನೆ ಖಾಲಿಮಾಡಲು ಭಾವಯ್ಯನಿಗೆ ಮೂರ್‍ನಾಲ್ಕು ತಿಂಗಳ ಅವಕಾಶ ಕೊಡಬೇಕಾಗಬಹುದು. ಕಳೆದ ಒಂದು ವರ್ಷದಿಂದ ಸಂದರ್ಭ ದೊರಕಿದಾಗ ಈ ಕುರಿತು ಸೂಚ್ಯವಾಗಿ ಹೇಳಿದ್ದಾಗಿದೆ. ಇವತ್ತು ನೇರವಾಗಿ ಹೇಳಬಹುದು.

ಹಿತ್ತಿಲಲ್ಲಿ ಹೂವು, ತರಕಾರಿ ಬೆಳೆಸುವುದು ಅಂದರೆ ಕಾಮಾಕ್ಷಿಗೆ ವಿಪರೀತ ಆಸೆ. ಬದುಕು ಅನ್ನುವುದು ಎಷ್ಟು ವಿಚಿತ್ರ! ಯಾವುದರ ಮೇಲೆ ಅತಿ ಆಸೆ ಇರುತ್ತೋ ಅದು ಕೈಗೆಟುಕದೆ ಕಣ್ಣಾಮುಚ್ಚಾಲೆ ಆಡಿಸುತ್ತದೆ. ಈ ಬೆಂಗಳೂರಲ್ಲಿ ಮೊದಲು ಇದ್ದಿದ್ದು ಅಪಾರ್ಟ್‌ಮೆಂಟಿನಲ್ಲಿ. ಬಟ್ಟೆ ಹರಡುವುದಕ್ಕೂ ಜಾಗ ಇಲ್ಲದ ಫ್ಲ್ಯಾಟು. ಇನ್ನು ಗಿಡ ಬೆಳೆಸುವುದು ಎಲ್ಲಿ? ಒಂದು ಪಾಟ್‌ನಲ್ಲಿ ತುಳಸಿಗಿಡ ನೆಟ್ಟು ತಮ್ಮ ಫ್ಲ್ಯಾಟಿನ ಜಗುಲಿಯ ತುದಿಯಲ್ಲಿ ಮೆಟ್ಟಿಲಿಳಿಯುವ ಜಾಗದಲ್ಲಿ ಇಟ್ಟುಕೊಂಡಿದ್ದರು ಕಾಮಾಕ್ಷಿ. ದಿವಸಾ ಸ್ನಾನ ಆದಮೇಲೆ ಪಂಚಪಾಳ ತೆಗೆದುಕೊಂಡು ಹೋಗಿ ತುಳಸಿಗೆ ಅರಿಶಿನ, ಕುಂಕುಮ ಏರಿಸಿ ಚುಟುಕು ಪೂಜೆ. ಗಿಡದ ರೆಂಬೆಯ ಸಂದಿಗೆ ಒಂದು ಹೂವು. ಕಾಮಾಕ್ಷಿ ನೆಟ್ಟ ಗಿಡ ಎಷ್ಟು ಜನ ಹೆಂಗಳೆಯರಿಂದ ಪೂಜೆ ಮಾಡಿಸಿಕೊಳ್ಳುತ್ತಿತ್ತೋ? ಯಾರ್‍ಯಾರೋ ನೀರು ಎರೆಯುತ್ತಿದ್ದರು. ಯಾರ್‍ಯಾರೋ ಮನೆದೇವರ ಪೂಜೆಗೆ ತುಳಸಿ ಕಿತ್ತುಕೊಳ್ಳುತ್ತಿದ್ದರು. ಕದಿರು ಬೆಳೆದಾಗ ಯಾರ್‍ಯಾರೋ ಚೂಟಿ ತೆಗೆದು ಆರೈಕೆ ಮಾಡುತ್ತಿದ್ದರು. ಅಪಾರ್ಟ್‌ಮೆಂಟಿನ ಸಣ್ಣ ಉದ್ಯಾನದ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಮಾಲಿ ಹೊಸಮಣ್ಣು, ಗೊಬ್ಬರ ಹಾಕಿಕೊಡುತ್ತಿದ್ದ. ಅವನಿಗೆ ಒಂದಿಷ್ಟು ಭಕ್ಷೀಸು. ''ನಮ್ಮಮ್ಮನ ತುಳಸಿಗಿಡ ಅಂದರೆ ಅದೊಂದು ಸಾರ್ವಜನಿಕ ಆಸ್ತಿ'' ಅಂತ ನೆಗಾಡುತ್ತಿದ್ದಳು ಕಲಾವತಿ. ತುಳಸಿದೀಪದ ದಿನ ಪಾಟಿನ ಸುತ್ತಾ ಹಣತೆಗಳ ಸಾಲು. ಗಿಡದ ಮೈ ತುಂಬ ಹೂಹಾರಗಳ ಘಮಲು. ಗಿಡದ ಬೇರುಗಳಿಗೆ ನೆಲದ ಮಣ್ಣಿನ ನೇರ ಸಂಪರ್ಕವಿದ್ದು, ಸುತ್ತಾ ಒಂದು ಕಟ್ಟೆ ಕಟ್ಟಿಸಿ, ಅದರ ಮೇಲೆ ಬಣ್ಣದ ಪೇಂಟಿನಲ್ಲಿ ರಂಗೋಲಿ ಅರಳಿಸುವ ಕನಸು ಇನ್ನೂ ಕನಸಾಗಿಯೇ ಉಂಟು. ಹಳ್ಳಿಯಿಂದ ಪೇಟೆ ಸೇರಿದವಳ ಬಣ್ಣದ ಕನಸು.

ಒಬ್ಬಳೇ ಮಗಳು ಕಲಾವತಿಗೆ ಮದುವೆಯಾಗಿ ಒಳ್ಳೆಯ ಮನೆ ಸೇರಿಕೊಂಡಳು. ಚಿಕ್ಕದಾಗಿದ್ದರೂ ಸ್ವಂತ ಮನೆ. ಮೇಲೆ ಒಂದು ಮನೆ ಕಟ್ಟಿಸಿ ಬಾಡಿಗೆಗೆ ಕೊಟ್ಟಿದ್ದರು. ''ಅತ್ತೆ, ಮಾವ ಇಲ್ಲೇ ಬಂದಿರ್‍ಲಿ. ಅಲ್ಲಿ ಕೊಡೋ ಬಾಡಿಗೆ ಇಲ್ಲೇ ಕೊಡಲಿ...'' ಎನ್ನುವ ಸಲಹೆ ಮೊದಲಿಗೆ ಬಂದಿದ್ದು ಅಳಿಯನ ಬಾಯಿಂದ. ಕಲಾವತಿಗೆ ವಿಪರೀತದ ಸಂತೋಷ. ಕಾಮಾಕ್ಷಿ ಹಿಂದೆಮುಂದೆ ನೋಡಿದ್ದರು.

''ನಿಮ್ಮತ್ತೆಗೆ ಇಷ್ಟವಾಗುತ್ತೋ, ಇಲ್ವೋ? ನೆಂಟರು ದೂರ ಇದ್ರೇ ಚಂದ

ಮದುವೆಯಾಗಿ ಇಷ್ಟು ವರ್ಷ ಆಯ್ತು. ಕಷ್ಟಸುಖ ಅಂದ್ರೆ ಇನ್ನೂ ಅಣ್ಣನ ಮುಖ ನೋಡ್ತಾಳಲ್ರೀ? ನಿಮ್ಮನ್ನೇನು ದುಡ್ಡಿನ ಗಿಡ ಅಂದ್ಕೊಂಡಿದಾಳಾ? ನಿಮ್ಗೇನಾದ್ರೂ ಕಷ್ಟ ಬಂದ್ರೆ ಅವರು ಕೈಯೆತ್ತಿ ಕೊಡ್ತಾರೇನ್ರೀ? ಬೇಡಪ್ಪಾ, ನಿಮಗೆ ಕೇಳೋಕಾದ್ರೂ ನಾಲಿಗೆ ಬರುತ್ತಾ?

ಇಂಥ ಮಾತುಗಳ ಪರಿಣಾಮ ಮಾತ್ರ ವಿಪರೀತವಾಯ್ತು. ತಂಗಿಗೆ ಆವಶ್ಯಕತೆ ಬಿದ್ದಾಗ ಕೃಷ್ಣಮೂರ್ತಿ ಹೆಂಡತಿಗೆ ಗೊತ್ತಿಲ್ಲದಂತೆ ಸಹಾಯ ಮಾಡುವುದಕ್ಕೆ ಶುರುಮಾಡಿದರು. ಕಾಮಾಕ್ಷಿಗೆ ಹೇಗೋ ಪತ್ತೆಯಾಗಿಬಿಡುತ್ತಿತ್ತು. ನಾದಿನಿಯ ಮನೆಗೆ ಹೋದಾಗ ಅವಳು ಯಾವುದೋ ಮಾತಿನ ನಡುವೆ ಈ ವಿಷಯದ ಪ್ರಸ್ತಾಪ ಮಾಡಿದರೆ ಸುಳಿವು ಸಿಗದೆ ಇರುವುದು ಹೇಗೆ? ಅಂತೂ ಗಂಡಹೆಂಡಿರಲ್ಲಿ ಈ ವಿಷಯದ ಕುರಿತಾಗಿ ಮನಸ್ತಾಪ. ಕಿರಿಕಿರಿ.

ಕಣೇ. ನಾಳೆ ಸಣ್ಣ ಮಾತು ಕೇಳೋ ಹಾಗಾಗ್ಬಾರ್ದು...'' ಎನ್ನುವ ಅವರ ಹಿಂಜರಿಕೆಯನ್ನು ಕಲಾವತಿ ತಟ್ಟಿ ಹಾರಿಸಿದ್ದಳು.

''ನಾನಾಗಿ ನಾನು ಕೇಳಿದ್ದಲ್ಲ ಅಮ್ಮಾ. ನಿಮ್ಮ ಅಳಿಯಾನೇ ಹೇಳಿದ್ದು. ಯಾರಿಗೋ ಬಾಡಿಗೆಗೆ ಕೊಡೋದನ್ನ ನಿಮಗೆ ಕೊಡ್ತೀವಪ್ಪಾ . ನೆಂಟರಿಗೆ ಬಾಡಿಗೆಗೆ ಮನೆ ಕೊಡಬಾರ್ದು ಅಂತ ರೂಲ್ಸಿದೆಯಾ ?''

ಅದೂ ಇದೂ ನೆವ ಹೇಳಿಕೊಂಡು ವರ್ಷೊಪ್ಪತ್ತು ಕಾಲ ತಳ್ಳಿದ್ದಾಯ್ತು. ಮಗಳು ಬಸುರಿಯಾದಾಗ ನೆವ ತಲೆಮರೆಸಿಕೊಂಡಿತು. ಒಂದೇ ಊರಲ್ಲಿದ್ದರೂ ಮಗಳ ಮನೆ ಒಂದು ದಿಕ್ಕು. ತಮ್ಮ ಮನೆ ಮತ್ತೊಂದು. ಬಸ್ಸು ಹಿಡಿದು ಹೋಗಲು ಘಂಟೆಗಟ್ಟಲೆ ಬೇಕು. ಒಟ್ಟಿನಲ್ಲಿ ಇಡೀ ದಿನದ ಕಾರ್ಯಕ್ರಮ. ಮನಸ್ಸು ಆ ಕಡೆ ವಾಲುತ್ತಿದ್ದಾಗಲೇ ಅಳಿಯ ಮನೆ ಖಾಲಿ ಮಾಡಿಸಿದ. ಖುದ್ದು ಆಹ್ವಾನಿಸಿದ. ಕಾಮಾಕ್ಷಿ, ಕೃಷ್ಣಮೂರ್ತಿ ದಂಪತಿ ಹೀಗೆ ಅಳಿಯನ ಮನೆ ಸೇರಿಕೊಂಡರು. ಕೃಷ್ಣಮೂರ್ತಿ ಕೆಲಸ ಮಾಡುತ್ತಿದ್ದ ವಿಧಾನಸೌಧಕ್ಕೆ ಎರಡೆರಡು ಬಸ್ಸು ಬದಲಾಯಿಸಿಕೊಂಡು ಹೋಗಬೇಕಾದಷ್ಟು ದೂರ. ಆದರೂ ಪರವಾಗಿಲ್ಲ, ಮಗಳು ಹತ್ತಿರವಿರುವ ಸುಖ, ಸಂತೋಷ. ಕೃಷ್ಣಮೂರ್ತಿ ತಪ್ಪದೆ ತಿಂಗಳ ಬಾಡಿಗೆಯನ್ನು ಅಳಿಯನ ಅಕೌಂಟಿಗೆ ಜಮಾ ಮಾಡುತ್ತಾ, ಹೂವು, ಹಣ್ಣು, ತರಕಾರಿ ಇತ್ಯಾದಿಗಳನ್ನು ಮನೆಗೆ ತರುವಾಗ ಮಗಳ ಮನೆಗೆ ಒಂದು ಪಾಲು ತರುತ್ತಾ, ಕಾಮಾಕ್ಷಿ ವಿಶೇಷದ ಅಡಿಗೆ ಮಾಡಿದರೆ ಮಗಳ ಮನೆಗೆ ಡಬ್ಬಿ. ಮಗಳಿಗೆ ಅಡಿಗೆ ಮಾಡಲು ಬೇಜಾರಾದಾಗ ಸರಬರಾಜು.

''ನೀವು ಬಂದ್ಮೇಲೆ ನಮ್ಮನೆ ಖರ್ಚು ಅರ್ಧಕ್ಕರ್ಧ ಕಡಿಮೆಯಾಗ್ಬಿಟ್ಟಿದೆ'' ಅನ್ನುತ್ತಿದ್ದ ಅಳಿಯ. ಆದರೆ ಅವನ ಅಮ್ಮನಿಗೆ ಏನೋ ಗುಮಾನಿ. ಈ ಬೀಗರು ಪುಗಸಟ್ಟೆ ಮನೆ ಸೇರಿಕೊಂಡಿದ್ದಾರೆ ಅನ್ನುವ ಸಂದೇಹ. ಅದರಿಂದಲೇ ಮಗಳ ಮನೆಗೆ ಕೈಬಿಚ್ಚಿ ಖರ್ಚು ಮಾಡುತ್ತಿದ್ದಾರೆ ಎನ್ನುವ ಕೊಂಕು. ಈ ಕೊಂಕು ಎಷ್ಟೋ ಸಲ ಪರೋಕ್ಷವಾಗಿ ವ್ಯಕ್ತವಾಗುತ್ತಾ ಕಾಮಾಕ್ಷಿಗೆ ಕಿರಿಕಿರಿಯಾಗುತ್ತಿತ್ತು. ಮಗಳಿಗೆ ಇದೆಲ್ಲಾ ಅರ್ಥವಾಗುತ್ತಿರಲಿಲ್ಲ ಎಂದಲ್ಲ. ಆದರೆ ಅದಕ್ಕೆಲ್ಲಾ ಹೆಚ್ಚಿನ ಬೆಲೆ ಕೊಡಬಾರದೆಂದು ಅವಳ ವಾದ. ನಾಲ್ಕು ವರ್ಷಗಳಲ್ಲಿ ಕಲಾವತಿಗೆ ಎರಡು ಬಾಣಂತನ. ಕಾಮಾಕ್ಷಿ ಮೂಗಿಗೆ ಕವಡೆ ಕಟ್ಟಿಕೊಂಡು ಎಲ್ಲಾ ನಿಭಾಯಿಸಿದರು. ಇದೆಲ್ಲಾ ತೌರುಮನೆಯವರ ಜವಾಬ್ದಾರಿ ಎನ್ನುತ್ತಾ ಬಿಡುಬೀಸಾಗಿರುವ ಕಲಾವತಿಯ ಅತ್ತೆ ಮಗ ಕೂಡ ಅತ್ತೆ, ಮಾವನ ಕಡೆ ವಾಲುತ್ತಿದ್ದಾನೆಂದು ಕರುಬಿದರು. ಒಟ್ಟಿನಲ್ಲಿ ಕೆಲಸಕಾರ್ಯ, ಖರ್ಚುವೆಚ್ಚಗಳಿಗೆ ಅವರು ಬೇಕು. ಆದರೆ ಮಗಳು, ಮೊಮ್ಮಕ್ಕಳೊಡನೆ ಅವರು ಸಂಭ್ರಮಪಡುವುದು ಕಣ್ಣುಕಿಸುರು. ಸಂಬಂಧಿಕರ ಹತ್ತಿರ ಏನೇನೋ ದೂರು. ಕಲಾವತಿ ಹಗಲು ಮೂರುಹೊತ್ತೂ ಅಮ್ಮನ ಮನೆಯಲ್ಲೇ ಕಾಲ ಹಾಕುತ್ತಾಳೆಂದು ಎಲ್ಲರನ್ನೂ ನಂಬಿಸಿಬಿಟ್ಟಿದ್ದರು ಅವಳ ಅತ್ತೆ. ಬಂದಾಗಿದೆ, ಇದ್ದಾಗಿದೆ, ಸದ್ದಿಲ್ಲದೆ ಇಲ್ಲಿಂದ ಕಳಚಿಕೊಂಡುಬಿಡಬೇಕು ಎಂದು ಯಾವತ್ತಿಂದಲೋ ಲೆಕ್ಕ ಹಾಕಿಟ್ಟುಕೊಂಡಿದ್ದರು ಕಾಮಾಕ್ಷಿ. ಮಗಳು ಹತ್ತಿರದಲ್ಲಿದ್ದಾಳೆ ಸರಿ, ಆದರೆ ನಾಲ್ಕುದಿನ ತೌರಿಗೆ ಬಂದು ಹಾಯಾಗಿರುವುದು ಎನ್ನುವ ಸುಖಕ್ಕೇ ತತ್ವಾರ. ಮಕ್ಕಳು ದೊಡ್ಡವರಾಗಿ ಸ್ಕೂಲಿಗೆ ಹೋಗುತ್ತಿರುವುದರಿಂದ ಕಲಾವತಿಗೆ ತನ್ನ ಸಂಸಾರದ ನಿಭಾವಣೆ ಕಷ್ಟವಾಗುವುದಿಲ್ಲ ಎನ್ನುವ ಯೋಚನೆಯಲ್ಲಿ ಕಾಮಾಕ್ಷಿ ತಮ್ಮ ಅಗಲುವಿಕೆಗೆ ಮಗಳನ್ನು ಮಾನಸಿಕವಾಗಿ ಸಜ್ಜುಗೊಳಿಸುತ್ತಿದ್ದರು. ಮತ್ತು ಹೀಗೆ ಸಜ್ಜುಗೊಳಿಸುತ್ತಲೇ ತಾವೂ ಕೂಡ ಗಟ್ಟಿಯಾಗುತ್ತಿದ್ದರು.

''ನಿಂಗೂ ಒಂದು ತವರುಮನೇಂತ ಆಗುತ್ತೆ ಕಣೇ. ಇಷ್ಟು ಹತ್ರ ಇದ್ರೆ ಇದ್ದೂ ಇಲ್ಲದ ಲೆಕ್ಕ. ರಜಾ ಬಂದಾಗ ತಾತನ ಮನೆಗೆ ಬರೋದೂಂದ್ರೆ ಮಕ್ಕಳಿಗೆ ಎಷ್ಟು ಖುಷಿಯಾಗುತ್ತೆ ಯೋಚ್ನೆ ಮಾಡು. ಪಾಪ, ಅವು ಮನೆ ಬಿಟ್ಟು ಬೇರೆ ಕಡೆ ಉಳಿದದ್ದೇ ಇಲ್ಲ.''

'ಹೌದು' ಅನಿಸುತ್ತಿತ್ತು ಕಲಾವತಿಗೆ. ಇಲ್ಲಿನ ಎಲ್ಲಾ ಜಂಜಡ ಮರೆತು ನಾಲ್ಕು ದಿನ ಹಾಯಾಗಿರಬಹುದು. ಅಮ್ಮ ಮಗನನ್ನು ನೋಡಿಕೊಳ್ಳಲಿ, ಮಗ ಅಮ್ಮನನ್ನು ...

ಕಾಮಾಕ್ಷಿ ಒಳಗೆ ಕಾಫಿ ಮಾಡುತ್ತಿರುವಾಗ ಆಟೋ ಬಂದು ನಿಂತಿತು.

''ಅಮ್ಮಾ, ಅಪ್ಪ ಬಂದ್ರು...'' ಕಿಟಕಿಯಲ್ಲಿ ಹಣಿಕಿದ ಕಲಾವತಿ ಕೂಗಿ ಹೇಳಿದಳು. ಮೆಟ್ಟಿಲೇರಿ ಮೇಲೆ ಬಂದ ಅಪ್ಪನ ಕೈಯಲ್ಲಿ ತುಂಬಿಕೊಂಡ ಪ್ಲಾಸ್ಟಿಕ್ ಕೈಚೀಲ. ಸುಗಂಧರಾಜದ ಘಮ ಕವರಿನ ಈಚೆಗೂ ಹರಡಿಕೊಳ್ಳುತ್ತಿದೆ. ದಳ ಉದುರುತ್ತಿರುವ ಹಾರವನ್ನು ಟೀಪಾಯಿಯ ಮೇಲಿಟ್ಟು ಹಣ್ಣುಹಂಪಲುಗಳನ್ನು ಕಲಾವತಿಯ ಕೈಗೆ ಒಪ್ಪಿಸಿದರು ಕೃಷ್ಣಮೂರ್ತಿ.

''ಮಕ್ಕಳಿಗೆ ಆಗುತ್ತೆ. ನೀನು ತಗೊಂಡ್ಹೋಗು'' ಅಂದರು.

ಸ್ಮರಣಿಕೆಗೆ ಸುತ್ತಿದ್ದ ಬಣ್ಣಬಣ್ಣದ ಪೇಪರನ್ನು ಮಗಳು ಪರಪರ ಹರಿದಳು. ಒಳಗೆ ಗಣಪತಿಯ ಗಂಧದ ವಿಗ್ರಹ.

''ಎಷ್ಟು ಚೆನ್ನಾಗುಂಟು, ನೋಡು ಬಾಮ್ಮಾ...'' ವಿಗ್ರಹವನ್ನು ಮೂಗಿನ ಹತ್ತಿರಕ್ಕೊಯ್ದು ಆಘ್ರಾಣಿಸುತ್ತಾ ಕಲಾವತಿ ಅಮ್ಮನನ್ನು ಕರೆದಳು.

ಬೇಕಿದ್ರೆ ನೀನೇ ಇಟ್ಕೋ...

ಥೇ, ಬೇಡಪ್ಪಾ. ಇಲ್ಲಿರಲಿ...

ಕಲಾವತಿ ಶೋಕೇಸಿನ ಗ್ಲಾಸನ್ನು ಎಳೆದು ಅಲ್ಲಿದ್ದ ಬೇರೆ ವಸ್ತುಗಳ ನಡುವೆ ಜಾಗ ಮಾಡಿ ಗಣಪನನ್ನು ಪ್ರತಿಷ್ಠಾಪಿಸಿದಳು. 'ನೀನು ಇಲ್ಲಿರುವುದು ಇನ್ನೆಷ್ಟು ದಿನವೋ...' ಅಂದುಕೊಳ್ಳುವಾಗ ಗಂಟಲು ಉಬ್ಬಿತು.

* * *

ಕೃಷ್ಣಮೂರ್ತಿ ಸ್ವತಃ ಮೈಸೂರಿಗೆ ಹೊರಟರು. ಹುಟ್ಟಿ ಬೆಳೆದ ಆ ಊರು ಅವರಿಗೆ ಯಾವತ್ತಿಗೂ ಪ್ರಿಯ. ನೆಂಟರಿಷ್ಟರಲ್ಲಿ ಹೆಚ್ಚಿನವರು ಅಲ್ಲಿದ್ದಾರೆ. ಮೂಲತಃ ಅವರದ್ದು ಅದೇ ಊರು. ಪಿತ್ರಾರ್ಜಿತ ಆಸ್ತಿಯಲ್ಲಿ ಒಂದು ಸೈಟು ಅವರಿಗೆ ಬಂದಿತ್ತು. ಸಾಲ ತೆಗೆದು ಅಲ್ಲಿ ಒಂದು ಮನೆ ಕಟ್ಟಿಸಿದ್ದರು ಕೃಷ್ಣಮೂರ್ತಿ. ಹಿರಿಯರು ಕಟ್ಟಿಸಿದ ಮನೆ ಅಣ್ಣನ ಪಾಲಿಗೆ ಹೋಗಿತ್ತು. ಸ್ವಂತ ವ್ಯವಹಾರದಲ್ಲಿ ಕೈಸುಟ್ಟುಕೊಂಡು ಅಣ್ಣ ಆ ಮನೆಯನ್ನು ಮಾರಿದ. ಇಬ್ಬರು ಹೆಣ್ಣುಮಕ್ಕಳು. ಅಣ್ಣನ ಕಷ್ಟ ನೋಡಲಾಗದೆ ಕೃಷ್ಣಮೂರ್ತಿ ಕನಿಷ್ಠ ಬಾಡಿಗೆಯಲ್ಲಿ ಅವನು ತಮ್ಮ ಮನೆಯಲ್ಲಿರಲು ಒಪ್ಪಿಗೆ ಕೊಟ್ಟರು. ಕಾಮಾಕ್ಷಿಗೆ ಮನಸ್ಸಿರಲಿಲ್ಲ. ಸಂಬಂಧದಲ್ಲಿ ವ್ಯವಹಾರ ಬೇಡ ಎಂದು ಅವರ ಯೋಚನೆ. ಒಳಗಿಂದೊಳಗೆ ಕೊಂಚ ಅಸಹನೆಯೂ ಇತ್ತು. ಹೊಚ್ಚಹೊಸ ಮನೆ. ತಾವು ನಾಲ್ಕು ದಿನಗಳ ಮಟ್ಟಿಗೂ ಅಲ್ಲಿದ್ದವರಲ್ಲ. ಖಾಲಿ ಸೈಟನ್ನು ಹಾಗೇ ಬಿಟ್ಟು ಯಾರಾದರೂ ಅತಿಕ್ರಮಿಸಿದರೆ ಎನ್ನುವ ಭಯದಲ್ಲಿ ಕಾಲ ಹಾಕುವುದಕ್ಕಿಂತ ಒಂದು ಮನೆ ಕಟ್ಟಿಸಿದರೆ ನಾಲ್ಕು ಕಾಸು ಬಾಡಿಗೆ ಬರುತ್ತದೆ. ಅಲ್ಲದೆ ಸರ್ವೀಸು ಬಹಳ ಇರುವುದರಿಂದ ಸಾಲ ತೀರಿಸುವುದು ಕಷ್ಟವಾಗುವುದಿಲ್ಲ, ಟ್ಯಾಕ್ಸ್‌ನಲ್ಲೂ ಉಳಿತಾಯ ಎಂದು ತೀರ್ಮಾನ ಮಾಡಿದ್ದರು ಗಂಡ, ಹೆಂಡತಿ. ನಲವತ್ತು-ಅರವತ್ತರ ಸೈಟನಲ್ಲಿ ಹಿಂಭಾಗದಲ್ಲಿ ಕೈತೋಟಕ್ಕೆಂದು ಜಾಗ ಉಳಿಸಿಕೊಂಡಿದ್ದರು ಕಾಮಾಕ್ಷಿ. ಅಲ್ಲಿ ವಿವಿಧ ಜಾತಿಯ ಗಿಡಗಳನ್ನು ನೆಟ್ಟು ಚಂದ ನೋಡಲು ಜೀವ ತುಡಿಯುತ್ತಿತ್ತು. ಅಡುಗೆಮನೆಯ ಕಿಟಕಿ ತೆಗೆದರೆ ಕಣ್ಣ ನೇರಕ್ಕೆ ಹೂದೋಟ ಇರಬೇಕು. ತಮ್ಮದೇ ತೋಟದ ಕರಿಬೇವಿನ ಒಗ್ಗರಣೆ. ಹಸಿರು ಮುರಿಯುವ ಬಾಳೆಲೆಯಲ್ಲಿ ಊಟ. ರೊಟ್ಟಿ ತಟ್ಟುವುದಕ್ಕೂ ಬಾಳೆಲೆ. ಸೊಪ್ಪಿನ ಮಡಿಗಳು. ಗುಲಾಬಿ, ಸೇವಂತಿಗೆ, ಮಲ್ಲಿಗೆಯಂಥ ಥರಥರದ ಪುಷ್ಪಗಳು. ಮನಸೋಕ್ತ ಪೂಜೆ ಮಾಡಲು ತುಳಸಿಕಟ್ಟೆ. ಮುಂಭಾಗದ ಗೇಟಿನ ಅಕ್ಕಪಕ್ಕ ಎರಡು ಸಂಪಿಗೆ ಮರಗಳು. ವಸಂತಕಾಲದಲ್ಲಿ ಹಾಡುವ ಕೋಗಿಲೆ. ಚಿಲಿಪಿಲಿ ಗಾನದಿಂದ ಎಬ್ಬಿಸುವ ಪಕ್ಷಿಸಂಕುಲ. ಮಹಡಿಯಲ್ಲಿ ಎರಡು ಮಲಗುವ ರೂಮುಗಳು. ತಮ್ಮ ಸ್ವಂತಕ್ಕೆಂದು ಕಾಮಾಕ್ಷಿ ಗುರ್ತಿಸಿಕೊಂಡಿರುವ ಕೋಣೆಯ ವಿಶಾಲ ಕಿಟಕಿಯಿಂದ ಕೈತೋಟ ಸಮಗ್ರವಾಗಿ ಕಣ್ಣಿಗೆ ಬೀಳುತ್ತದೆ ಮತ್ತು ಗೋಡೆಯ ಒತ್ತಿನಲ್ಲಿ ಹಾಕಿಕೊಂಡ ಮಂಚದ ಮೇಲೆ ಮಲಗಿಕೊಂಡರೆ ಆಕಾಶದ ನಕ್ಷತ್ರಗಳು ಮತ್ತು ಹುಣ್ಣಿಮೆಯ ಚಂದ್ರ. ಮಂದ ಸುಗಂಧದ ತಂಗಾಳಿ ಹಿತವಾಗಿ ಮೈ ಸವರುತ್ತಿರುವಾಗ ಚುಕ್ಕಿಗಳ ಜೊತೆ ಮಾತಾಡುತ್ತಾ...., ಹೀಗೆ ಕಾಮಾಕ್ಷಿ ತಮ್ಮ ಕನಸುಗಳನ್ನು ಗಂಡನ ಜೊತೆ ಹಂಚಿಕೊಂಡು ಭಾವಮಗ್ನರಾಗುತ್ತಿದ್ದರು. ವಾಸ್ತವವಾದಿ ಕೃಷ್ಣಮೂರ್ತಿಗೆ ಇಂಥ ಕನಸುಗಳ ಬಗ್ಗೆ ಕೌತುಕವೇನಿಲ್ಲ. ''ಹತ್ತು ರೂಪಾಯಿ ಕೊಟ್ಟರೆ ಒಂದು ಮಾರು ಮಲ್ಲಿಗೆ ಸಿಗುತ್ತದೆ'' ಎನ್ನುವಂಥವರು ಅವರು. ಆದರೆ ಹೆಂಡತಿಯ ಕನಸುಗಳ ಕುರಿತು ಅವರಿಗೆ ನಿರ್ಲಕ್ಷ್ಯದ ಭಾವನೆಯಿಲ್ಲ. ''ಅವಳು ಖುಷಿಯಾಗಿದ್ದರೆ ನಾನೂ ಸುಖಿ'' ಎನ್ನುವಂಥವರು. ಮಗಳ ಮನೆಗೆ ಬಾಡಿಗೆಗೆ ಬಂದು ಸೇರಿಕೊಂಡ ನಂತರ ಕಾಮಾಕ್ಷಿಯ ಕನಸುಗಳಿಗೆ ಅಲ್ಪವಿರಾಮ ಬಿದ್ದಿತ್ತು. ''ಎಲ್ಲಾ ಸರಿಯಾದರೆ ಇಲ್ಲೇ ಠಿಕಾಣಿ'' ಎನ್ನುವ ಗಂಡನ ಮಾತು ಯೋಚನೆಗೆ ಹಚ್ಚಿತ್ತು. ವಯಸ್ಸಾಗುತ್ತಾ ಬಂದಂತೆ ಎಲ್ಲರನ್ನೂ ಕಾಡುವ ದ್ವಂದ್ವ ಅವರನ್ನೂ ಕಾಡತೊಡಗಿತ್ತು. ಇದ್ದೂರಲ್ಲಿ ಸ್ವಂತ ಮನೆ, ನೆಮ್ಮದಿ, ಸಕಲೆಂಟು ಅನುಕೂಲಗಳು ಇದ್ದರೂ ವಯಸ್ಸು ಮಾಗುತ್ತಾ ಬಂದಂತೆ ಹಲವರಿಗೆ ಭವಿಷ್ಯದ ಭಯ ಶುರುವಾಗಿಬಿಡುತ್ತದೆ. ಕೊನೆಗಾಲಕ್ಕೆ ದಿಕ್ಕಾಗುವವರು ಮಕ್ಕಳೇ ಎನ್ನುವ ಭಾವನೆ. ಎಷ್ಟೋ ಅಪ್ಪರು ಹತ್ತಿರದಲ್ಲಿದ್ದರೂ ಮಕ್ಕಳ ನೆನವರಿಕೆ, ಕನವರಿಕೆ. ಅವರಿದ್ದಲ್ಲಿಗೆ ವಾಸ್ತವ್ಯದ ಬದಲಾವಣೆ. ದೂರದಲ್ಲಿದ್ದಾಗ ಆಕರ್ಷಕವಾಗಿ, ಆತ್ಮೀಯವಾಗಿ ಕಂಡ ಸಂಬಂಧಗಳು ಹತ್ತಿರ ಹೋದಾಗ ಹಳಸಲು ಶುರುವಾದ ಕಥೆಗಳು ಕಮ್ಮಿ ಏನಿಲ್ಲ. ಯಾರ ಅಂತ್ಯ ಹೇಗಿರುತ್ತದೆಯೋ ನಿಖರವಾಗಿ ಹೇಳಬಲ್ಲವರು ಯಾರೂ ಇಲ್ಲ. ಆದರೂ ವಯಸ್ಸಾದ ಜೀವಗಳಿಗೆ ಅನಾರೋಗ್ಯದ ಭಯ. ಮುದಿತನದ ಭಯ. ಪರಾವಲಂಬನೆ ಅನಿವಾರ್ಯ ಎನ್ನುವ ನಂಬಿಕೆ. ಈ ನಂಬಿಕೆಯೇ ಪರಾವಲಂಬಿಯಾಗಿಸಿ ಬದುಕಿನ ಉಳಿದುಳಿದ ಕಾಲವನ್ನು ನರಕ ಸದೃಶವನ್ನಾಗಿಸಿಕೊಳ್ಳುವವರು ಎಷ್ಟೋ ಮಂದಿ. ತಮ್ಮ ಬದುಕು ಆ ಥರ ಆಗಬೇಕಾದ್ದೇನಿಲ್ಲ. ತಾವು ಹತ್ತಿರದಲ್ಲಿದ್ದರೂ ಪ್ರತ್ಯೇಕ. ಆರ್ಥಿಕವಾಗಿ ಚೈತನ್ಯವಿದೆ. ಮಗಳು ಹತ್ತಿರದಲ್ಲಿದ್ದಾಳೆ ಅಂದರೆ ನಾಳೆ ಕಷ್ಟಕಾಲ ಬಂದರೆ ದಿಕ್ಕಾಗುತ್ತಾಳೆ

ಎನ್ನುವ ಕುರಿತು ಕಾಮಾಕ್ಷಿ ಚಿಂತನೆ ಮಾಡಿದ್ದಿದೆ. ಆದರೆ ತಮ್ಮ ಮಗನನ್ನು ಸುಲಿದು ತಿನ್ನುವುದಕ್ಕೆ, ತಾಯಿ ಮಗನ ನಡುವೆ ಭೇದ ತಂದಿಡುವುದಕ್ಕೆ, ಮಗಳ ಮೂಲಕ ಮಗನನ್ನು, ಮೊಮ್ಮಕ್ಕಳನ್ನು ವಶವರ್ತಿಗಳನ್ನಾಗಿಸಿಕೊಂಡು ತಮ್ಮನ್ನು ಒಬ್ಬಂಟಿಯಾಗಿಸುವುದಕ್ಕೆ, ಇವರು ಇಲ್ಲಿ ಸ್ಥಾಪನೆಯಾಗಿದ್ದಾರೆ ಎನ್ನುವ ಬೀಗಿತ್ತಿಯ ಪರೋಕ್ಷ ಆರೋಪ ಯಾವಾಗ ಸ್ಪಷ್ಟವಾಗತೊಡಗಿತೋ ಆವಾಗಿನಿಂದ ಕಾಮಾಕ್ಷಿಯ ಮನಸ್ಸು ಮುರಿಯಿತು. ಇರುವುದು ತಾವು ಬಾಡಿಗೆ ಕೊಡುವ ಮನೆ. ತಿನ್ನುವುದು ತಮ್ಮ ಅನ್ನ. ತಮ್ಮಿಂದ ಅವರಿಗೆ ಉಪಕಾರವಾಗಿರಬಹುದೇ ವಿನಾ ಅಪಕಾರವಾಗಿದ್ದಿಲ್ಲ. ಆದರೂ ವೃಥಾರೋಪ. ಯಾರಿಗೆ ಗೊತ್ತು, ಅವರ ಬಂಧುಬಳಗ ತಾವು ಇಲ್ಲಿ ಪುಗಸಟ್ಟೆ ಸೇರಿಕೊಂಡಿದ್ದೇವೆಂದು ನಂಬಿಕೊಂಡಿದ್ದರೆ ಆಶ್ಚರ್ಯವೇನಿಲ್ಲ. ಯಾರು, ಏನು ನಂಬಿಕೊಂಡಿದ್ದಾರೆ ಅನ್ನುವುದು ತಮಗೆ ಸಂಬಂಧಿಸಿದ್ದಲ್ಲ. ಅವರನ್ನೆಲ್ಲಾ ತಿದ್ದುವ ಪಾರುಪತ್ಯ ತಮಗೆ ಬೇಕಿಲ್ಲ. ಸಾಧ್ಯವಿಲ್ಲ ಅನ್ನುವುದೂ ನಿಜ. ಆದರೂ ಏನೋ ಕಿರಿಕಿರಿ, ಮುಜುಗರ. ಆತ್ಮಪ್ರತಿಷ್ಠೆ ತಮಗೆ ಸ್ವಲ್ಪ ಹೆಚ್ಚೇ ಇದೆಯೇನೋ. 'ದೂರ ಇರುವುದೇ ಕ್ಷೇಮ' ಅನ್ನಿಸಲು ಆರಂಭವಾಗಿಬಿಟ್ಟಿತ್ತು. ಈ ಥರದ ಭಾವನೆ ಒಮ್ಮೆ ಮನಸ್ಸನ್ನು ಹೊಕ್ಕಿತು ಅಂದರೆ ಸಾಕು, ಅದಕ್ಕೆ ಪೂರಕವಾದ ಸಂಗತಿಗಳನ್ನು ಮನಸ್ಸು ಕಲೆಹಾಕತೊಡಗುತ್ತದೆ. ಕಾಮಾಕ್ಷಿ ತಮ್ಮ ಸ್ವಂತ ಮನೆಯಲ್ಲಿ ನಿಶ್ಚಿಂತೆಯಿಂದಿರುವ ಕನಸಿಗೆ ಜೀವ ತುಂಬಿಕೊಂಡಿದ್ದರು. ಇಷ್ಟು ವರ್ಷಗಳಿಂದ ಅಭ್ಯಾಸವಾಗಿಹೋಗಿದ್ದ ಮಗಳ ಸಂಸಾರದ ಒಡನಾಟ ತಪ್ಪಿಹೋಗುವುದು ಸಂಕಟದ ವಿಷಯವಾಗಿದ್ದರೂ ಅಳಿಯ ಒಪ್ಪಿದರೆ ಮೊಮ್ಮಗನನ್ನು ಅಲ್ಲಿಯೇ ಸ್ಕೂಲಿಗೆ ಸೇರಿಸುವ ಕನಸು ಯಾವುದೋ ಕ್ಷಣದಲ್ಲಿ ಅಚಾನಕ್ಕಾಗಿ ಮನಸ್ಸಿಗೆ ಹೊಳೆದು, ಹಾಗೆ ಹೊಳೆದಿದ್ದರ ರೋಮಾಂಚನವನ್ನು ಮಗಳೊಡನೆ ಹಂಚಿಕೊಂಡಿದ್ದರು ಕಾಮಾಕ್ಷಿ. ''ಯಾಕಾಗಬಾರದು ?''... ಮಗಳಿಂದ ಹಸಿರು ನಿಶಾನೆ ಸಿಕ್ಕಿತ್ತು. ಅವಳಿಗೆ ಯಾವಾಗ ತೌರಿಗೆ ಓಡಿಬರಬೇಕೆಂದರೂ ಇದೊಂದು ಸೊಗಸಾದ ನೆವ. ''ಮಗನನ್ನು ನೋಡಬೇಕು''. ಅಳಿಯ ಬರುವುದಕ್ಕೂ ಒಂದು ಅವಕಾಶ. ''ಮಗನನ್ನು ನೋಡಬೇಕು''. ಬರಲಿ ಬೀಗಿತ್ತಿಯೂ. ಅವರ ಮೇಲೆ ತಮಗೆ ಕಿನಿಸೇನಿಲ್ಲ.

*            *            *

ಕೃಷ್ಣಮೂರ್ತಿ ಅಣ್ಣನಿಗೆ ಮನೆ ಬಾಡಿಗೆಗೆ ಕೊಟ್ಟಿದ್ದರು, ಅದೂ ಹೆಸರಿಗೆ ಬಾಡಿಗೆ ಅನ್ನುವಷ್ಟು ಕಡಿಮೆ ಮೊತ್ತಕ್ಕೆ ಎನ್ನುವುದೇನೋ ನಿಜ. ಆದರೆ ಅವರು ಮೈಸೂರಿಗೆ ಹೋದಾಗಲೆಲ್ಲಾ ಉಳಿದುಕೊಳ್ಳುತ್ತಿದ್ದುದು ತಂಗಿಯ ಮನೆಯಲ್ಲಿ. ಒಬ್ಬರೇ ಹೋದಾಗಲೂ ಅಷ್ಟೇ, ದಂಪತಿ ಹೋದಾಗಲೂ ಅಷ್ಟೇ. ಭಾವನಿಗೆ ಪುಗಸಟ್ಟೆ ಅನ್ನುವ ಹಾಗೆ ಮನೆ ಕೊಟ್ಟಿದ್ದಕ್ಕೆ ಚೂರೂ ಕೃತಜ್ಞತೆಯಿಲ್ಲ ಎಂದು ಕಾಮಾಕ್ಷಿಯ ದೂರು. ಅಲ್ಲಿಗೆ ಹೋದರೆ ವಾರಗಿತ್ತಿ ಧೋರಣೆಯ ಉಪಚಾರ ಮಾಡುತ್ತಾಳೆ. ಸೀದಾ ಸಾದಾ, ಹೃತ್ಪೂರ್ವಕ, ಅನ್ನುವ ಪದಗಳು ಅವಳ ನಿಘಂಟಿನಲ್ಲಿಲ್ಲ. ಅಲ್ಲಿರುವುದೆಂದರೆ ಕಾಮಾಕ್ಷಿಗೆ ಕಿರಿಕಿರಿಯಾಗುತ್ತದೆ. ತದ್ವಿರುದ್ಧ ಅನ್ನುವ ಹಾಗೆ ಕೃಷ್ಣಮೂರ್ತಿಯ ತಂಗಿಯ ಮನೆಯಲ್ಲಿ ಆದರದ ಉಪಚಾರ. ಒಬ್ಬಳೇ ತಂಗಿ ಎಂದು ಕೃಷ್ಣಮೂರ್ತಿ ಅವಳನ್ನು ಮಗಳ ಥರ ಕಾಣುತ್ತಾರೆ. ಅವಳ ಕಷ್ಟ ಸುಖಕ್ಕೆ ಸಹಾಯ ಮಾಡುತ್ತಾರೆ. ಅವಳ ಮಗಳ ಮದುವೆಗೆ ಗಂಡ ಕೈಬಿಚ್ಚಿ ಕೊಟ್ಟಿದ್ದು ಕಾಮಾಕ್ಷಿಗೆ ಗೊತ್ತುಂಟು. ಅಣ್ಣ, ತಂಗಿಯ ಅನ್ಯೋನ್ಯ ಕಂಡು ಕಾಮಾಕ್ಷಿ ಸಂತೋಷಪಡುತ್ತಿದ್ದರು ಅಂತೇನಿಲ್ಲ. ಹಿಡಿದದ್ದು ಮುಟ್ಟಿದ್ದಕ್ಕೆಲ್ಲಾ ಈ ಅಣ್ಣ ಸಹಾಯಕ್ಕೆ ಧಾವಿಸುವುದನ್ನು ಕಂಡು ಮತ್ಸರವಾಗುತ್ತಿದ್ದುದಂತೂ ನಿಜ.

ಮದುವೆಯಾಗಿ ಇಷ್ಟು ವರ್ಷ ಆಯ್ತು. ಕಷ್ಟ ಸುಖ ಅಂದ್ರೆ ಇನ್ನೂ ಅಣ್ಣನ ಮುಖ ನೋಡ್ತಾಳಲ್ರೀ ? ನಿಮ್ಮನ್ನೇನು ದುಡ್ಡಿನ ಗಿಡ ಅಂದ್ಕೊಂಡಿದಾಳಾ ? ನಿಮ್ಗೇನಾದ್ರೂ ಕಷ್ಟ ಬಂದ್ರೆ ಅವರು ಕೈಯೆತ್ತಿ ಕೊಡ್ತಾರೇನ್ರೀ ? ಬೇಡಪ್ಪಾ, ನಿಮಗೆ ಕೇಳೋಕಾದ್ರೂ ನಾಲಿಗೆ ಬರುತ್ತಾ ?

ಇಂಥ ಮಾತುಗಳ ಪರಿಣಾಮ ಮಾತ್ರ ವಿಪರೀತವಾಯ್ತು. ತಂಗಿಗೆ ಅವಶ್ಯಕತೆ ಬಿದ್ದಾಗ ಕೃಷ್ಣಮೂರ್ತಿ ಹೆಂಡತಿಗೆ ಗೊತ್ತಿಲ್ಲದಂತೆ ಸಹಾಯ ಮಾಡುವುದಕ್ಕೆ ಶುರುಮಾಡಿದರು. ಕಾಮಾಕ್ಷಿಗೆ ಹೇಗೋ ಪತ್ತೆಯಾಗಿಬಿಡುತ್ತಿತ್ತು. ನಾದಿನಿಯ ಮನೆಗೆ ಹೋದಾಗ ಅವಳು ಯಾವುದೋ ಮಾತಿನ ನಡುವೆ ಈ ವಿಷಯದ ಪ್ರಸ್ತಾಪ ಮಾಡಿದರೆ ಸುಳಿವು ಸಿಗದೆ ಇರುವುದು ಹೇಗೆ ? ಅಂತೂ ಗಂಡಹೆಂಡಿರಲ್ಲಿ ಈ ವಿಷಯದ ಕುರಿತಾಗಿ ಮನಸ್ತಾಪ, ಕಿರಿಕಿರಿ. ಅಣ್ಣ, ತಂಗಿ ಒಬ್ಬರನ್ನೊಬ್ಬರು ಮೀರಿಸುವಂತೆ ಗಂಡನಿಗೆ ಜಿಗಣೆಗಳಂತೆ ಅಂಟಿಕೊಂಡಿದ್ದಾರೆ ಎನ್ನುವುದು ಕಾಮಾಕ್ಷಿಯ ಕೊರಗು. ಕಳ್ಳನಿಗೆ ಬಾಡಿಗೆಗೆ ಕೊಟ್ಟರೂ ಇವತ್ತು ತಮ್ಮ ಮನೆಗೆ ಆರು ಸಾವಿರ ಬಾಡಿಗೆಗೆ ಕಮ್ಮಿ ಇಲ್ಲ. ಭಾವ ಸಾವಿರದಿಂದ ಮೇಲೇರಿಲ್ಲ. ತಮ್ಮ ಕೇಳುವಂಥವರಲ್ಲ ಮತ್ತು ಅಣ್ಣ ತಾವಾಗಿ ಕೊಡುವವರಲ್ಲ. ಹೋಗಲಿ, ಮನೆಯನ್ನಾದರೂ ಚೆನ್ನಾಗಿಟ್ಟುಕೊಂಡಿದ್ದಾರಾ ಅಂದರೆ ಅದೂ ಇಲ್ಲ. ಸ್ವಂತಮನೆ ಅಲ್ಲ ಎನ್ನುವ ನಿಷ್ಕಾಳಜಿಯೇ ? ಹಿತ್ತಿಲಲ್ಲಿ ಕಾಡುಗಿಡಗಳು ದಂಡಿಯಾಗಿ ಬೆಳೆದಿವೆ. ಗೃಹಪ್ರವೇಶದ ಹೊತ್ತಿಗೆ ಮನೆಗೆ ಬಣ್ಣ ಹಚ್ಚಿದ್ದೆಷ್ಟೋ ಅಷ್ಟೇ. ಒಳ್ಳೆ ಓಬೀರಾಯನ ಕಾಲದ ಮನೆಯಂತೆ ಹಾಳುಸುರಿಯುತ್ತಿದೆ. ಗೋಡೆಯ ಮೊಳೆಗಳು, ದೇವಾನುದೇವತೆಗಳ ಪಟಗಳನ್ನು ಕಂಡರೆ ಕಾಮಾಕ್ಷಿಗೆ ಮೈ ಪರಚಿಕೊಳ್ಳುವಂತಾಗುತ್ತದೆ. ಭಾವನ ಹಿರೀ ಅಳಿಯ ಆ ಮನೆಯಲ್ಲೇ ಠಿಕಾಣಿ. ಯಾರೋ ರಕ್ತ ಬಸಿದು ಕಟ್ಟಿದ ಮನೆಯಲ್ಲಿ ಮತ್ತ್ಯಾರದೋ ದರ್ಬಾರು. ಕಾಮಾಕ್ಷಿ ಮತ್ತು ಕೃಷ್ಣಮೂರ್ತಿಗೆ ಸ್ವಂತ ಮನೆಗೆ ಹೋಗಿ ಸೇರಿಕೊಳ್ಳಬೇಕೆಂಬ ಒತ್ತಡಕ್ಕೆ ಈ ಹೊಟ್ಟೆಉರಿ ಕೂಡ ಬಲವಾದ ಕಾರಣ. ತಮ್ಮ ಕಾಲದಲ್ಲಿ ಮನೆ ಬಿಡಿಸಿಕೊಂಡರೆ ಬಿಡಿಸಿಕೊಂಡ ಹಾಗೆ. ಇಲ್ಲದಿದ್ದರೆ ಪರ ಊರಲ್ಲಿರುವ ಅಳಿಯನಿಗೆ ಇದೆಲ್ಲಾ ಸಾಧ್ಯವಿಲ್ಲ ಮತ್ತು ಅಷ್ಟೆಲ್ಲಾ ಎದೆಗಾರಿಕೆಯೂ ಇಲ್ಲ. ನಿಷ್ಠುರ ಕಟ್ಟಿಕೊಳ್ಳಲು ಅವನು ಆಳಲ್ಲ. ಹೀಗೆ ಒಂದು ಕಡೆ ಬೀಗಿತ್ತಿಯಿಂದ ದೂರವಾಗಿರಲು,



ಮತ್ತೊಂದು ಕಡೆ ಸ್ವಂತ ಮನೆಯ ಮೇಲೆ ಹಕ್ಕು ಸ್ಥಾಪಿಸಲು, ಕಾಮಾಕ್ಷಿ ತುದಿಗಾಲಲ್ಲಿ ನಿಂತಿದ್ದರು. ಗಂಡ ಎಲ್ಲಾ ವಿಷಯ ಪಕ್ಕಾ ಮಾಡಿಕೊಂಡು ಬರಲು ಹೊರಟುಹೋದ ಮೇಲೆ ಅವರಿಗೆ ನಿಂತಲ್ಲಿ ನಿಲ್ಲಲಾಗದ, ಕೂತಲ್ಲಿ ಕೂರಲಾಗದ ಚಡಪಡಿಕೆ.

''ದೇವರೇ, ಎಲ್ಲಾ ಸುಖಾಂತವಾಗಿ ಮುಗಿದು ನಮ್ಮನೇಲಿ ನಾವು ಇರುವ ಹಾಗಾಗ್ಲಪ್ಪಾ'' ಎಂದು ನಂಬಿದ ದೇವರಿಗೆ ಹರಕೆ ಕಟ್ಟಿಕೊಂಡಿದ್ದರು ಕಾಮಾಕ್ಷಿ.

*            *            *

ಮೈಸೂರಿನಿಂದ ತಿರುಗಿ ಬಂದ ಕೃಷ್ಣಮೂರ್ತಿ ಒಳ್ಳೆ ಸುದ್ದಿ ತರಲಿಲ್ಲ. ಅಣ್ಣನಿಗೆ ಆ ಮನೆ ಬಿಡಲು ಸುತರಾಂ ಇಷ್ಟವಿಲ್ಲವಂತೆ. ಆ ಮನೆ ಅವರಿಗೆ ಆಗಿಬಂದಿದೆ. ವ್ಯವಹಾರ ಸುಧಾರಿಸಿದೆ. ಹೆಣ್ಣುಮಕ್ಕಳಿಗೆ ಒಳ್ಳೆಯ ಮನೆ ಸಿಕ್ಕಿದೆ. ''ನಾವೇ ಕೊಂಡ್ಕೋತೀವಿ'' ಅಂದರಂತೆ ಅಣ್ಣ. ಹೆಂಡತಿ ಆಸೆಪಟ್ಟು ತನ್ನಿಚ್ಛೆಯಂತೆ ಕಟ್ಟಿಸಿಕೊಂಡಿದ್ದ ಮನೆ. ''ಮಾರುವುದಿದ್ದರೆ ಯಾವತ್ತೋ ಮಾರುತ್ತಿದ್ದೆ'' ಎಂದು ಕೃಷ್ಣಮೂರ್ತಿ ಹೇಳಿದರಂತೆ. ವಾದ ವಿವಾದ ನಡೆದಿದೆ. ಒಳ್ಳೆಯ ಮಾತಲ್ಲಿ ಒಪ್ಪಿಸಲು ಕೃಷ್ಣಮೂರ್ತಿ ವಿಫಲರಾಗಿದ್ದಾರೆ. ಪುಗಸಟ್ಟೆ ಅನ್ನುವ ಹಾಗೆ ಅವರಿಗೆ ಮನೆ ಕೊಟ್ಟಿದ್ದನ್ನು ನೆನಪಿಸಿದ್ದಾರೆ. ಅಣ್ಣನಿಗೆ ಅದು ಕೃತಜ್ಞತೆ ತೋರಿಸಬೇಕಾದ ವಿಷಯ

ಅನ್ನಿಸಲಿಲ್ಲ. ''ತನ್ನ ಅಪ್ಪ ತನಗೆ ಮೋಸ ಮಾಡಿದ್ದರು'' ಎನ್ನುತ್ತಾ ಹಳೆ ಕತೆಯನ್ನು ಕೆದಕಿದರಂತೆ. ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ, ತಮ್ಮನಿಗೆ ಚೆನ್ನಾಗಿ ಓದಿಸಿ ಅಣ್ಣನನ್ನು ವ್ಯವಹಾರಕ್ಕೆ ಹಾಕಿಕೊಂಡ ತಾರತಮ್ಯ. ನ್ಯಾಯವಾಗಿ ನೋಡಿದರೆ ಅಷ್ಟೂ ಆಸ್ತಿ ತನಗೆ ಸೇರಬೇಕಿತ್ತು. ಕೃಷ್ಣಮೂರ್ತಿ ಸರ್ಕಾರಿ ನೌಕರಿಗೆ ಸೇರಿ ಲಕ್ಷಗಟ್ಟಲೆ ಗಳಿಸಿದ್ದಾರೆ. ಮತ್ತು ತಾವು ಏಳುತ್ತಾ, ಬೀಳುತ್ತಾ, ಹೇಗೋ ಇದೀಗ ಚೇತರಿಸಿಕೊಂಡಿದ್ದೇವೆ ಎನ್ನುವಂಥ ನಂಜಿನ ಮಾತುಗಳನ್ನು ಅಣ್ಣ ಆಡಿದಾಗ ಇಂಥದ್ದರ ನಿರೀಕ್ಷೆಯೇ ಇರದ ಕೃಷ್ಣಮೂರ್ತಿ ಕಕ್ಕಾಬಿಕ್ಕಿ.

''ನೀನೂ ಓದಬೇಕಿತ್ತು. ಓದಿದ್ದರೆ ಅಪ್ಪ ಓದಿಸ್ತಿರಲಿಲ್ವಾ ? ಎಸ್ಸೆಲ್ಸಿಯಲ್ಲಿ ಮೂರುಮೂರು ಸಲ ಕಟ್ಟಿದ್ದು ನಾನಾ, ನೀನಾ ? ಸುಳ್ಳು ನ್ಯಾಯ ತೆಗೆಯಬೇಡ'' ಕೃಷ್ಣಮೂರ್ತಿ ಹೇಳಿದ್ದರು.

''ನೀನು ಮಾಡಿದ್ದು ದೊಡ್ಡಮನುಷ್ಯರ ಥರ ಓದೋದೊಂದೇ. ಮನೆ ತಾಪತ್ರಯಕ್ಕೆ ತಲೆ ಕೊಟ್ಟಿದ್ದು ನಾನು. ಅಷ್ಟಾದ್ರೂ ಓದಿದ್ನಲ್ಲ, ಅದೇ ಆಶ್ಚರ್ಯ''.

ಅಣ್ಣ ಬಹುಶಃ ಯಾವ್ಯಾವ ಪಟ್ಟು ಹಾಕಬೇಕೆಂದು ಮೊದಲೇ ತೀರ್ಮಾನಿಸಿಕೊಂಡಿದ್ದರು ಮತ್ತು ತಮ್ಮ ಇನ್ನೂ ನ್ಯಾಯ, ನೀತಿಯ ಜಮಾನಾದಲ್ಲಿದ್ದರು. ಕೃಷ್ಣಮೂರ್ತಿ ತಗ್ಗಿ ಬಗ್ಗಿ ನಡೆಯಬೇಕಾದ್ದೇನಿರಲಿಲ್ಲ. ಅದು ಅವರ ಮನೆ. ಅವಶ್ಯ ದಾಖಲೆಗಳು ಅವರ ಬಳಿ ಸುಭದ್ರವಾಗಿವೆ. ಅಣ್ಣ ಹಟ ಹಿಡಿದರೆ ಮುಂದಿನ ಕ್ರಮ ಏನೆಂದು ಅವರಿಗೆ ಹೇಳಿ ಕೊಡಬೇಕಾದ್ದೇನಿಲ್ಲ. ನಿವೃತ್ತಿ ಜೀವನವಾದ್ದರಿಂದ ಪುರುಸೊತ್ತೂ ಬೇಕಾದಷ್ಟಿದೆ. ಆದರೆ ಸ್ವಂತ ಅಣ್ಣನ ವಿರುದ್ಧ ಕೋರ್ಟಿನ ಕಟ್ಟೆಯನ್ನೇರಬೇಕಾದ ಪರಿಸ್ಥಿತಿ ನೆನೆದರೆ ಏನೋ ಹಿಂದೇಟು. ಆಡಿಕೊಂಡು ನಗುತ್ತಾರೆ ನೆಂಟರಿಷ್ಟರು. ಇಷ್ಟು ವರ್ಷ ಮೇಲ್ನೋಟಕ್ಕಾದರೂ ರಾಮ, ಲಕ್ಷ್ಮಣರಂತಿದ್ದವರು ಈಗ ವಾಲಿ, ಸುಗ್ರೀವರಾಗಬೇಕೇ ? 'ಅಯ್ಯೋ ಅಂದವರಿಗೆ ಅರೆ ಆಯುಸ್ಸು' ಎನ್ನುವ ಗಾದೆ ಎಷ್ಟು ಸತ್ಯವಾದ್ದು ಅನಿಸಿತ್ತು. ತಾವು ನ್ಯಾಯಸಮ್ಮತವಾಗಿ ಆ ಮನೆಯನ್ನು ವಶಪಡಿಸಿಕೊಂಡರೂ ಈ ಊರಲ್ಲಿ, ಈ ಮನೆಯಲ್ಲಿ, ಇರಲು ಕಷ್ಟವಾಗುತ್ತದೆ. ಆಪ್ತೇಷ್ಟರ ಮನೆಯ ಸಭೆ, ಸಮಾರಂಭಗಳಲ್ಲಿ ಪರಸ್ಪರ ಮುಖ ನೋಡಬೇಕಾದ ಸಂದರ್ಭ ಬಂದರೆ ದೃಷ್ಟಿಯುದ್ಧ ಆಗುವ ಸಂಭವ ನೆನೆದೇ ಕೃಷ್ಣಮೂರ್ತಿಗೆ ಉಗುಳು ನುಂಗುವಂತಾಗಿತ್ತು. ಅಣ್ಣ, ತಮ್ಮನಾಗಿ ಹೊಂದಾಣಿಕೆಯಿಂದಿದ್ದವರು ವೈರಿಗಳಾಗಬೇಕಾದ ಪರಿಸ್ಥಿತಿ. ತಂಗಿ ತಮ್ಮ ಕಡೆಗೆ ವಾಲಬಹುದು. ಆದರೆ ತಮ್ಮಿಂದಾಗಿ ಅವಳು ಅಣ್ಣನ ವೈರ ಕಟ್ಟಿಕೊಳ್ಳಬೇಕೇ ? ಕಟ್ಟಿಕೊಳ್ಳುತ್ತಾಳೆಯೇ ? ''ಕಟ್ಟಿಕೋ'' ಎಂದು ತಾವು ಹೇಳಲು ಸಾಧ್ಯವೇ ? ಅಣ್ಣ ಕೂಡ ಈ ರೀತಿ ಯೋಚಿಸಬೇಕು. ಆದರೆ ಅವನ ಧೋರಣೆ ಕಂಡರೆ ಅವನು ಯಾರನ್ನೂ ಕೇರ್ ಮಾಡುವ ಹಾಗೆ ಕಾಣುತ್ತಿಲ್ಲ. ತಮಗೆ ಮಾತ್ರ ಯಾಕೆ ಸಂಕೋಚ ? ಯಾಕೆ ಮುಜಾಜು ? ಹಿಂಜರಿಕೆ ? ತಮ್ಮ ಸ್ವಭಾವ ಅನ್ನಬೇಕಷ್ಟೇ. ಕೊನೆಯದಾಗಿ ಕೃಷ್ಣಮೂರ್ತಿ ಹೇಳಿದ್ದರು.

''ನೋಡು, ನಾನು ಒಂದೆರಡು ಲಕ್ಷ ಕೊಡೋಕೆ ರೆಡಿ ಇದೀನಿ. ಬೇರೆ ಮನೆ ನೋಡ್ಕಂಡ್ರೆ ದೊಡ್ಡ ಉಪಕಾರ ಆಗುತ್ತೆ''.

''ಹೌದಾ ? ಈ ಮನೆ ಬಿಡೋಕೆ ಯಾರೂ ಒಪ್ಲಲ್ಲ...''

ಕೃಷ್ಣಮೂರ್ತಿ ಸಹನೆ ಕಳೆದುಕೊಂಡಿದ್ದರು.

''ಆಯ್ತು, ಅದು ಹೇಗೆ ನೀನು ಮನೆ ಬಿಡಲ್ವೋ ನೋಡ್ಕೋತೀನಿ...'' ಅಂದಿದ್ದರು.

ಅದುವರೆಗೆ ಒಂದೂ ಮಾತಾಡದೆ ಬಾಯಿಗೆ ಕಡುಬು ತುರುಕಿಕೊಂಡವನಂತೆ ಬಿಮ್ಮಗಿದ್ದ ಅಣ್ಣನ ಅಳಿಯ, ಆ ಮನೆಯಲ್ಲೇ ಬೀಡುಬಿಟ್ಟಿದ್ದವನು, ಕೃಷ್ಣಮೂರ್ತಿಯ ಕಡೆ ದುರುಗುಟ್ಟುತ್ತಾ ಹೇಳಿದ್ದನಂತೆ,

''ಅದು ಹೇಗೆ ಮನೆ ಬಿಡಿಸ್ತೀರೋ ನಾವೂ ನೋಡ್ಕೋತೀವಿ...''

ಕೃಷ್ಣಮೂರ್ತಿ ತಂಗಿಯ ಮನೆಗೆ ಬಂದವರು ಅವಳೆದುರು ತಮ್ಮ ಸಂಕಟವನ್ನು ಕಾರಿಕೊಂಡಿದ್ದರು. ''ಎಂಥಾ ಅಳಿಯ ಅವನು ? ಒಳ್ಳೇ ರೌಡಿ ಥರ ಇದಾನೆ...'' ಅಂದಿದ್ದರು. ತಂಗಿ ಉತ್ತರಿಸಿದ್ದಳು,

''ಇದು ಹೀಗೇ ಆಗುತ್ತೇಂತ ನಂಗೊತ್ತಿತ್ತು. ಮೈಸೂರು ಈಗ ಬೆಂಗಳೂರಾಗಿಬಿಟ್ಟಿದೆ. ನಿನ್ನ ಮನೆ ಅಂದ್ರೆ ಐವತ್ತು ಲಕ್ಷದ ಆಸ್ತಿ...''

* * *

ಕೃಷ್ಣಮೂರ್ತಿ ಕುಟುಂಬದ ಸದಸ್ಯರೊಡನೆ ಸಮಾಲೋಚನೆ ನಡೆಸಿ ಒಂದು ತೀರ್ಮಾನಕ್ಕೆ ಬಂದರು. ಯಾವ ರಗಳೆಯೂ ಬೇಡ. ಮನೆ ಅಣ್ಣನಿಗೆ ಮಾರಿ ತಾವು ಬೇಕಿದ್ದರೆ ಈ ಊರಲ್ಲಿ ಒಂದು ಫ್ಲ್ಯಾಟ್ ಕೊಳ್ಳುವುದು. ಅಥವಾ ಅಳಿಯನ ಮನೆಯಲ್ಲೇ ಬಾಡಿಗೆ ಕೊಟ್ಟುಕೊಂಡು ನೆಮ್ಮದಿಯಿಂದಿದ್ದುಬಿಡುವುದು. ಕಾಮಾಕ್ಷಿಗೆ ಇಂಥ ಪಲಾಯನವಾದ ಪಥ್ಯವಲ್ಲ. ಆದರೆ ಮನಸ್ಸಿನ ಸಮತೋಲನ, ಮೇಲ್ನೋಟದ ಮಟ್ಟಿಗಾದರೂ ಸೌಹಾರ್ದತೆ ಕಾಪಾಡಿಕೊಂಡಿರಲು ಈ ತೀರ್ಮಾನ ಅನಿವಾರ್ಯ. ಇಷ್ಟೂ ಮೀರಿ ಕೋರ್ಟು, ಕಛೇರಿ ಅಂದರೆ ತೀರ್ಮಾನವಾಗುವುದು ಯಾವ ಕಾಲಕ್ಕೋ ? ಅಲ್ಲಿಯವರೆಗೆ ತಾವು ಬದುಕಿದ್ದರೆ ಸರಿ. ಇಲ್ಲದಿದ್ದರೆ ಮುಂದೆ ಅಳಿಯ ಹೊಡೆದಾಡುವುದು ಸುಳ್ಳು. ಅಷ್ಟು ಪುರುಸೊತ್ತು ಅವನಿಗಿಲ್ಲ. ಕೊನೆಗೆ ಅವರಿಗೆ ಪುಗಸಟ್ಟೆ ಮನೆ ಬಿಟ್ಟುಕೊಡುವಂತಾದರೂ ಆಶ್ಚರ್ಯವಿಲ್ಲ. ಇದೇನಿದ್ದರೂ ತಮ್ಮ ಕಾಲದಲ್ಲಿ ನಿರ್ಧಾರ ಆಗಿಬಿಡಬೇಕು.

ಅಂತೂ ನಮಗೆ ಆ ಮನೇಲಿರೋ ಯೋಗ ಇಲ್ಲ. ಅಂದರು ಕಾಮಾಕ್ಷಿ ಗದ್ಗದರಾಗಿ.

ನಮ್ಮ ಜೊತೇನೇ ಇದ್ಬಿಡಿ ಅಮ್ಮಾ. ನಂಗಂತೂ ಖುಷಿಯಾಗ್ತಿದೆ ಅಂದಳು ಮಗಳು.

* * *

''ನಾವೇ 'ಕೊಂಡ್ಕೋತೀವಿ'' ಅಂದ ಅಣ್ಣ ಮಾರುಕಟ್ಟೆಯ ಬೆಲೆ ಕೊಡಲು ಸುತರಾಂ ಒಲ್ಲ. ''ಹಳೇ ಮನೆ. ಏನಿದ್ರೂ ಸೈಟಿಗೆ ಬೆಲೆ'' ಎನ್ನುವ ಜಾಣ್ಮೆ. ''ಇಷ್ಟಕ್ಕೆ ಕೊಡೋದಾದ್ರೆ ಸರಿ. ಯೋಚನೆ ಮಾಡು. ಇಲ್ಲಿದ್ರೆ ಬಾಡಿಗೆ ಕೊಟ್ಕಂಡೇ ಇದ್ಬಿಡ್ತೀವಿ'' ಎನ್ನುವ ಚಾತುರ್ಯ, ''ನಿಂಗೆ ಯಾರೋ ಹಚ್ಚಿಕೊಟ್ಟಿದಾರೆ. ಇಲ್ಲದಿದ್ರೆ ರೇಟು ಹೇಳೋಕೆ ಒಂದು "ಮಿತಿ ಬೇಡ್ವಾ ? ಇನ್ನೂ ಮೈಸೂರು ಬೆಂಗಳೂರಾಗಿಲ್ಲ'' ಎಂದು ತಂಗಿಯ ಮೇಲೆ ಪರೋಕ್ಷ ಗೂಬೆ. ಕೊನೆಗೂ ಐವತ್ತರ ಅಂದಾಜಿನ ಬೆಲೆ ನಲವತ್ತಕ್ಕೆ ನಿಷ್ಕರ್ಷೆಯಾಯ್ತು.

''ತಲೆ ತೊಳ್ಕಂಡುಬಿಡೋಣ. ಇಷ್ಟಕ್ಕೂ ತಿನ್ನುತ್ತಿರೋದು ಅಣ್ಣ ತಾನೇ ? ಉದ್ಧಾರವಾಗ್ಲಿ...''

ಎನ್ನುವ ಅಸಹಾಯಕತೆಯ ಶಾಪದಿಂದ ಕೃಷ್ಣಮೂರ್ತಿ ಅಣ್ಣನ ಕುಟಿಲತೆಗೆ ಬಗ್ಗಿದರು.

* * *

ಮನೆ ಮಾರಾಟವಾಗಿ ಕೃಷ್ಣಮೂರ್ತಿ ಒಂದರ್ಥದಲ್ಲಿ ನಿಶ್ಚಿಂತರಾದರು ಎಂಬಲ್ಲಿಗೆ ಕತೆ ಮುಗಿಯಲಿಲ್ಲ. ಚೂರು ಕೊಸರು ಉಳಿದುಕೊಂಡಿದೆ. ಹೀಗೆ ಮಾರಾಟವಾದ ಹೊಸದರಲ್ಲೇ ಒಂದು ದಿನ ತಂಗಿ ಫೋನು ಮಾಡಿ ಒಂದು ಬೇಡಿಕೆ ಮುಂದಿಟ್ಟಳು,

ಅಣ್ಣಾ, ಈಗಿರೋ ಮನೇಮೇಲೆ ಇನ್ನೊಂದು ಬಿಲ್ಡಿಂಗ್ ಕಟ್ಟಿಸೋಣಾಂತಿದೀವಿ. ಇಬ್ಬರು ಮಕ್ಕಳಿಗೆ ಒಂದೊಂದು ಮನೆ ಆದ್ಹಾಗಾಗುತ್ತೆ, ಏನಂತಿ ?

''ಸರೀಮ್ಮಾ ಸಂತೋಷ...''

ಬಾಯಲ್ಲಿ ಹಾಗೆಂದರೂ ಇದ್ದ ಮನೆಯನ್ನು ಕಳೆದುಕೊಂಡ, ಸ್ವಂತಕ್ಕೊಂದು ಮನೆ ಮಾಡಿಕೊಳ್ಳದಿದ್ದ ಸಂಕಟ ಹೊಟ್ಟೆಯೊಳಗೆ ಹೊರಳಾಡಿತು. ಬುದ್ಧಿವಂತರಿರುವ ಲೋಕದಲ್ಲಿ ತಾನೊಬ್ಬ ದಡ್ಡ ಅನಿಸಿತು.

''ಅಣ್ಣಾ, ನಾಲ್ಕೈದು ಲಕ್ಷ ಅಡ್ಜೆಸ್ಟ್ ಮಾಡೋಕೆ ಆಗುತ್ತೇನಣ್ಣಾ? ನಾಲ್ಕೈದು ವರ್ಷದೊಳಗೆ ತೀರಿಸಿಬಿಡ್ತೀವಿ.''

''ನಾನೂ ಒಂದು ಮನೆ ಅಂತ ಮಾಡ್ಕೊಳ್ಳೋದು ಬೇಡ್ವೇನಮ್ಮಾ ? ಹುಡುಕ್ತಿದೀನಿ ಫ್ಲ್ಯಾಟು...''

''ನಿಂಗೇನು ಕಡಿಮೆ ಆಗಿದೆ ಬಿಡು. ರಿಟೈರ್ ಆದಾಗ ಭರ್ಜರಿ ದುಡ್ಡು ಸಿಕ್ಕಿರ್ಬೇಕಲ್ವಾ ?''

''ಬ್ಯಾಂಕಲ್ಲಿ ಕರೆದು ಸಾಲ ಕೊಡ್ತಾರೆ. ತಗೊಂಡ್ರಾಯ್ತಪ್ಪಾ. ಸಂಬಂಧದಲ್ಲಿ ಯಾಕೆ ಹಣದ ವ್ಯವಹಾರ ? ಚೆನ್ನಾಗಿರಲ್ಲ...''

ಎರಡು ನಿಮಿಷದ ಮೌನ. ನಿಟ್ಟುಸಿರು.

''ತಮಾಷೆ ಮಾಡ್ತೀಯಾ ಅಣ್ಣಾ? ಬ್ಯಾಂಕಿನ ಬಡ್ಡಿ ಕಟ್ಟಿ ಸಾಲ ತೀರ್ಸೋಕಾಗುತ್ತಾ ನಮ್ಗೆ ?''

''ಹಾಗಿದ್ರೆ ಸುಮ್ನಿರೋದಪ್ಪಾ. ಇರೋಕೆ ಒಂದು ಮನೆ ಉಂಟಲ್ಲ ?''

''ಏನೋ, ಒಬ್ಬೊಬ್ರಿಗೆ ಒಂದೊಂದು ಮನೆ ಕಟ್ಟಿಸಿಬಿಟ್ರೆ ಚೆನ್ನಾಗಿರ್ತಿತ್ತು ಅಂತ. ಮಕ್ಕಳಿಗೆ ನಮ್ಮ ಕೈಲಾದ್ದು ಮಾಡಿದೀವಿ ಅನ್ನೋ ಸಮಾಧಾನ...''

''ಯೋಚ್ನೆ ಮಾಡ್ತೀನಿ...'' ಅನ್ನುವಾಗ ಇನ್ನೊಂದು ಸಂಬಂಧವೂ ಬಿರುಕುಬಿಟ್ಟಿತು ಅನ್ನುವುದು ಮನದೊಳಗೆ ನಿಶ್ಚಿತವಾಗಿತ್ತು. ಹಣದ ಮೇಲೇ ವಿಶ್ವಾಸ ನಿಂತಿರುವುದಾದರೆ ಆ ಸಂಬಂಧ ಬೇಡ ಅಂತ ಅನಿಸುತ್ತಿದ್ದರೂ ಉಮ್ಮಳಿಸಿ ಬರುತ್ತಿರುವ ವ್ಯಥೆ. ಲೋಕ ಯಾಕೆ ಹೀಗೆ ಅನ್ನುವ ಚಿಂತೆ. ಅಥವಾ ಲೋಕ ಇರುವುದೇ ಹೀಗೋ ? ಅರ್ಥ ಮಾಡಿಕೊಳ್ಳುವಷ್ಟರಲ್ಲಿ ಮುಗಿದುಹೋಗಿರುತ್ತದೆ ಬದುಕು.



ವಸುಮತಿ ಉಡುಪ
'ಅಮೂಲ್ಯ', ನಂ. ೧೨೦
ಮೊದಲ ಮಹಡಿ, ಮೂರನೇ ಕ್ರಾಸ್
ವಿಜಯನಗರ ರೈಲ್ವೆ ಬಡಾವಣೆ
ಮೈಸೂರು - ೫೭೦ ೦೧೬

# ಬದುಕು ಬರಿದಾಯ್ತು



ಮದ್ರಾಸಲಿಂದ ಬೊಂಬೈಕಡಿಗಿ ಒಂಟಿದ್ದ ರೈಲ್‌ಗಾಡಿ ಸೀಟಿ ವೊಡ್ಕಂತ ಯಾತಗಿರಿ ಟೇಶನ್‌ದಾಗ ಬಂದ ನಿಂತಿತ. ಮೊದಲಕೆ ತುಂಬಿ ಪಿಟಿಗರ್ದಿದ್ದ ಜನರಲ್ ಡೆಬ್ಬ್ಯಾಗ ಮಂದಿ ನಾ ಮುಂದ ನೀ ಮುಂದಂತ ಏರ್‌ಲಕತ್ತಿದ್ರ, ಜ್ವಾಳ ತುಂಬಿದ ಚಿಮಟಿಗಿ ಚೀಲ ಏಗಲ್ ಮ್ಯಾಗ ವತ್ಗೊಂಡ್ ಕೈಯ್ಯಾಗೊಂದು ಕೈಚೀಲ ಇಡ್ಕೊಂಡ್ ಅದೇ ಡೆಬ್ಬ್ಯಾಗ ಏರ್ಬೇಕಂದಿದ್ದ ಶಾಣಪ್ಪ ಏರದಾಗಲಾರ್ದ ಇಂದಕ್ಕ ಸರ್ದ. 'ಮುಂದಿನ ಡಬ್ಬಿ ಖಾಲ್ಯಾದಂತ' ಯಾರಾ ಅಂದದ್ದ ಕೇಳಿ ಅಕಡಿಗಿ ನಡದ. ನಡವಿನ ಡೆಬ್ಬ್ಯಾಗ ಮಂದಿ ಕಮ್ಮಿದ್ದದ್ದ ನೋಡಿ ಅದರಾಗೇ ಎಬ್ಬಿದ. ಪೂರಾಖಾಲಿದ್ದ ಒಂದು ಸೀಟಿನ ತೆಳಗ ತನ್ ಚೀಲಗಳ್ನ ದಬ್ಬಿ ಕುಂತ್ಗೊಂಡ 'ಈ ಡೆಬ್ಬ್ಯಾಗ ಒಂದೊಂದ ಸೀಟಿಗಿ ಒಬ್ರೊಬ್ರೆ ಕುಂತಾರ, ಆದ್ರ ಕಾಲಿಡ್ಲಾಕ ಜಾಗ ಇಲ್ಲ ಅದೇ ಡಬ್ಬ್ಯಾಗ್ಯಾಕ ದಬ್ಬ್ಯಾಡ್ಕಂತ ಏರ್ತಾರಂತೀನಿ ಈ ಮಂದಿ, ಇಕಡಿ ಬರ್ಬಾರ್ದ ಕೋಡಿಗಳ್' ಅಂತಂದಕೊಂಡ. ಎದರಿನ ಸೀಟಿನ ಮ್ಯಾಲ್ ಪುಸ್ತಕಾ ಓದ್ಕಂತ ಮಕ್ಕೊಂಡಿದ್ದತಗ 'ಈ ಗಾಡಿ ಬೊಂಬೈಕ ಎಷ್ಟೊತ್ತಿಗಿ ಇರ್ತಾದ್ರಿ' ಅಂತ ಕೇಳಿದಾಗ ಅತ 'ಬೆಳಿಗ್ಗಿ ಐದು ಗಂಟ್ಯಾಕ' ಅಂದ. ಅಷ್ಟತಿಗೆ ಅಲ್ಲಿಗಿ ಬಂದ ತಿಕೀಟ್ ಮಾಸ್ತರ ಶಾಣಪ್ಪನ ತಿಕೀಟ ನೋಡಿ ಇಂದಿ ಮಾತ್‌ನ್ಯಾಗ್ ಏನೇನ ಅಂತ ಬೆದರ್ಸಿ, ಕೈಯನ ಪುಸ್ತಕದಾಗ ಏನಾ ಬರ್ಲ್ಯಾಕ ನಿಂತಾಗ, ಶಾಣಪ್ಪ ಪಿಳಿಪಿಳಿ ಕಣ್‌ಬುಟ್ಗಂತ ಅತನ್ನೇ ನೋಡ್ಲಾಕತ್ತಿದ. ಅವ್ನ ಎದ್ರಿಗಿದ್ದಾತ ತಿಕೀಟ ಮಾಸ್ತರಗ ಇಂದ್ಯಾಗ ಏನೇನಾ ಏಳಿದ್‌ಮ್ಯಾಗ ಆತ ಸುಮ್‌ನಾಗಿ ಮುಂದಕ್ ವಾದ.

'ಇದೇ ಮೊದ್ಲಸಲ ಗಾಡ್ಯಾಗ ವಂಟಿದೇನೆಪಾ ಯಜಮಾನ, ನಿನಗ ಇಂದಿ ಮಾತ್ ಬರಾಂಗಿಲ್ಲೇನ ?' ಅಂದ. 'ಔದ್ರಿ ನಾ ರೈಲ್‌ಗಾಡ್ಯಾಗ ಕುಂತ್ಗೊಂಟದ್ದ ಇದೇ ಪೈಲ್ಯಾ ಸಲಾರಿ, ನಾವ್ ಮುಸ್ಲಮಾನ್‌ರಲ್ಲರಿ ಅದಕೆ ನನಗ ಇಂದಿ ಬರಂಗಿಲ್ರಿ' ಅಂದ ಶಾಣಪ್ಪ. ನಕ್ಕೊಂತ ಆ ಮನಿಶ್ಯಾ 'ಅಲ್ಲೆಜಿಮಾನ ನೀ ಜನರಲ್ ಟಿಕೀಟ್ ತೊಗೊಂಡಿದಿ, ಬಂದ ರಿಜರ್‌ವೇಶನ ಡೆಬ್ಬ್ಯಾಗ ಎಬ್ಬಿದ್ರೆಂಗ ? ನಿನಗ್ಗ ಗೊತ್ತಿಲಂತ ನಾ ಆ ಟಿಕೀಟ್ ಮಾಸ್ತಾರ್‌ಗ ಏಳಿದ್ಲಂದ್ರ ನಿನಗ ದಂಡಾ ಆಕ್ತಿದ್ದ, ಜನರಲ್ ಟಿಕೀಟ್ ತೊಗೊಂಡೋರು ಈ ಡೆಬ್ಬ್ಯಾಗ ಬರಬಾರ್ದು, ಮುಂದ ವಾಡಿ ಜಂಗಶನ್‌ದಾಗ ಗಾಡಿ ಭಾಳ್ ವತ್ತಾ ನಿಂದ್ರತಾದ. ಅವಗ ನೀ ಓಗಿ ಜನರಲ್ ಡಬ್ಬ್ಯಾಗ ಎಬ್ಬು. ಅಂವ ಚೆಕಿಂಗ್ ಮತ್ತ್ಯ ಒಳ್ಳಿ ಬಂದ್‌ನಂದ್ರ ಈ ಸಲ ದಂಡಾ ವಸ್ಲ್ ಮಾಡ್ತಾನ್‌ನೋಡ' ಅಂತಂದ. ಯಾವೂರ್ ಯಜಮಾನ ನಿಂದು ? ಅಂತ ಕೇಳಿದ್ದಕ 'ನಂದ ಇಲ್ಲೇ ಶಾಪೂರ್ ಬೆಲ್ಲಿ ಸಿರ್ವಾಳ ಅಂತಾದ್ರಿ, ನಿಮ್ದ್‌ಯಾವೂರ್ರಿ ಸಾಬ್ರೆ ?' 'ನಂದೂ ಇಲ್ಲೇ ರೈಚೂರ್ ಸಮೀಪ್‌ದ ಊರ. ಮತ್ತ ನೀ ಬೊಂಬೈಕ ಯಾಕ ಒಂಟದೆಪ ?' ಅಂತ ಆ ಎದ್ರುಗಿದ್ದಾತ ಶಾಣಪ್ಪಗ ಕೇಳಿದಾಗ 'ವಟ್ಟಿ ಬದಕ್ಲಾಕ ಒಂಟನಿರಿ, ನಮ್ಮೂರ್ ಕಡೀಗಿ ಈ ವರ್ಸ್ ಒಟ್ಟ ಇಲ್ಯಕ ಮಳೀನೆ ಆಗಿಲ್ರಿ, ಈ ವರ್ಸ್ ವೊಲಗಳೆಲ್ಲಾ ಪಡಾವ್ ಬಿದ್ದಾವ್ರಿ, ಮಾಡ್ಲಾಕ ಏನೇನ್ ಕೆಲ್ಸಗಳೇ ಅತ್ತವಲ್ದವ್ರಿ, ಇಂಗಾಗಿ ಮಂದಿಗಿ ಭಾಳ್ ತ್ರಾಸ್ ಆಗ್ಯಾದ, ನಮ್ವೆ ಎಡ್ಡೆತ್ಗೊಳಾವ್ರಿ, ಸೊಲ್ಪ ಸೊಂತ ವೊಲಾನೂ ಆದ್ರಿ ಒಂದೀಟ ಮಂದೀವ್ನೂ ಪಾಲೀಗಿ ಮಾಡ್ತಿದ್ವಿ. ವಾದ್ ವರ್ಷನೂ ಬೆಳಿ ಕೈ ಕೊಟ್ಟಾವ್ರಿ, ಎಣ್ಣೆ ಪುಡಿಗ್ಯೆಂತ್ ಸಾಲಮಾಡಿದ್ವಿ. ಸಾಲ ಕೊಟ್ಟಾಂವ ಎಲ್ಲೀಮಾತ ಉಗಾದಿಗೆ ಸಾಲ ಮುಟ್ಸಂತ ಕುಂತಿದ್ದ, ಅವ್ನಿಗಿ ಮುಂಗಾರಿ ಏಸರ್ ಬರಣ ನಿನ್‌ಸಾಲ್ ಮೊದಲ್ ಕಟ್ತೆನಂತ ಮಾತ್ಕೊಟ್ಟಿದ್ಯ, ಆದ್ರ ಮುಂಗಾರಿ ಬಿತ್ಗೆನೆ ಆಗ್ಲಿಲ್ಲ, ಮನ್ನ್ಯ ಸಾಲಕೊಟ್ಟಾಂವ ಮತ್ತ್ಯ ಬಂದ್ ಎತ್ಗೋಳ್ ಇಡ್ಕೊಂಡ್ ವೊಗ್ಲಾಕ್ ನಿಂತಿದ್ನರಿ. ಇನ ಸೊಲ್ಪ ದಿನ ಟೇಮ್‌ಕೊಡ್ರಿ ನಿಮ್‌ಸಾಲ ಪೂರಾ ಆಗ್ಲಿಕನೂ, ಬಡ್ಡ್ಯನ ಕಟ್ತೇನಂತ ಅವನ್ ಕೈಕಾಲಿಕಂಡಿವ್ರಿ ಸುಮ್ನಾಗಿ ಒಗ್ಯಾನ. ಆ ಎತ್ಗೋಳ್ದಾಗ ಒಂದ ಮನಿ ಹೋರಿ ಆದ್ರಿ, ಅದಕ್ಕ ಸಣ್ಣದಿರ್ಲಕ್ಲಿಂದ ನನ್‌ಕೈಯಾಗೆ ಮೇಸಿಕೇಸಿ ದೊಡ್ಡದ ಮಾಡಿನಿ, ಅದ್ರನ್ ಬ್ಯಾರ್ಯೆದರ ಕೈಯಾಗ ಎಂಗ್ ಕೊಡ್ಲೀರಿ...?' ಅನ್‌ತಾ ಶಾಣಪ್ಪ ಕಿಡ್ಕಿಯ ವರಗ್ ನೊಡ್ಲಕತ್ತಿದ.

'ನಿಮ್ ಕಡೀಗಿ ನೀರಾವರಿ ಬಂದಿರ್‌ಬೇಕಲ್‌ಪಾ ಯಜಮಾನ' ಅಂತಂದ. 'ನೀರಾವರಿ ಎಲ್ಲಾ ಬಂದ ಭಾಳಾವರ್ಸ ಆದುವ್ರಿ, ಆದರ್ ಕ್ಯಾನಲ್ ಕೌಲಿನೇ ಬೇಸಿ ಮಾಡಿಲ್ಲ, ಬರೇ ಅಲ್ಲೀಟ, ಇಲ್ಲೀಟ ತೋಡಿ ಒಂದ್‌ನಾಕ್ ಪರ್ಸಿ ಅಚ್ಚಿದಂಗ್ ಮಾಡಿ ರೊಕ್ಕಾ ಎತ್ಗೆಂಡ್ ತಿಂದಾರ್ ಇವ್ರೌನ್ ಸೂಳ್ಯಾಮಕ್ಳ, ನೀರ್ ಬಾ ಅಂದ್ರ ಎಲ್ಲಿಂದ ಬರ್ತಾವ್‌ರೀ. ಅದರಾಗ ಮ್ಯಾಲೆಲ್ಲಾ ಗೌಡ್ರ ವೊಲಗೊಳಾವ್ರಿ. ಅವ್ರ ಕೌಳಿ ಗದ್ದೀ ಮಾಡಿ ಆಂದ್ರದರಿಗಿ ಪಾಲಿಗಿ ಕೊಟ್ಟಾರ್, ಕೌಳಿಗದ್ದೀಗಿ ನೀರ ಜಗ್ಗ್ಯ ಬೇಕಾಗ್‌ತದ. ಮೊದಲೇ ನಮ್ ವೊಲಗಳ್ ಕ್ಯಾನಲ್ ಕೌಲೀಗಿ ಪೂರಾ ಕಡೀಗಿ ಅವ್ ನಮಗ ನೀರೇ ಬಂದ ಮುಟ್ಟಂಗಿಲ್ಲ. ಇಂಗಾಗಿ ಅಚ್ಚೇ ವರ್ಸ ನೀರ್ ಸಿಗಲಾರ್ದ ಜ್ವಾಳಾ ಆಗ್ಲಿಲ್ಲ. ಅವ್ರಿಗಿ ಯಾರ್ ಕೇಳ್ಬೇಕ್‌ರಿ ನೀರ್ ಬುಡ್ರೆಂತ ? ಮೊದ್ಲೆಲ್ಲಾ ರಾತ್ರಿ ಕಡೀಗ ನೀರ್ ಸಿಗ್ಗಿದ್ವರಿ, ಆದಕ್ಕೆ ಒಂದೆರಡ್ವರ್ಸ ನೀರಾವರಿ ಮಾಡಿದ್ವಿ, ಆದರ ಗೌಡ್ರು ಕೌಳಿ ಗದ್ದಿ ಮಾಡಿದ ಮ್ಯಾಲ ಅವ್ರಗುಡಾ ಎಲ್ಲಿ ಗುದ್ದ್ಯಾಡದಂತ್ ನೀರಾವರಿ ಮಾಡದೇ ಬುಟ್ಟ ಬಟ್ಟೀವ್ರಿ' ಅಂತ ಶಾಣಪ್ಪಾ ಬಡಬಡನೆ ಅಂದ.

'ಈ ವರ್ಸ ಸರಕಾರದ ಕಡೀಲಿಂದ ಎಲ್ಲಾ ಊರಾಗ ನಿಮ್ಮಂತರಿಗಿ ಕೂಲಿ ಕೆಲ್ಸ ಕೊಡ್ಲಾಕತ್ತ್ಯಾರಲ್ಲಪ, ಮತ್ತ ನಿಮ್ಮೂರಾಗ ಇನ್ನೂ ಆ ಕೆಲ್ಸ ಚಾಲೂ ಆಗಿಲ್ಲೇನ್ ?' ಅಂತ್ ಅತಾ ಕೇಳಿದಾಗ ಶಾಣಪ್ಪ 'ನಮ್ಮೂರಾಗ್ನೂ ಅದೇನ ದಿವ್ಸಾ ಅರವತ್ತ ರುಪ್ಪೆ ಕೂಲಿ ಕೊಡ್ತಾರಂತ ಅಂದ್ರ, ಅದರ ಸಲ್ಯಕ ಪೋಸ್ಟಾಪೀಸ್‌ದಾಗ ಊರಿಗಿ ಊರ್ ಮಂದೀನೆ ಐವತ್ತ-ಐವತ್ತ ರೂಪ್ಪೆ ಕಟ್ಟಿ ಎಸರ್ ಬರಸಿದ್ವಿ. ಆದರ ಇಲ್ಲಿತಕಾ ಕೆಲ್ಸಾನೂ ಕೊಡ್ಲಿಲ್ಲ, ಕೂಲೀನೂ ಕೊಟ್ಟಿಲ್ಲ. ಇಂಗಾಗಿ

---

**ಅನಘ**

ಕೈಲ್ಯಾ ಬಾಯಿಲ್ಯಾ ಕೂಡ್ದೇ ಆಳ್ಳಾಗಿ ಗಪ್ ಕುಂತೀವ್ರಿ. ಪಾದ್ ತಿಂಗಳ್‌ದಾಗ ಊರ್ ಮುಂದಿ ಆಳ್ಳಾಗಿನ ಸರ್ಕಾರ ಜಾಲಿನ ಪ್ರೋಕಲಸ್ ತಂದ ಅಲ್ಲೀಟ್ ಕಿತ್ತಿದಂಗ್ ಮಾಡಿ ಒಂದ್ ಲಕ್ಷಾನ ಎಷ್ಟಾ ಏತ್ಸ್ಕಂಡ್ ತಿಂದಾರಂತ ನಮ್ಮೂರಾಗ ಮಂದಿ ಅಲ್ಲಾಕತ್ತಿದ್ರಿ. ಅಂತವೆಲ್ಲಾ ಕೆಲ್ಸ ನಮ್ ಕೈಗೆವಾಗ ಆತ್ತಾವ್ರಿ, ನಮ್ಮೂರಾಗ ಏಳವ್ರ-ಕೇಳವ್ರ ಯಾರ್ ಇಲ್ಲಾರಿ ಇಂಗಂತ ಎಲ್ಲಾ ನಡವದ್ರಿ, ನಮ್ಮೂರಾಗನೂ ಯಾರನ ಒಬ್ರಿಬ್ರು ನಿಮ್ಮಂತ ಓದ್ದೋರ್-ಬರ್ದರ್ ಇದ್ದಿದ್ರಂದ ಕೇಳ್ತಿದ್ರ...', ಅಂತಂದು ಸುಮ್ಮಾದ ಶಾಣಪ್ಪ, ಮತ್ತೆ ತಾನೇ ಮಾತ್ ಮುಂದ್‌ವರ್ಸಿ 'ಅದರಾಗ ನಮ್ಮನ್ಯಾಗ ನಮ್ಮಪ್ಪಗ ವೊಂದೀಟ ಅರಾಮಿಲ್ಲರಿ ದಮ್ಮ-ಕೆಮ್ಮ ಸೇರಿಕ್ಯಾಗ್ಯದ. ಮನ್ನೆ ಡಾಕ್ತ್ರಗ ತೋರ್ಸಿದಾಗ ಅತಾ ಜೀಡಿ ಸೇದಾದ ಬುಟ್ ಬುಡ್ಬೇಕಂತ ಏಳ್ಯಾನ, ಇತ ನೋಡಿದ್ರ ಜೀಡಿ ಸೇದದ ಬಿಡ್ಲಾಕೇ ತಯಾರಿಲ್ಲ. ಕಲ್ಬುರ್ಗಿಂತಲ್ಗಿ ಚೊಲೋ ಡಾಕ್ಟ್ರ ಬಲ್ಲಿ ಕರ್ಕೊಂಡ್ಹೋಗಿ ತೋರ್ಸಬೇಕಂದ್ರ ರೊಕ್ಕಾವೊಂದ್ ಇಲ್ಲ. ಬೊಂಬೈದಾಗ ದುಡೆರ್ಗಿ ಕೂಲಿ ಚೊಲೋ ಆದಂತ್ರಿ, ಅದ್ಕೇ ನಾನ್‌ನೂ ಬೊಂಬೈಕ ಒಂಟೆನ್ರಿ. ನಮ್ಮೂರಾನ್ ಸಾಲದ ರಿಣಾ ಮುಟ್ಸಿ, ನಮ್ಮಪ್ಪಗ ಒಂದೀಟ ದವಾಕಾನಿಗಿ ತೋರ್ಸಿ ಅರಾಮಾದ್ರ ಕಲ್ಬುರ್ಗಿ ಶಾಣಬಸಪ್ಪ ಮುತ್ಯಾಗ ಜಾತ್ರಿಗಿ ಬಂದ ಜೋಡ್ ತೆಂಗಿನಕಾಯಿ ಒಡ್ದೀನಂತ ಬರಾ ಮುಂದಾಗ ಬೇಡ್ಕೆಂಡ್ ಬಂದೀನ್ರಿ. ಆತ ನಮ್ ಕೈ ಬಿಡಂಗಿಲ್ಲಂತ ಭರಾಸಾದ್ರಿ' ಅಂತಂದ.

ರೈಲು ನಿಂತಾಗ 'ಇದು ಯಾವೂರಾದರಿ' ಅಂದ ಶಾಣಪ್ಪ. 'ಇದ ನಾಲ್ವಾರ್ ಸ್ಟೇಶನ್ ಆದಪಾ, ಇದಾಗಣ ಮುಂದ ಬರದೇ ವಾಡಿ ಟೇಶನ್' ಅಂದ ಆ ಮನಿಶ್ಯಾ. 'ನಾಲ್ವಾರ್ದಲಿಂದ ನಮ್ಮೂರ್ ಭಾಳ್ ಸನೀಪ್ ಆಗ್ತದ್ರಿ' ಅಂತ್ ಶಾಣಪ್ಪ ಮೂಡಲ್ಕ್ ಕೈ ಮಾಡಿ ತೋರಿಸ್ದ. 'ಇಲ್ಲಪಾ ನಿನಗ ಇಂದೀನೆ ಬರಂಗಿಲ್ಲ ಅಲ್ಲಿ ಬೊಂಬೈದಾಗ ಓಗಿ ಎಂಗ್ ಕಾಲಾ ಮಾಡ್ತಿ? ಅಲ್ಲಿ ಯಾರನ ಕೂನ್‌ದರ ಆರಾ ಇಲ್ಲಾ?' ಅಂತಂದಾಗ 'ಬೊಂಬೈದಾಗ ನಮ್‌ಕಡೀಗರ್ ಭಾಳ್ ಮಂದಿ ಆರ್ರಿ, ನಮ್ಮೂರರೇ ಎಸೋನೆ ಮಂದಿ ಓಗ್ಯಾರ್, ನಮ್ ಅಕ್ಕ-ಮಾಮ ಭಾಳ್ ದಿವ್ಸದಲಿಂದ ಅಲ್ಲೇ ಆರ್ರಿ. ಉಗಾದಿ ಅಬ್ಬಕ್ ಇಲ್ಲಿಗಿ ಬಂದಾಗ ಅಲ್ಲಿದ ಪತಾ ಮತ್ತ ಪೋನ್ ನಂಬರ್ ಕೊಟ್ಟ ಓಗ್ಯಾರ್, ನನಗ ತಮ್‌ಗುಡಾನೇ ಬೊಂಬೈಕ್ ಬಾರಂತ ಕುಂತಿದ್ರ, ನಾನೇ ನಾ ಆಕಡಿ ಪಾದರ್ರ ಇಲ್ಲಿ ಗಳ್ಯಾ ಓಡ್ಯಾರ್ ಯಾರಂತ್ ಓಗ್ಲಿಲ್ಲ. ಮಳ್ಳೆನ ಬರ್ತಾದೇನಂತ ಮಾಡಿದ್ದ, ಅದನೂ ಕೈಕೊಟ್ಟಾದ, ಅದ್ಕೆ ನಿನ್ಯಾ ನಮ್ಮಾಮನ ಮೊಬಲ್ಕ ಪೋನ್ ಮಾಡಿ ಏಳಿನ್ರಿ, ನಾಳಿಗಿ ನಾ ಗಾಡಿಗಿ ಕೂಡ್ತಿನಿ ನೀ ಬೊಂಬೈ ಟೇಶನ್‌ಕ ಬಂದ ನನಗ ಕರ್ಕೊಂಡೋಗಂತ' ಅಂತನ್ತಾ ತನ ಕಿಸ್ಯಾದಾಗ್ಲಿಂದ ಅತ ಬರ್ದಕೊಟ್ಟಿದ್ದ ಚೀಟಿ ತೆಗ್ದ ತೋರ್ಸಿದ. ಅದನ ಇಸ್ಗಂಡ ನೋಡಿದ ಆತ 'ಬೊಂಬೈ ಅಂದ್ರ ಭಾಳ ದೊಡದ್ದ ಆದ, ಅಲ್ಲಿ ಭಾಳಷ್ಟು ಸೇಶನ್‌ಗಳು ಬರ್ತಾವ, ನೀ ಎಲ್ಲಿಂತ ಇಳೀತಿ? ಬಗಲಾಗ ಇದ್ದರಿಗಿ 'ದಾದರ' ಸ್ಟೇಶನ್ ಬಂತೇನಂತ ಕೇಳಿ, ಬಂದಾದಂತ ಅಂದಕೂಡ್ಲೆ ಕೆಳಗಿಳಿ, ತಡಮಾಡ ಬ್ಯಾಡ, ಅಲ್ಲಿ ಭಾಳ ಮಂದಿ ಇಳ್ಯಾರಿರ್ತಾರ, ಗಾಡೀನೂ ಅಲ್ಲಿ ಭಾಳ ಒತ್ತಾ ನಿಂದ್ರಂಗಿಲ್ಲ.'

ವಾಡಿ ಜಂಗಶನ್‌ದಾಗ ರೈಲಗಾಡಿ ನಿಂತಾಗ ಅತ ಶಾಣಪ್ಪಗ ಕೆಳಗಿಳಿಲ್ಯಾಕ ಏಳಿ ಅತನ ಇಂದ್ ಬಂದು ಜನರಲ್ ಡೆಬ್ಬಿ ಇರ ಕಡೆ ಕರ್ಕೊಂಡ್ಹೋಗಿ ಎಬ್ಸಿ 'ಈಗ ಸದ್ಯಾಕ ಅಲ್ಲೇ ಕೆಳಗ ಕುಂದ್ರ ಮುಂದ ಗುಲ್ಬರ್ಗಾದಾಗನ ಆಗಲಿ ಇಲ್ಲ ಸೊಲಾಪುರದಾಗನ ಆಗ್ಲಿ ಸೀಟ ಕಾಲಿ ಆಗ್ತಂದ್ರ ಸೀಟಿನ ಮ್ಯಾಲ ಕುಂದ್ರ' ಅಂತೇಳಿದ. 'ಆಯ್ತರಿ ಸಾಬ್ರೆ ನಮಸ್ಕಾರ.' ಗಾಡಿ ಕಲ್ಬುರ್ಗಿ ಟೇಶನ್‌ದಾಗ ನಿಂತದ್ ಗೊತ್ತಾಗಿ ಶಾಣಪ್ಪ ಕುಂತಲ್ಲಿಂದೆ 'ಶಾಣುಬಸುವೇಸುರ'ಗ ನೆನದು ಗಂಗಿ ದಿಕ್ಕಿಗಿ ಕೈ ಜೋಡ್ಸಿದ.

ಗಾಡಿ ಸೊಲಾಪುರ ಟೇಶನ್‌ದಾಗ ನಿಂತಾಗ ಶಾಣಪ್ಪ ಸೀಟಿನ ಮ್ಯಾಗ ಕುಂತಿದ್ದ. ತನ್ನಂಗೆ ಬಗಲ್ ಮ್ಯಾಗ ಗಂಟ್ ಒತ್ಕೊಂಡ್ ದಬ್ಬ್ಯಾಕ್ಕಂತ ಕನಡಾ ಮಾತಾಡ್ತಾ ಗಾಡ್ಯಾಗ ಬಂದ ಒಬ್ಬ ಮ್ಯಾಗಡಿ ಟೋಪ್ಗಿ ಮನಿಷ್ಯಾಗ ನೋಡಿ ತಾನೇ ಸ್ವಲ್ಪ ಒಳ್ಯಾಕ್ ಸರ್ದ್, ಕುಂದ್ರಲಾಕ ಏಳಿ 'ನಿಂಮ್ದು ಯಾವೂರ್ರೀ, ಎಲ್ಗಿ ಒಂಟೀರಿ?' ಅಂತಂದ. ಅತ 'ನಮ್ದು ಬಿಜಾಪೂರ ಜಿಲ್ಲಾರಿ, ಬೊಂಬೈಕ ಒಂಟೀನಿ' ಅಂದ. 'ಬೊಂಬೈದಾಗ ನೀವ್ ಎಲ್ಲಿಳಿತೀರಿ' ಅಂತ ಮತ್ತ ಕೇಳಿದ ಶಾಣಪ್ಪ. 'ಠಾಣ್ಯಾ ಟೇಶನ್‌ಕ ಇಳಿತೀನಿ' ಅಂದಾಗ. 'ದಾದರ್ ಟೇಶನ್ ಅಂತಲ್ಲರಿ ನಾ ಅಲ್ಲಿ ಇಳಿ ಬೇಕ್ ನೋಡ್ರಿ. ಅದ ಎಲ್ಲಿ ಬರ್ತಾದಂತ ನನ್ಗ ಗೊತ್ತಿಲ್ಲ' ಅಂತ್ ಕೇಳಿದ ಶಾಣಪ್ಪ. 'ನಾ ಇಳ್ಯಾ ಠಾಣ್ಯಾ ಟೇಶನ್ ಆಗಗಾ ಅದೇ ಬರ್ತಾದ, ನಾ ಇಳ್ಯಾಗೆಲ್ಲ ನಿನಗ ಏಳ್ಕೆ ಇಳಿತ್ನಿ ತೊಗ ನೀ ಏನ್ ಚಿಂತಿ ಮಾಡ್‌ಬ್ಯಾಡ್ಡ' ಅಂತಂದ ಆ ಮನಷಾ. 'ನಿನೆ ಎಸರೇನ್ರಿ' ಅಂತಂದದ್ಕ 'ನನ್ ಏಸರ ಮರಲಿಂಗಪ್ಪ ಅಂತ್ರಿ, ಮತ್ ನೀವ್ ಮಕಡ್ಗ್ಯಾರಿ', ಅಂದ. 'ನನ್ನೆಸರ ಶಾಣಪ್ಪಂತ್ರಿ, ನಮ್ಮೂರ್ ಸಿರ್ವಾಳರಿ, ಕಾಪೂರ ಬಲ್ಲಿ ಬರ್ತಾದ' ಅಂತಂದ ಶಾಣಪ್ಪ. 'ನೀ ನನ್ಗ ಜತಿ ಆದದ್ದ ಭಾಳ ಚೊಲೊ ಆಯ್ತ ನೋಡ್ರಿ, ಯಾಕಂದ್ರ ಈ ಡೆಬ್ಬ್ಯಾಗ ಇರಾ ಮಂದೆಲ್ಲ ಆದೇನ್ ಮಾತಡ್ತಾರೋ ಏನೋ ನನ್ಗ ಒಂದೀಟ ತಿಳ್ಯಾವಲ್ದು, ಬೆಪ್ಪ್ಯಾಗಿ ಅವರ ಮಾರಿ ನೋಡ್ಕೆಂತ ಕುಂದ್ರಗಾಗಿತ್ತಾ ನೀ ಬಂಗನ

# ಮಾತಿಗೆ ಹಂಬಲಿಸಿ...



**ಭಾಗ ಒಂದು - ಮೌನವೇ ?**

ಒಳಗೆ ನುಲಿವ ನೂರು ಮಾತಿಗೆ
ಚಡಪಡಿಕೆ - ಹೇಳಲೇ ? ಹೇಳದಿರಲೇ ?
ಸಂಕಟವೂ ಹಿತವೇ ?
ಬಳಿ ಇರದಿರೆ !

ಹೊರಡದು. ಹೇಳಲಾಗದು.
ಅಂತರಂಗದೊಳಗೇ ರಿಂಗಣ !
ಸಂತೃಪ್ತಿಯ ಮಧುರ ಸಂಕಟ
ಬಳಿ ಇದ್ದರೆ !

ಕೂತಿದ್ದೇನೆ ಮುಖಾಮುಖಿ-ಮಾತಿಲ್ಲ
ಆತ್ಮಗಳ ಮಾತುಕತೆ ಮೌನವೇ ?

ಮೌನಕ್ಕೆ ಕಾವು ನೀಡುವೆ !
ಮರಿ ಮಾಡುವೆ !
ಮಾತಿನ ಗರಿ ಬಿಚ್ಚಿ ಹಾರಲಿ ಮೌನ !

**ಭಾಗ ಎರಡು - ಮಾತೆಲ್ಲಿದೆ ?**

ಪ್ರೀತಿ ಬಣ್ಣನೆಗೆ ಪದಗಳುಂಟೇ ?
ರೂಪಕ್ಕೆ ಹದ ಉಂಟೇ ?
ಗುಣದ ಗುಣಗಾನ ಆಗಸದ ನೀಲಿಯಂತೆ
ನೀಲಿಗೆಣೆ ಉಂಟೇ ?

ಬಣ್ಣಕ್ಕೆ, ರೂಪಕ್ಕೆ, ಸ್ಥಳ, ಕಾಲಕ್ಕೆಲ್ಲಿ ಬೆಲೆ ?
ಜಗದ ಕಣ್ಣ ನಂಟುಗಳ ಗೆರೆ ಮೀರಿ
ಗಂಟು ! ಅಂಟಂಟು ತಲೆ !
ಒಳಗೆ ಉರಿವ ಒಲೆ.ಕುದಿವ ನೀರು
ಆತ್ಮಗಳ ಮಾತುಕತೆ ಕೇಳಿತೇ ?
ಮಾತೆಲ್ಲಿದೆ ?

ಬಂದಗಡಿ ರಾಜೇಶ್ವರಿ

ನಮ್ ಕನಡಾ ಮಾತಾಡತ ಸಿಕ್ಕ್ಯಪ, ಬೆಳತನಕ ಏನನ ಮಾತಾಡ್ಕೆಂತ ಓಗ್ಲಾಕ್ ಮನ್ಸ ಬರ್ತದ, ಇಲ್ಲಂದ್ರ ನಂದ ಭಾಳ ಐರಾಣೆತ್ತ ಬುಡ್ರಿ' ಅಂತಂದ ಶಾಣಪ್ಪ. 'ನನಗನ ನೀ ಸಿಕ್ಕದ್ದ ಚೊಲಾ ಆಯ್ತಪ' ಅಂತ ಮರ್ಲಿಂಗಪ್ಪೂ ಅಂದ.

'ನಿಮ್ ಮ್ಯಾಗಡಿ ಕಡೀನ ಈ ವರ್ಸ್ ಮಳೀ ಆಗಿಲ್ಲೇನ್ರಿ, ಅದಕ ನೀವೂನ ಬೊಂಬೈಕ ಒಂಟಿರೇನ್' ಅಂತ ಶಾಣಪ್ಪ ಅನದ್ರಗೆ 'ಔದಪ ನಮ್ ಕಡೀನ ಮಳೀ ಆಗಿಲ್ಲ, ನಾವ್ ಭಾಳ ವರ್ಷಲಿಂದ ಬೊಂಬೈಕ ಓಗಿವಿ, ನಮ್ಮಂತ್ ದುಡ್ಕಂಡ ತಿನ್ನರಿಗಿ ಎಲ್ಲ್ಯಾದ್ರೇನ್ ? ನಮ್ಕಡೀಗಂತ್ರ ಮಾಡಗಿರಿ ಏನ್ ಕೂಲೀನೇ ಅತ್ತಂಗಿಲ್ಲ, ಅದ್ಕೆ ನಮ್ಕಡೆರ್ ಭಾಳ ಜನಾ ವೊಟ್ಟಿ ಬದಕ್ಲಾಕಂತ ಬೊಂಬೈ-ಪುನ್ಯಾಕ್ ಓಗ್ತಾರ್, ವರ್ಸದಾಗ ಎರಡ್ಮೂರ್ ಸಾರಿ ಅಬ್ಬ ಜಾತ್ರಿಗಂತ್ ಊರಿಗಿ ಬಂದ್ಹೋಗ್ತಿವಿ' ಅಂತ ಮರ್ಲಿಂಗಪ್ಪ ಏಳ್ತಿದ್ದ. 'ನೀವ್ ಯಾ ಮಂದಿ ?' ಅಂತ್ ಶಾಣಪ್ಪ ಕೇಳಿದ್ದಕ್ಕ 'ನಾವ್ ಮಾತಂಗಿ ಮಕ್ಕಳ್‌ರಿ ಮತ್ ನೀವ್ ?' ಅಂತ ಮರ್ಲಿಂಗಪ್ಪ ಅಂದಾಗ 'ನಾವ್ ಗಂಗೀ ಮಕ್ಕಳ್‌ರ್ರಿ, ಯಾ ಜಾತಿ ತೊಗಂಡ್ ಯೇನ್ ಮಾಡದಾದ್ರಿ ಮನಸ್ ಒಂದು ಚಂದಿದ್ರ ಸಾಕ್, ಆ ಜಾತಿ ಈ ಜಾತಿ ಅಂತೆಲ್ಲ ನಾವ್ ನರ್ ಮನ್ಸೇರ್ ನಡ್ವೆ ಮಾಡ್ಕೆಂಡ್ವಾವಾ' ಅಂತಂದ ವೊರಗ್ ನೋಡ್ಕೆಂತ ಶಾಣಪ್ಪ. ಅವ್‌ರಿಬ್ರೂ ಇಂಗೇ ಆ ಮಾತ್ ಈ ಮಾತ್ ಆಡ್ಕೆಂತ ಕುಂತಿದ್ರು. ಗಾಡಿ ಇನಾಇಸ್ಟ್ ಇನಾಇಸ್ಟ್ ದೌಡ ದೌಡ ನಡ್ಲೆಕತ್ತಿತ್ತು. ಮರ್ಲಿಂಗಪ್ಪ ಬುತ್ತಿ ತೆಗ್ದು ಊಟನ ಮಾಡಂಬಾಪ ಅಂದ, ಶಾಣಪ್ಪನೂ ಅವರವ್ವ ಕಟ್ಟಿ ಕೊಟ್ಟಿದ್ದ ಬುತ್ತಿ ಕಡ್ಯಾಕ ತೆಗದ ಮರ್ಲಿಂಗಪ್ಪಗ 'ಅಗಾ ನಂದೂ ಒಂದೀಟ ರೊಟ್ಟಿ ಪಲ್ಲ್ಯ ತೊಗೋಪಾ' ಅಂದ. 'ಬ್ಯಾಡಪಾ ನನಬೆಲ್ಲೀನು ಬುತ್ತಿ ಎಟೋನ ಆದ', ಅನ್ತಾ ಶಾಣಪ್ಪನಲಿಂದ ರೊಟ್ಟಿ ಗಟ್ಟಿಬ್ಯಾಳಿ ತೊಗೊಂಡ. 'ಯಾಕಪಾ ಮಂದೀಗಿ ನೋಡ್ಲಾಕತ್ತೀದೆಲ ಇಸ್ಟ್ ಮಂದ್ಯಾಗ ಕುಂತ ಎಂಗ್ ಉಣ್ಬೇಕೆಂದೇನ್, ಗಾಡ್ಯಾಗ ಬಂದ್ ಮ್ಯಾಗ ಆಯ್ತ್ ಅವೆಲ್ಲಾ ಬುಡ್ಕೇಕ್, ಇಲ್ಲಿ ಎಂಗ್ ಬರ್ತದೊ ಅಂಗೇ ಸಿಕ್ಕದೇ ಸಿವಾಯ್ ನಮಾ ಅನ್ಬೇಕು, ಇನಾ ಇವತ್ತ ಗಾಡಿ ಸ್ವಲ್ಪ ಖಾಲ್ಯಾದ್ಹೇಳ್, ನಾ ಊರ್ ಕಡೀಗಿ ಬರಾಮುಂದ ಕಾಲಿಟ್ಟೇನಂದ್ರ ಸಂದರ್ಲಿಲ್ಲ, ಬೊಂಬೈಲಿಂದ ಬೆಳತನಕಾ ಒಂಟಗಾಲಿನ ಮ್ಯಾಲ್ ನಿಂತ್‌ಕಂಡೆ ಬಂದ್ನೆಪಾ, ಇವತ್ತ ಕುಂದ್ರಲಾಕನಾ ಜಾಗ ಸಿಕ್ಕಾದ ಪಾಡೇಳ್' ಅಂತ ಬಾಯಾಗ ತುತ್ತಿಟ್ಕಂತ ಅಂದ ಮರ್ಲಿಂಗಪ್ಪ.

ಉಣದ ಆದ ಮ್ಯಾಲ ಮರ್ಲಿಂಗಪ್ಪ ಕಿಸ್ಯಾದಾಗ್ಲಿಂದ ಸುಣ್ಣ-ತಂಬಾಕದ ಚೀಟ ತೆಗ್ದ 'ಯೇ ತಮ್ಮಾ ತೊಗೊಪಾ ಆಯ್ಕೆಂತೇನ್ ನೀನ್ ?' ಅಂದ. 'ಇಲ್ಲಪ ನನಗ ಸುಣ್ಣಾ ತಂಬಾಕ್, ಅಡ್ಕಿ-ಗಿಡ್ಕಿ, ಬೀಡಿ-ಗೀಡಿದ ಏನ್ ಚಟಾನೂ ಇಲ್ಲಾ' ಅಂತಂದ ಶಾಣಪ್ಪ. 'ಭಾಳ ಚೊಲೋ ನೋಡಪಾ, ನಾನ್ ಮೊದ್ಲಕ ನಿನ್ನಂಗೇ ಇದ್ದ್ಯಾ, ಲಗ್ಣಾದ ಮ್ಯಾಲ ಬೀಡಿ ಸೇದಾಕ್ ಕಲ್ತ್ಯಾ, ಬೊಂಬೈ ಕಡೀಗ ವೊಟ್ಟಿ ಬದ್ಕಾಕಂತ ವಾದ ಮ್ಯಾಲ ಅಲ್ಲಿನಾ ಸೇದಾ ಸೌ ನಂಬರ ಬೀಡಿ ಸಿಗ್ಲಿಲ್ಲ, ಬಾರ್‍ಯಾವ್ ಸೇದಿದರ ಕೆಮ್ಮಸ್ತಿತ್ತ ಅದಕಾ ಬೀಡಿ ಸೇದದ ಬುಟ್ ಈ ಸುಣ್ಣಾ ತಂಬಾಕ ತಿನ್ನದ ಕಲ್‌ತೀನಿ, ಮಾರಾಸ್ಟ್ರದಾಗ ಮಂದಿ ಎಕಡಿ ವಾದರನೂ ಕೈಯಾ ತಂಬಾಕ್‌ನೆ ತಿಕ್ಕತಿರತಾರ ನೋಡಪಾ' ಅಂತಂದ ಮರ್ಲಿಂಗಪ್ಪ ತಾನೂ ಅದ್ನೇ ಮಾಡ್ಕೆಂತಾ ತಂಬಾಕ್ ತಿಕ್ಕಿ ತುಟಿ ಜಗ್ಗಿ ಅದನ್ ಒಳಗಿಟ್ಗಂಡ. ಕೈ ಜಾಡ್ಸಗೆಂತ ಮತ್ತ್ಯಾ ಶಾಣಪ್ಪಗಂದ 'ಅಲ್ಲಪ ತಮ್ಮಾ ನಿಂದ ಇನಾ ಮದ್ವಿ ಆಗ್ಯಾದಾ ಇಲ್ಲಾ ?' 'ಇಲ್ಲಾರಿ ನಂದಿನ ಮದಿವಿ ಆಗಿಲ್ಲ. ಮನಿ ಕಡಿಗಿ ಇನ ಸಾಲ ಭಾಳ ಆದಾ, ಅದ್ರನ ಮುಟ್ಸಿದ ಮ್ಯಾಲ ಮನಿ-ಗಿನಿ ಕಟ್ಸಿ ಮದಿವಿ ಮಾಡ್ಕೆಂಡ್ರಾಯ್ತಂತ ಬುಟ್ಟೀನಿ, ವಾದ್ ವರ್ಸ್‌ನೆ ನಮ್ ತಂಗಿ ಲಗ್ಣ ಮಾಡಿದ್ವಿ ಅವಾಗೆ ಒಂದ್ರದಗ ಒಂದ್ ಓಗ್ತದಂತ ನಮ್ಮಪ್ಪ ನಂದನೂ ಲಗ್ಣ ಮಾಡಿದ್ರಾಯ್ತಂತ ಅಕಡಿಕಡಿ ಎಣ್ಣ್ ನೋಡ್ಲಾಕತ್ತಿದ್ದ, ಸಾಲಕ್ಕಂಜಿ ನಾನೇ ವಲ್ಲೆಂದ್ಯಾ. ಅಲ್ದೆ ಇನಾ ಸಂಣ್ಣವ ನಮ್ ತಮ್ ಒಬ್ಬಾಂವ ಆನ, ಅವ್ನೂ ಕಲ್ಬುರ್‍ಗ್ಯಾಗ ಸಾಲಿ ಕಲ್ಯಾಕತ್ತ್ಯಾನ, ಅವನ್ದು ಈ ವರ್ಸ ಖರ್ಚ್ ಭಾಳ ಬರ್ತಾದಂತ ಏಳ್ಯಾನ, ಯಾಂಕದ್ರ ? ಮುಂದ ಸಾಲಿ ಮಾಸ್ತರ ಆಗದ ಗೋರ್ಮೆಂಟ್ ಸೀಟ ಸಿಕ್ಕಾದಂತ, ಎಸ್ಟಾರ ತ್ರಾಸ ಆದ್ರ ಆಗಲಿ ವೊಲ ಮಾರ್‍ಯೆನ ಅವ್ನಿಗಿ ನೌಕ್ರಿ ಅತ್ತತನಕಾ ಸಾಲಿ ಕಲ್ಸ ಬೇಕಂತ ನಮ್ಮಪ್ಪ ಅಂದಾನ, ಅವ್ನಿಗಿ ಒಂದ ನೌಕ್ರಿ ಸಿಕ್ಯಂದ್ರ ನಮ್ಮನಿನೇ ಅಂವ ಒಬ್ಬವ್ನೇ ಸಲುವ್‌ತಾನ್' ಅಂತ ಶಾಣಪ್ಪ ಅಂದಾಗ 'ನೀ ಮದಿವಿ ಮಾಡಿಕೊಳ್ಳಾರ್ದೆ ಪಾಡ ಮಾಡಿದೆಪೊ, ಯಾಕಂದ್ರ ನಾನೂ ಮದಿವಿ ಮಾಡ್ಕಳ್ಯಾಕ ಮಾಡಿದ ಸಾಲ ಮುಟ್ಸಲಾಕಂತೇ ಊರ್ ಉದ್ಮಾನ ಎಲ್ಲಾ ಬುಟ್ಟ್ ಬೊಂಬೈ-ಪುನ್ಯಾ ಅಂತ ದುಡ್ಲ್ಯಾಕ್ ವಾದದ್ದ. ಇಂಗ್ ಊರ್ಬುಟ್ಟ ಓಗಿದ್ಲಂದ್ರ ಇದ್ದದ ತಟಗ್ ವೊಲಾ ಮನೀನೂ ಸಾಲದೋರ್ಗಿ ಕಪ್ಟ ಇಡಬೇಕಾಗಿತ್ತ. ಇವತ್ ನಾಳ್ಯಾ ಅಳ್ಳ್ಯಾಗ ಏನ ಉಳದಿಲ್ಲಪೋ... ಬರೇ ಕುಡೇದ-ತಿನದ ಕಲ್ತಾವ, ಇಲ್ಲಂದ್ರ ಜಗಳಾ ಆಡ್ತಾವ್, ದುಡ್ಕಂಡ ತಿನ್ನರ್ಗಿ ಬೊಂಬೈ-ಬೆಂಗ್ಳೂರ್‌ದಂತ ಊರ್‌ಗಳೇ ಪಾಡಾವ್‌ಪೋ...' ಅಂತ ಮರ್ಲಿಂಗಪ್ಪ ಅಂತಿರುವಾಗ್ಗೆ 'ಚಾಯ್... ಚಾಯ್...ऽ' ಅನ್ಕೊಂತ ಚಾದವನು ಬಂದಾಗ ಎರ್ಡ ಕಪ್ಪ ಚಾ ತೊಗಂಡ ಮರ್ಲಿಂಗಪ್ಪ, ಶಾಂಣಪ್ಪ ರೊಕ್ಕ ಕೊಡ್ಬೇಕನಾರದಾಗ ನೀ ಕೊಡಬ್ಯಾಡಪಾ ನನ್ಬೆಲ್ಲಿ ಚಿಲ್ಲರ ಆವಾ ನಾನೇ ಕೊಡ್ತೀನಂತ ತಾನೇ ಕೊಟ್ಟ.

ಗಾಡಿ ದೌಂಡ್ ಜಂಗ್‌ಶನ್‌ದಾಗ ನಿಂತತ್ತ ಮರ್ಲಿಂಗಪ್ಪ ಕುಂತಲ್ಲೇ ಸ್ವಲ್ಪ ಅಕಡಿಕಡ್ಗಿ ಕುಂಡಿ ಸರ್ಸದಂಗ ಮಾಡಿ 'ರಾತ್ರಿ ಭಾಳ ಆಗ್ಯಾದಂತ ಕಾಣ್ತದ ತಮ್ಮಾ ನನಗ ಯಾಕಾ ಕಣ್ ಮುಚ್ಚಿದಂಗ್ಹಾಗ್ಲಕತ್ತ್ಯಾವ, ನಿನ್ನಿ ರಾತ್ರೀನು ಚೆಂದಾಗಿ ನಿದ್ದೀ ಆಗಿಲ್ಲ, ಯಾಂಕದ್ರ ಯಣ್ತ ಬಾಣ್ಯಾತನ್ಕ ತೌರ್ಮನೀಗಿ ಓಗ್ಯಾಳ ಮಾತಾಡ್ಸಲಕಂತ ಓಗಿದ್ದ್ಯಾ, ಅಲ್ಲಿ ದ್ವಾಮಿಗಳ ಕಾಟಾ ಎಚ್ಚಾಗಿ ರಾತ್ರಿ ನಿದ್ದೀನೇ ಆಗಿಲ್ಲ, ನೀನ್ ಸೊಲ್ಪ ಇಂದಕ್ಕ ಸರ್ದ್ ಸೀಟಿಗಿ ತೆಲಿ ಅನ್ಸಿ ಅಂಗೆ ಕಣ್ಮುಚ್ಚು ತಾನೇ ಜಂಪ್ ತೊಗೊಂತಾದ ಎಷ್ಟೊತ್ತಂತ ಅಂಗೇ ಕಣ್ಬುಟ್ಗಂಡ ಕುಂದರ್ತೀದಿ' ಅಂತಂದಾಗ 'ನನಗ್ಯಾಕಾ ಕಾಲ್ಮಡಿ ಬಂದ್ಹಾಂಗಾಗ್ಲಕತ್ಯಾವಪ' ಅಂದ ಶಾಣಪ್ಪ. 'ಔದ್ ನಡೀಪ ನನಗನೂ ಬಂದಾವ್ ಓಗಿ ಕಾಲ್ಮಡ್ದ ಬರಮ್' ಅನ್ಕೊಂತ ಕಾಲಗ ಅಡ್ಡಾದಿಡ್ಡ್ಯಾಗಿ ಮಕ್ಕೊಂಡಿದ್ದ ಮಂದಿಗಿ ದಾಟ್ಗ್ಯೆಂತ ಓಗಿ ಕಾಲ್ಮಡದು ವಳ್ಳಿ ಬಂದ ಕುಂತ್ರು. ಕುಂತಲ್ಲೇ ಅವ್ರಿಗಿ ಜಂಪ್ ತೊಗಂಡಿತ್ತ.

ಬೆಳಗಾ ಮುಂಜಾನಿ ಮರ್ಲಿಂಗಪ್ಪಗ ಎಚ್ಚ್ರಾರಾದಾಗ ಗಾಡಿ ಕಲ್ಯಾಣ ಟೇಶನ್‌ದಾಗ ನಿಂತಿತ್ತ, ಶಾಣಪ್ಪಗ ಎಬ್ಸಿ 'ಇನ್ ನಾ ಇಳ್ಯಾ ಟೇಶನ್ ಬರ್ತಾದಪಾ, ನೀನ್ ಎಚ್ಚ್ರಾಗಿರ ನಂದಾಗಣ ನೀ ಇಳ್ಯಾ ಟೇಶನ್‌ನು ಜಲ್ದಿನೇ ಬರ್ತಾದ' ಅಂದ. 'ಮತ್ತ್ಯೆವಾಗ್ ಭೆಟ್ಟಿ ಆಗ್ತಿವೇನ್ ನೋಡಪ್, ದೈವ ಕಲ್ಸಿತಂದ್ರ ಮತ್ತೈ ಕೂಡಮಂತ..., ನಾ ಇನ್ ಬರ್ತೀನೆಪಾ ನೀ ಉಷಾರಾಗಿರೋ ತಮ್ಮಾ ಬೊಂಬೈದಾಗ ಭಾಳ ಖತರ್‌ನಾಕ್ ಮಂದಿ ಆರ, ಮೋಟಾರ್-ಗಾಡಿಗಳ್‌ನೂ ಯೆಕಾಡೆಂದ್ರಕಡಿ ತಿರಗ್ತಿರ್ತಾವ, ನೀ ಸುಮ್ ಸುಮ್ನೆ ಆಕಡಿಕಡ್ಗಿ ತಿರಗ್ ಬ್ಯಾಡ..., ಇದೇ ನಾ ಇಳ್ಯಾ ಟೇಶನ್, ಇದಾಗಣ ನಿಂದ್ರದೆ ನೀ ಇಳ್ಯಾ 'ದಾದರ್' ಟೇಶನ್ ನೋಡ ಈ ಎದರಿನವ್ರನು ಅಲ್ಲೇ ಇಳ್ಯಾರಂತ ನೋಡ್ ಅವರ್ ಗುಡಾನೇ ನೀನ್ ಇಳಿ', ಅಂದ ಮರ್ಲಿಂಗಪ್ಪ ತೆಳಗಿಳ್ದ ಕಿಡಕ್ಯಾಗ ಮೋತಿಟ್ಟ ಶಾಣಪ್ಪಗ ಮತ್ತೊಮ್ಮಿ ಕೈ ಮಾಡಿ 'ನಾ ಬರ್ತಿನಿಪಾ' ಅಂದ. ಗಾಡಿ ಈಟೀಟ ಜಟಗಿ ವೊಡ್ಕಂತ ಮುಂದಕ್ ನಡ್ಲ್ಯಾಕತ್ತಿತ್ತ ಶಾಣಪ್ಪನೂ ಸಾಗರ್‌ಬಿದ್ದ ಕೈ ಮಾಡ್ಕೆಂತ ಕಿಡಕ್ಯಾಗಲಿಂದ ಅತಾ ಕಣ್ಮರಿ ಆಗತಕಾ ಅಕಡ್ಕೇ ನೋಡ್ಲಕತ್ತಿದ್ದ...!

ಗಾಡಿ 'ದಾದರ್' ಟೇಶನ್‌ದಾಗ ಬಂದ ನಿಂತಾಗ ಇನಾ ಚುಮ್ ಚುಮ್ ನಸಗಿತ್ತಾ. ಶಾಣಪ್ಪ ತನ್ ಜ್ವಾಳದ ಚೀಲಾನ ಏಗಲ ಮ್ಯಾಲಿಟ್ಗೊಂಡ ಕೈಯಾಗ ಕೈಚೀಲಿಡ್ಕೊಂಡ ಜನ ಜಂಗ್ಳಿ ಸೊಲ್ಪ ಕಮ್ಮಿ ಆದ ಮ್ಯಾಲ ಮುಂದಕ್ಕ್ ನಡದಿದ್ದ, ಇಂದ್ಲಿಂದ ಯಾರಾ ಆತನ ಚೀಲ ಇಡದ್ ಜಗ್ಗಿದಂಗಾಯ್ತ ಅದಕ್ಕ ಇಂದಕ್ಕ ತಿರ್ಗಿ ನೋಡಿದ, ಕರಿಕೋಟ್ ಉಟ್ಗಂಡತ ಒಬ್ಬಂವ ಇಂದ್ಯಾಗ ಏನೇನ ಒದರ್‌ತಿದ್ದ. ಶಾಣಪ್ಪ ತನ್ ಕಿಸ್ಯಾದಾಗಿದ್ದ ತಿಕೀಟ ತೆಗ್ದ ತೋರ್ಸಿದರ್‍ೂ ಅಂವಾ ಪೆನ್ಸಿಲ್ಯ ಜ್ವಾಳದ ಚೀಲಕ್ಕ ತಿವ್ದ ತಿವ್ದ ಏನಾ ಕೇಳ್ತಿದ್ದ. ಶಾಣಪ್ಪ ಏನಂತ ಅತ್ನ ಮೋತಿ ನೋಡದ್ರಗೆ ಅಂವ ಶಾಣಪ್ಪನ ರಟ್ಟಿ ಇಡ್ದ ಜ್ವಾಳದ ಚೀಲ ಜಗ್ಗಿ ತೆಳಗಿಳ್ಸಿ ಶಾಣಪ್ಪನ ಬಗಲ ಕಿಸ್ಯಾಕ ಕೈ ಆಕಿ ಅದರಾಗಿದ್ದ ಮುವತ್ತ ರುಪೈ ತೆಕ್ಕೊಂಡ್ 'ಚಲ್' ಅಂದ್ಗೆಸಿ ಮುಂದಕ್ಕೋಗಿ ದೊಡ್ಡ ಚೀಲದ ಗಂಟ್ ಒತ್ಗೊಂಡ ಮಕ್ಕಳ್-ಮರೀಗಳ್ನೊನ್ ಕರ್‍ಕೊಂಡ್ ಒಂಟಿದ್ದ ಮತ್ತ್ಯಾ ಇಬ್ಬರ್-ಮೂವರ್ಗಿ ಅಡ್ಡ ನಿಂತ. ಶಾಣಪ್ಪ ಪೆಕ್ಕ್ಯಾಗಿ ಕರಿ ಕೋಟ್ನವ್ನಿಗೆ ಬಿರಿ ಬಿರಿ ನೋಡ್ಕೆಂತ ತನ್ ಜ್ವಾಳದ ಚೀಲಾನ ಎತ್ತಿ ಎಗಲ್ ಮ್ಯಾಗಿಟ್ಗೊಂಡ್ ಒಂದೆರಡ್ಹೆಜ್ಜಿ ಮುಂದಕ್ಕೋಗಿ ಮತ್ತ್ಯಾ ಇಂದಕ್ಕ ತಿರಿಗಿ ನೋಡಿದಾ. ಅವ್ರೂನೂ ತಮ್ ಗಂಟ್‌ಗಳ್ ತೆಳಗಿಳಿಸಿ ಕರಿಕೋಟ್‌ನವನ್ ಕಾಲಿಗಿ ಬೀಳದ, ಕೈ ಜೋಡ್ಸದ ಮಾಡ್ಲಕತ್ತಿದ್ರ...!

ಯಕಾಡಿ ಓಗ್ಬೇಕಂತ ಗೊತ್ತಾಗ್‌ಲಾರ್ದೆ ಶಾಣಪ್ಪ ಅಕಾಡಿಕಾಡಿ ನೋಡದರಾಗ ದೂರ್ಲಿಂದ ಯಾರಾ 'ಏ ಶಾಣೂ' ಅಂತ ಒದರಿದಂಗಾಯ್ತ. ಆ ದನಿ ಮಾವ ಲಚಮಣ್ಣಂದಂತ್ ಗೊತ್ತಿಡ್ಲ್ಯಾಕ್ ಶಾಣಪ್ಪಗ ತಡಾ ಆಗ್ಲಿಲ್ಲ. 'ಯಾ ಡೆಬ್ಬ್ಯಾಗಿದ್ದ್ಹೋ... ಮಾರಾಯ ನಾ ಇಂದಿನ್ ಡಬ್ಬ್ಯಾಗಿರ್ತಾನಂತ ಇಂದ್ಹೋಗಿ ನಿಂತಿದ್ದ್ಯಾ. ಕುಂದ್ರಲಕ ಜಾಗ ಸಿಕ್ಕಿತ್ತಾ ಯಂಗ್, ಊರ್ಕಡಿ ಎಲ್ಲರ ಆರಾಮಾರಾ ಎಂಗ್ ?' ಅಂತ ಕೇಳ್ದ ಲಚಮಣ್ಣ. 'ಉಂ ಎಲ್ಲರ ಪಾಡಾರ, ನಾ ಪೂರಾ ಮುಂದಿನ ಡೆಬ್ಬ್ಯಾಗ ಕುಂತಿದ್ದ್ಯಾ, ಸೊಲಾಪೂರ್ಕ ಬಂದ ಮ್ಯಾಗ ಕುಂದ್ರಲಾಕ ಜಾಗ ಸಿಕ್ಕಿತ' ಅಂತಂದ ಶಾಣಪ್ಪ. ಇಬ್ರೂ ಕಲ್ತ ಲೋಕಲ್ ಗಾಡ್ಯಾಗ ಎಬ್ಬಿ 'ಜೋಗೇಸುರಿ' ಟೇಶನ್‌ದಾಗ ಇಳ್ದ, ಮತ್ತ್ಯ ಬಸ್ ಏರಿ ಊರಿನ ಕಡೀಬೀಸ್ ಇನಾ ಕಟ್ತಿದ್ದ ಒಂದ ದೊಡ್ಡ ಬಿಲ್ಡಿಂಗಿನ ಸನೀಪ ಬಂದಿಳದ್ರು. ಅದೇ ಬಿಲ್ಡಿಂಗಿನ ಮುಂದ ಸಣ್ಣ ಸಣ್ಣ ಜೋಪ್ಡಿಗಳಿದ್ವು, ಅಲ್ಲೇ ಒಂದ ಜೋಪ್ಡಿ ಮುಂದ ತಮ್ಮನ ದಾರಿ ಕಾಯ್ಕಂತ ನಿಂತಿದ್ದ ಗಂಗವ್ವ ತಮ್ಮನ ಕೈಯಾನ ಚೀಲ ಇಸ್ಗಂತ 'ಊರಾಗ ಅಪ್ಪ-ಅವಾರೆಲ್ಲ ಆರಾಮಾರೆನಪಾ' ಅಂತಂದಳು. 'ಉಂ ಎಲ್ಲರ ಆರಾಮಾರೆಕ್ಕಾ' ಅಂತಂದ ಶಾಣಪ್ಪಗ 'ನಮ ಮುದಕವ್ವ ಎಂಗಾಳ ದಿನಾ ಸಾಲಿಗಿ ಓಗ್ತಾಳೇನ್‌ಪಾ ? ನೀ ಬರಾಮುಂದ ಅಕೀನೂ ನಿನಗುಡ ಬರ್ತಿನಂತ ಅಂದಿರ್ಬೆಕಲ್ಲ ?' ಅಂತ ಮತ್ತ್ಯ ಕೇಳಿದ್ಲು.

'ಉಂ ಹೋಗ್ತಾಳ, ಅಕಿ ಎಲ್ಲ ತಯಾರಾಗಿ ನಿಂತಿದ್ಳು, ನಿಮ್ಮಪ್ಪ ಅವ್ವರೆ ಇಲ್ಲಿಗಿ ಬರ್ಲಾಕತ್ಯಾರಂತ ಸುಳ್ಳೇಳಿ ಅಕಿನ ಅಲ್ಲೇ ಬುಟ್ ಬಂದ್ಯಾ' ಅಂತಂದ ಅಕ್ಕನ ಕೈಲಿ ನೀರಿಸ್ಗೊಂತ.

ತಮ್ಮ ಬರ್ತಾನಂತ ಮೊದ್ಲೆ ನೀರ್ ಕಾಸಿಟ್ಟಿದ್ಳು ಗಂಗವ್ವ. ಅಲ್ಲೆ ಜೋಪ್ಡಿ ಮುಂದ ಆಕಿದ್ದ ಒಂದ ಕಲ್ಲಿನ ಮ್ಯಾಲ ನಿಂತ ಶಾಣಪ್ಪ ಮೈತೊಳ್ಕಂಡ ನಿಮ್ಮಾಮ ನೀನ್ ಇಬ್ರು ಉಳ್ಳಾಕ ಕುಂದ್ರೆಪ, ಅಂದು ಆವ್ರಿಗಿ ಉಳ್ಳಾಕ ಕೊಟ್ಟ ಗಂಗವ್ವ, ಊರ್ಲಿಂದ ಅವ್ವ ಕಟ್ಟಿ ಕಳ್ಸಿದ್ದ ಬುತ್ತಿ ಬಿಚ್ಗೆಂಡ ಅಕಿನೂ ಉಳ್ಳಾಕ ಕುಂತದ್ದ ನೋಡಿದ ಶಾಣಪ್ಪ 'ಅದ ಗಟ್ಟಿ ಬ್ಯಾಳಿ ಅಳ್ಸಿರ್‌ಬೇಕ್ಗ ಅದರ್ನ ಯಾಕ್ ಉಣ್ತಿ?' ಅಂತಂದಾಗ 'ಇಲ್ಲಾ ಪೂರಾ ಏನ್ ಅಳ್ಸಿಲ್ಲ್ ಶ್ಯಾಣೂ ಒಂತಂಟಕ ಬಳ್ಸ ಬಳ್ಸ ಆಗ್ಯಾದ, ಅವ್ವ ಬುತ್ತಿಗಿ ಗಟ್ಟ ಬ್ಯಾಳಿ ಮಾಡಿ ಕಟ್ ಬೇಕಾದ್ರ ಜಗ್ಗ್ಯ ಉಳಿ ಇಂಡಿ ಮಗಸ್ತಾಳ ಅದ ಮೂರ್ ದಿನಾ ಆದ್ರನೂ ಅಳ್ಸಂಗಿಲ್ಲ. ಅಕಿ ಕೈಲ್ಯ ಮಾಡಿದ ಯವದೇ ಅಡ್ಗಿ ಇರವಲ್ದಾಕ ಗನರುಚಿ ಇರ್ತದ... ಯಾಕೇನ್...? ರೊಟ್ಟಿನೇ ಸೊಲ್ಪ್ ದಮ್ಮ ದಮ್ಮ ಮಾಡಿ ಕಟ್ಟ್ಯಾಳ. ನಸ್ಗಿನ್ಯಾಗ ಎದ್ದ ಮಾಡ್ಯಾಳ' ಏನ? ಅಂತದ್ಳು ಗಂಗವ್ವ. 'ಊಂ ಬೆಳಗಾ ಮುಂಜಾನಿ ಕೋಳಿ ಕೂಗದ್ಕ ಮೊದ್ಲೇ ಎದ್ಗೇಸಿ ಮಾಡ್ಯಾಳ', ಅಂದ. 'ಊರಿಗೊಂಟರ್ಗಿ ಅವ್ವ ಬುತ್ತಿ ಮಾಡಿ ಕಟ್ಬೇಕಾದರ ಎಲ್ಲಿಂದನ ಪುಂಡ್ಯಾಪಲ್ಯಾ ತಂದ ಮಾಡಿ ಕಟ್ಟಕಿ, ಯಾಕ? ಎಲ್ಲೀ ಪುಂಡ್ಯಾಪಲ್ಲ್ಯಾ ಸಿಗ್ಲಿಲ್ಲೇನ್?' ಅಂತ ಗಂಗವ್ವ ಕೇಳಿದಾಗ. 'ಅಕಿ ಎಲ್ಲಾ ಕಾಯ್‌ಪಲ್ಯಾಕಟ್ಗಿ ಪುಂಡ್ಯಾಪಲ್ಲ್ಯಾ ತರ್ಲಾಕಂತೇ ಉಡ್ಯಾಗ ಜ್ವಾಳಾ ಆಯ್ಕೆಂಡ್ ಒಗಿದ್ಳ ಸಿಗ್ಲಿಲ್ಲಂತ. ನಂಬೆಲ್ಲಿ ಒಟ್ಟ ಮಳೀನೆ ಇಲ್ಲ, ಅಂತದ್ರಾಗ ಪುಂಡ್ಯಾಪಲ್ಲ್ಯಾ ಎಲ್ಲಿಂದ್ ಬರ್ಬೇಕ್‌ವಾ?' ಅಂತಂದ ಶಾಣಪ್ಪ.

ನಡುವ್ ಬಾಯಿ ಆಕಿದ ಲಚಮಣ್ಣ 'ಇವ್‌ನೌನ್ ಇಲ್ಲಿ ಬೊಂಬೈದಾಗ ನೋಡ್ ಮಳಿ ಇದಿಮಾಯಾಗಿ ಕೈತೊಳ್ಕಂಡ್ ಬೆನ್ನ ಅತ್ಯಾದ, ಕೆಲ್ಸಕ್ಕ ಸೈತ್ಯಾ ಪೊಗ್ಲಾಕ ಬರ್ಲಾರ್‌ದಂಗ ದಿವ್ಸ ಬರ್ತದ, ಎಕಡ್ಲಿಂದ ಬರ್ತಾದ ಏನ? ನಮ್ ಕಡಿಗಿ ಯಾಕಿರ್ಲಾಕಿಲ್ಲಂತಿನಿ?' ಅಂತಂದ. 'ಈ ದೇಶದ ಕಡಿಗಿ ಮಳಿ ಚಾಲಿತ್ತಂದ್ರ ನಮ್ ಕಡಿಗಿ ಮಳೀನೆ ಬರಂಗಿಲ್ಲ' ಎಂದ್ಳು ಗಂಗವ್ವ. ಮತ್ತ್ಯ ಬಾಯಾಗ್ ತುತ್ತಿಟ್ಗಂತ ಕೇಳಿದ್ಳು 'ಸಣ್ಣ ತಮ್ಮೇನ್ ಸಾಲಿ ಕಲಿಲ್ಯಾಕ್ ಅಲ್ಲೆ ಕಲ್ಬುರ್ಗಿದಾಗೆ ಆನೇನ್? ಆತಗಿನಾ ಯವಾದನಾ ನೌಕ್ರಿ-ಗಿವಕ್ರಿ ಬಂದದಾ ಏನ್ ಇಲ್ಲಾ?' ಅಂತನ್ನುವಷ್ಟರಾಗ ಶಾಣಪ್ಪಗ ತುತ್ತು ಗಂಟಲ್ದಾಗ ನಿಂತಂಗಾಗಿ ಬಿಕ್ಕ ಬಂದದ್ದ ನೋಡಿ ಮಾತ್ ಅಷ್ಟಕೇ ನಿಲ್ಸಿದ ಗಂಗವ್ವ 'ಅಯ್ಯ ನೀರನ ಕುಡ್ಯೆಪ, ನಿನಗ ಅವ್ವನೇ ನೆನ್ಸಿರ್ಬೇಕ್, ಅಕಿಗಿ ಗನ ಚಿಂತಿ ಎಂಗ್ಹೋಗಿ ಮುಟ್ಟಿದ್ನೋ ಏನಾ ಅಂತ, ಅಕಿದ ಮನ್ಸೆಲ್ಲಾ ಇಕಡಿಗೇ ಇರ್ತಾದ, ನಾ ಎಲ್ಲ ಚೆಂದೋಗಿ ಮುಟ್ಟಿನಂತ ಚೆಂಜಿಕಡಿಗಿ ಊರಿಗೀಟ್ ಫೋನ್ ಮಾಡ್ರಿ' ಅಂತೇಳಿದಳು. ಜಲ್ದಿ ಜಲ್ದಿ ಉಂಡ್ ಕೈ ತೊಳ್ಕಂಡ ಗಂಗವ್ವ, ಶಾಣಪ್ಪಗ 'ನೀ ಇನಾ ಈಟ್ ಅನ್ನಾ ತೊಗಪಾ, ಗಾಡ್ಯಾಗೇನ್ ಪೊಟ್ಟಿ ತುಂಬ ಉಂಡಿದ್ಯಾಯಿಲ್ಲ...' ಅಂತನ್ನುತನೇ ಗಂಗಾಳ್ ತೊಳ್ಕಂತ ಪೊರಗ್ ಬಂದ್ ಚೆಲ್ಕೆಂತ 'ಅಗಾ ಎಲ್ಲೋಸ್ ಮಂದಿ ತಯ್ಯಾರಾಗಿ ಕೆಲ್ಸಕ್ಕ ಒಂಟರ ನೋಡಾ, ನೀ ಅವ್ರ ಗುಡಾ ಒಗ್ಹೋಗ್. ನಾ ಸೊಲ್ಪ್ ತಮ್ಮನ ಸಂಗಟ ಮಾತಾಡಿ ಬರ್ತಿನ್ಯಂತ' ಅಂತದ್ಳು ಗಂಡಗ. ಬಾಯಾಗಿನ ನೀರ್ ಮುಕ್ಳಸ್ಗಂತ ಗುಡ್ಸಲ್ದಾಗಲಿಂದ ಬಗ್ಗೀ ಪೊರಗ್ ಬಂದ ಉಗಳಿದ ಲಚಮಣ್ಣ 'ಹೇ ಶಾಣೂ ಮಂದಿ ಕೆಲ್ಸಕ್ಕ ಒಂಟಾರಪ ನಾ ಅವರ ಗುಡಾ ಒಗ್ತಿನಿ, ಇಲ್ಲೇ ಇದೇ ಕಟ್ಟಾ ಬಿಲ್ಡಿಂಗ್‌ದಾಗ ಕೆಲ್‌ಸಾ ನಡದಾದ ಮತ್ತ್ಯಾ ಮದ್ಯಾಣಕ್ ಬರ್ತಿನಿ' ಅಂದ. ಗಂಡಗ ಸೆಲ್ಯಾ ಕೊಡ್ಲಕ್ ಪೊರಗ್ ಬಂದ ಗಂಗವ್ವ 'ಆಂಗೇ ಆ ಸೇಟ್ಗಿ ಮತ್ತ್ಯಾಗುತ್ತೇದಾರ್ಗ ನಾಳಿಲಿಂದ ನಮ್ ಶಾಣೂನು ಕೆಲ್ಸಕ್ಕ ಬರ್ತಾನಂತ ಏಳ್' ಅಂದ್ಳು. ತಲಿ ಅಡ್ಸಿ 'ಉಂ' ಅಂದ ಲಚಮಣ್ಣ ನಡ್ದ.

ಜೋಪ್ಡಿಗಳ ಮುಂದ ಇದ್ದ ದೊಡ್ಡ ಗಿಡದ ತೆಳ್ಗ ಗುಂಪ್ಯಾಕಿದ್ದ ಉಸ್ಗಿನ ಮ್ಯಾಲ ಕುಂತ್ಗೊಂತ ಗಂಗವ್ವ ತಮ್ಮಗ ಕೇಳಿದ್ಳು 'ಮನ್ನೆ ನಾವ್ ಊರಿಗಿ ಫೋನ್ ಮಾಡಿದಾಗ ಅಪ್ಪಗ ಭಾಳ ಅರಾಮ ಇಲ್ಲಿಂದೆಲಪ...? ಈಗೆಂಗಾದ, ಅರಾಮಾಗ್ಯಾದಾ ಇಲ್ಲಾ' ಅಂತ. 'ಈಗ ಸೊಲ್ಪ ಅರಾಮಾಗ್ಯಾದವಾ... ಕೆಮ್ಮ ಅಂಗೇ ಆದ' ಅಂತಂದ ಶಾಣಪ್ಪ. 'ಇನವಂದ ಸೊಲ್ಪ ಚೋಲೋ ಡಾಕಟರ ಬೆಲ್ಲ್ಯನ ತೋರ್ಸ ಬೇಕಿತ್ತಪ್ಪಾ. ಮನ್ನ್ಯ ಅಂವ ಸಾಲಾ ಕೊಟ್ಟಾಂವ್ ಬಂದ ಮನಿ ಮುಂದ ನಿಂತ ಒದರಿ ಪಾದ ಮ್ಯಾಲಂತರ ಅಪ್ಪ ಮನ್ಸಿಗಿ ಅಚ್ಗೆಂಡ್ ಬಾಳ್ ಒಳಗ ಬಿದ್ದಾನಂತಲಪ... ಅತಾ ಮೊದ್ಲೇ ಯಾರ್ ಕೈಲೀ ಒಂದ್ ಮಾತ್ನೂ ಅನ್ಸಿಗ್ಯಲಾರ್ದತ. ಅವ್ನಗ್‌ನೂ ಕಣ್ಣದರ್ ಸುಮಾರ್ ಅಗ್ಯಾವಂತಲ್ಲ? ಅದರ್ಕೆ ಏನ ಮಾಡಿತ್ತ... ಮೊದ್ಲಿಂದನಾ ದುಡ್ಡ ದುಡ್ಡ ಸಣ್ಣಾಗ್ಯದ. ಮ್ಯಾಲ್ಕ ಅಪ್ಪಗ ಒಂದೀಟ್ ಅರಾಮ್ ಇರ್ಲಾದ್ದೊಂದು.... ಆ ಸಾಲದ್ದೊಂದ ದೊಡ್ಡ್ ಚಿಂತ. ಆ ದೆವ್ವ್ ನಿಮ್ಮ್ಯಾಲಿ ಎಂದ್ ಕಣ್ ತರ್ತ್ಯಾನೇನ್?' ಅಂತ ಕಣ್ಣಾಸ್ ನೀರ್ ತೆಗ್ಗ ಸೆರಗ್ಗಿಂದ ಒರ್ಸಿಗೆಂತ ಅಂದ್ಳು. ಶಾಣಪ್ಪ ಅಕ್ಕನ ಮಾರಿ ನೋಡಿ 'ಅಳ್‌ಬ್ಯಾಡಗ ನಮ್ ಅಣ್ಣಾಬರ್‌ದಾಗ ಇದ್ದಂಗ ಆಗ್ತಾದ. ನಾ ಇಲ್ಲಿ ಸೊಲ್ಪ್ ದಿನ ಇದ್ದ ಕೆಲ್ಸಾ ಮಾಡಿ ರೊಕ್ಕ ತೊಗೊಂಡ್ಹೋಗಿ ಈ ವರ್ಸ್ ಅವ್ರಿಗಿ ಬಡ್ಡಿ ಕಟ್ತೀನಿ, ಅಂಗೇ ಅಪ್ಪಗ್‌ನೂ ದೊಡ್ಡ ಡಾಕ್ಟ್ರಗ ತೋರ್ಸ್‌ತಿನಿ. ಇಂಗಾರಿದನ ಮಳಿ ಬಂತಂದ್ರ ಬರೆ ರೊಕ್ಕದ ಮಾಲ್ ಆಕಿ ಅವ್ರ ಸಾಲ ಮುಟ್ಸತೀನಿ' ಅಂತಂದ. ಮತ್ತ್ಯ ತಂಗೀಗ್ನೂ ಈಗ್ ಐದ್ರಾಗಾದಂತಲ್ಲ ಅಕಿಗೇನ ಕುಬ್ಸಾ ಮಾಡ್ತಿರ್ಯಾ, ಏನ್ ರೊಟ್ಟಿ ಬುತ್ತಿ ಒಯ್ದ್ ಅಮಗೇ ಕರ್ಕಂಡ ಬರ್ತಿರ್ಯಾ?' ಅಂತ್ ಕೇಳಿದ್ಳು ಗಂಗವ್ವ. 'ಈಗೆಲ್ಲಿ ಕುಬ್ಸಾ ಮಾಡದ ಆಗ್ತದವಾ, ಅಂಗೇ ರೊಟ್ಟಿ ಬುತ್ತಿ ಕೊಟ್ಟ್ ಕರ್ಕಂಬರ್ಬೇಕಂತ ಮಾಡಿವಿ' ಅಂದ. 'ಆಯ್ತಪ ಅವ್ರ ಒಗಿ ಕೆಲ್ಸಕ ನಿಂತ ಭಾಳ್ಹೊತ್ತಾಯ್ತ್, ನೀ ಇಲ್ಲೇ ಈ ಗಿಡದ್ ತೆಳಗ ಉಸ್ಗಿನ್ಯಾಗ ಮಕ್ಕಾ ಗಾಡ್ಯಾಗ ರಾತ್ರಿಗಿ ನಿದ್ದಿ ಚೆಂದಾಗಿರಂಗಿಲ್ಲ, ನಾವ್ ಮತ್ತ್ಯಾ ಮದ್ಯಾಣಕ್ಕ ಬರ್ತೀವಂತ... ಇವತ್ತ ಕೆಲ್ಸಾನ ಸೊಲ್ಪೇ ಆದ' ಅಂತೇಳಿ ಕೆಲ್ಸದಕಡೀಗಿ ಪಾದ್ಳು ಗಂಗವ್ವ.

ಕೆಲ್ಸಾ ಬುಟ್ ಮ್ಯಾಲ ಜೋಪ್ಡಿ ಕಡೀಗಿ ಒಂಟಿದ್ದ ಗಂಗವ್ವ, ಗಿಡದ ತೆಳಗ ಮೋತಿ ಸಣ್ಣದ ಮಾಡ್ಕೆಂಡ ಕುಂತಿದ್ದ ತಮ್ಮನ ಬೆಲ್ಲ್ಯಾಕ ಸೀದಾ ಬಂದ ತೆಲಮ್ಯಾಲಿನ ಪುಟ್ಟಿ ತೆಳ್ಗ



ಇಟ್ಟ ಕೇಳ್ದಿಳು 'ಯಾಕಪಾ ನಿದ್ದಿ ಅತ್ತಿತಾ ಇಲ್ಲ' ಅಂತ. ಅದಕ್ಕ ಆಕಳಸ್ಗಂತ ಸಣ್ಣದನ್ಯಾಗ ಶಾಣಪ್ಪ 'ನಿದ್ದಿ ಎಲ್ಲಾ ಚೆಂದಾಗೆ ಅತ್ತಿತ್ತವಾ ಯಾಕೇನ್ ಕನಸೆ ಚಂದ ಬಿದ್ದಿಲ್ಲ ಅದಕ್ಕೇ ಎದ್ದ ಕುಂತ್ಯ, ಕನಸನ್ಯಾಗ ಅಪ್ಪ ಸತ್ತಂಗ ಆಗಿತ್ತವ..., ಅಗಲೊತ್ತಿನ್ಯಾಗ ಬಿದ್ದ ಕನಸಗೊಳ್ ಕರೇ ಆಗ್ತಾವಂತಾರ, ಯಾಕೇನ್ ನನ್ ಮನಸೇ ಚಂದಿಲ್ಲವ' ಅಂದ. 'ಅಂಗೇನಿಲ್ಲಪ ಅಪ್ಪನ್ ಸಾವಿನ್ ಪೀಡಾ ಒಳಾಯ್ತಾ, ಕನಸನ್ಯಾಗ ಸತ್ರ ಅವ್ರ ಸಾವ್ ದೂರ್ ಒಗ್ತಾದಂತ, ಕನಸನ್ಯಾಗ ಸತ್ರ ಪಾಡ. ಅದ್ರಾ, ಓಳ್ಗಿ ಉಂಡಂಗ, ಒಸ್ಬಟ್ಟಿ ಉಟ್ಗಂಡಂಗ ಕನಸನ್ಯಾಗ ಬರ್‌ಬಾರ್ದ. ಬಂದ್ರ ಚಲೊದಾಗಲ್ಲ, ಯಾರಿಗೆನ ಏನಾರೆ ಆಗ್ತದಂತರಾ...! ನೀ ಮಕ್ಕಮುಂದಗ ಅಪ್ಪನೇ ನೆನಸಿಗೆಂಡ ಮಕ್ಕಂಡಿದೇನ್ ಅದಕೇ ಕನಸನ್ಯಾಗ ಅಂಗ್ ಅನ್‌ಸ್ಯಾದ, ಇರ್ಲೇಳ್ ಎದ್ದ ಮಾರಿ ತೊಕ್ಕ ಇವತ್ತ ಮದ್ಯಾಣಲಿಂದ ನಮ್ ಕೆಲ್ಸಾನೂ ಇಲ್ಲಾ, ನಿಮ್ಮಾಮ ಕಂಡಾ ತರ್ಲಾಕ ಬಾಜಾರಕ್ಕ ಪೊಗ್ಯಾನ ಈಗ ಬರ್ತಾನ್ ನಡೀ...' ಅಂತಂದ್ಳು ಗಂಗವ್ವ.

ಚೆಂಜಿಕಡೀಗಿ ಜೋಪ್ಡಿ ಸಮೀಪದಾಗಿದ್ದ ಎಸ್‌ಟಿಡಿಲಿಂದ ಊರಿಗೆ ಶಾಣಪ್ಪ ತನ್‌ದೋಸ್ತ ದೇವಪ್ಪನ ಮೊಬಲ್‌ಕ ಫೋನ್ ಹಚ್ಚಿ 'ನಾ ಶಾಣೂ ಈನೋ ದೇವಪ್ಪ, ಬೊಂಬೈಲಿಂದ ಮಾತಾಡ್ಲಕತ್ತೀನಿ ಮೊಬಲ ಒಯ್ದ್ ಸೊಲ್ಪ್ ನಮ್ಮನಿಗಿ ಕೊಡಪ' ಎಂದ್ಹೇಳಿ. ಅವ್ವನಗುಡ

ಮಾತಾಡಕತ್ತಿದ 'ಗೇ ಯವಾ ನಾ ಚೆಂದ್ಹೋಗಿ ಮುಟ್ಟನಿಗೇ, ನೀ ಏನ್ ಚಿಂತಿ ಮಾಡ್‌ಬ್ಯಾಡ. ಅಪ್ಪಗೆಂಗಾದ ಅರಾಮಾನಿಲ್ಲ? ಎತ್ಗೋಳಿಗಿ ಯಾಳ್ಯಾಳ್ಯಕ ಮೇವ್ ಹಾಕಿ, ನೀರ್ ಕುಡಸ್ರ, ನಾ ಬರಾ ಮುಂದಾಗ ಆ ಕಟಗರ ಶಬ್ಬೀರ್‌ಗ ಸೊಪ್ಪಿ ತರಾಣ ಒಂದ್ ಕಟ್ಟ್ ಸೊಪ್ಪಿ ಕೊಡಂತ ಹೇಳಿನ್‌ನೋಡ್ರಿ ಇಸ್ಗರ್ರಿ. ಇಗಾ ಅಕ್ಕ ಮಾತಾಡ್ತಾಳಂತ ನೋಡಗೆ ಮಾತಾಡ...' ಅಂದ. 'ಅರಾಮೀರೇನ್ಗೆ ಯವ್ವಾ, ನಾವ್ ಅರಾಮ ಈವಿ, ಅಪ್ಪಗೆಂಗಾದ ಅತಗ ಧೈರ್ಯ ಬುಡಬ್ಯಾಡಂತ ಏಳ್ ಏನಾಗಂಗ್ಲ, ನಾವ್ ದೀಪಳಿಗಿ ಬಂದ ಮಾತಾಡಸ್ಗೆಂಡ ಬರ್ತೀವಂತಾ. ಈಗ ಅಪ್ಪಾ ಮನ್ಯಾಗಿಲ್ಲೇನ್ ? ಎಲ್ಲಿಗ್ಹೊರ್ಯಾಕ್ ಓಗ್ಯಾನೇನ್ ? ಆಂ ಅಂಗಾದ್ರ ಮುದಕವ್‌ಗ ಕೊಡ. 'ಏ ಮುದಕವ್ವ ನೀ ದಿವ್ಸ ಸಾಲಿಗಿ ಓಗ್ಲಾಕತ್ತಿದಿಲ್ಲ? ಆಯಿಗಿ ಕೈ ಬಾಯನ್ ಮಾತ್ ಕೇಳ್, ನಾವ್ ದೀಪಳಿಗಿ ಬಂದಾಗ ಕರ್ಕೊಂಡ ಬರ್ತೀವಂತ...' ಅಂತ ಗಂಗವ್ವ ಪೋನಲ್ಲಿ ಮಾತಾಡಿದ್ಳು.

ಜೋಪ್ಡಿಗಿ ವಳ್ಳಿ ಬಂದ ಲಚಮಣ್ಣ ಒಂದೆರ್ಡ್ ಸರಾಯಿ ಪಾಕಿಟಗಳ್ನ ತಂದ್ ಕುಡ್ಲ್ಯಾಕ್ ಕುಂತದ್ದ ನೋಡಿ ಶಾಣಪ್ಪ 'ಇಲ್ಲ ಮಾಮ ಊರ್ ಬುಟ್ಟ ದುಡ್ಕಂಡ್ ತಿಲ್ಲಾಕಂತ ಇಸ್ಟ ದೂರಾ ಬಂದೀರಿ ಇಲ್ಲೀನ ಕುಡೇದಂದ್ರೆಂಗ...?' ಅಂತಂದಾಗ 'ನಾ ಏನ್ ಕುಡ್ಬೇಕಂತ ಕುಡೆಂಗಿಲ್ಲಪ... ಮುಂಜಾನಿಂದ ಚೆಂಜಿತನಕ ಸಿಮ್ಟ-ಕಂಕ್ರ ಕಲ್ಸಿ ಕಲ್ಸಿ ತುಂಬಿ ತುಂಬಿ ಮೈದಣಿಕಿ ಆಗಿರ್ತದ, ಕುಡ್ಲಿಲ್ಲಂದ್ರ ರಾತ್ರಿಗಿ ನಿದ್ದೀನೆ ಬರಂಗಿಲ್ಲಂತ ಸುಮ್ನ ಕುಡ್ತೀನಿಪಾ. ನಾ ದಿನಾ ಕುಡೆಂಗಿಲ್ಲೋ ಮಾರಾಯಾ ಯಾವಾಗನಾ ಮೈದಣ್ಕಿ ಜಾಸ್ತಿ ಆದಾಗ, ಏನಾನ ಕಂಡಾಗಿಂಡಾ ತಂದಾಗಷ್ಟೇ ಕುಡ್ತೀನಿ...' ಅನ್‌ತಾ ಬಟ್ಟಲಾಗಿದ್ದ ಕಂಡದ ಚೂರ್ಗಳ್ನ ಬಾಯಾಗಿಟ್ಕೊಂಡ.

ಮರ್ದಿನ ಮುಂಜಾನೆದ್ದ ಶಾಣಪ್ಪ ಅಕ್ಕಾ-ಮಾಮರ ಗುಡಾ ಕೆಲ್ಸಕ್ಕ ವಾದ್. ಅಲ್ಲಿ ಗಂಗವ್ವಗ ಒಬ್ಬಾಕಿ ಕೇಳಿದ್ಳು 'ಅತ ನಿಮ್ ತಮ್ಮಂತಲ್ವ ಈ ಕೆಲ್ಸ ಮಾಡಿ ಅತಗ ರಾಟ್ಯಾದ ಇಲ್ಲಾ...! ಪಾಪ ಒಂದ್ ನಾಕ ದಿನ ಐರಾಣಾಗ್ತಾನವ' ಅಂತ. 'ಔದವ ಅತಗ ಇಂತ ಕೆಲ್ಸ ಮಾಡಿ ರಾಟಿಲ್ಲ ಊರಾಗ ಬರೇ ಒಕ್ಲತನನೇ ಮಾಡ್ಯಾನ, ಏನ್ ಮಾಡ್ಬೇಕ್ ಪಾಲಿಗಿ ಬಂದದ್ದ ಪಂಚಾಮ್ರತ ಅನಬೇಕಲ್ವ... ನಾಕ್ ದಿಂದಾಗ ತಾನೇ ರಾಟೀ ಬುಳ್ತಾದ' ಅಂತಂದ್ಳು ಗಂಗವ್ವ. 'ಏ ತಮ್ಮಾ ಶಾಣೂ ಆವ್ ಪೆಂವ್‌ಟಗಿ ಎಬ್ಬಾಗ್ ಸವ್‌ಕಾಸ್ ನೋಡೆಬ್ಬಪೋ ಮನ್ನೇ ಇಂಗೆ ಅಡಾವುಡಿ ಮಾಡೆಬ್ಲಕ್ಕೋಗಿ ಒಬ್ಬಕಿ ಕಾಲ್ಜಾರಿ ಮ್ಯಾಲಿಂದ ಬಿದ್ಳ್, ಇನಾ ದೆವ್ರ್ ದೊಡ್ಡಂವಾ ನೆಲ್ದಮ್ಯಾಲ್ ಬುಳ್ಳಿಲ್ಲ, ನೀರಿನ ಔಜ್‌ನ್ಯಾಗ್ ಬಿದ್ಳಂತ್ ಉಳ್ದಳ್, ಅದಕೆ ನಿನಗ ಮೊದ್ಲೆ ರಾಟ ಇಲ್ಲಪೋ ಸೊಲ್ಪ ತಡಾ ಆದ್ರ ಆಗ್ಲಾಕ ನೀ ಸವ್‌ಕಾಸ್ ತಿರ್‌ಗ್ಯಾಡ್' ಅಂತ ಸಿಮಿಟಿನ ಚೀಲ ವೊತ್ಕೊಂಡ್ ಮ್ಯಾಲೇರ್ತಿದ್ದ ತಮ್ಮ ಶಾಣಪ್ಪಗ ನೋಡಿ ಏಳಿದ್ಳು ಗಂಗವ್ವ.

ಇಂಗೇ ಒಂದೆರ್ಡ್ ತಿಂಗ್ಳಾಗಿರ್ಬೇಕು ಒಂದಿನ ಮದ್ಯಾಣ ಕಡೀಗಿ ಲಚಮಣ್ಣನ ಮೊಬಲಕ್ಕ 'ಊರಾಗ ಅವರಪ್ಪಗ ಭಾಳ ಅರಾಮಿಲ್ಲ ಶಾಣಪ್ಪಗ ನಾಳಿಗೇ ಜರೂರೂ ಊರಿಗಿ ಬರ್ಬೇಕಂತ' ಊರ್ಲಿಂದ ಫೋನ್ ಬಂತು. ಈ ಸುದ್ದಿ ಕೇಳ್ದ ಶಾಣೂನ ಜಿವಾ ಝಲ್ಲಂತ. ಅವತ್ತೇ ಅಗಿಂದಾಗೆ ಅಡಸಲ-ಬಡ್ಸಲ ತಯಾರಾಗಿ ಊರಿಗಿ ವೊಗ್ಲಾಕ ನಿಂತ. ಕೆಲ್ಸ ಬುಟ್ ಬಂದ ಅಕ್ಕ ಗಂಗವ್ವ ಕಣ್ಣಾಗ ನೀರ ತೆಗ್ದ್ 'ನೀ ಊರಿಗ್ಹೋಗಣ ಮೊದ್ಲ ಫೋನ್ ಮಾಡಪ, ಅಪ್ಪಗ ಭಾಳ ಅರಾಮಿರ್ಲಿಲ್ಲಂದ್ರ ಏಳ್ ನಾವ್‌ನ್ ಸೇಟ್ರಬೆಲ್ಲಿ ರೊಕ್ಕ ಇಸ್ಗಂಡ್ ಬರ್ತಿವೆಂತ, ನೀ ಊರಿಗಿ ಮುಟ್ಟಾಣ ಮೊದ್ಲ ಅಪ್ಪಗ ಕಲ್ಬುರ್ಗಿಗಿ ಕರ್ಕೊಂಡ್ಹೋಗಿ ಯಾರನಾ ಶಾಣ್ಯಾ ಡಾಕಟರ ಬೆಲ್ಲಿ ತೋರ್ಸಿ ಅರಾಮ್ ಮಾಡ್ಸಪ್ಪ, ಸಾಲ ಆದ್ರ ಆಗಲ್ದಾಕ ನೀ ಇಂದಾ ಮುಂದಾ ನೋಡ್ 'ಬ್ಯಾಡಾ' ಅಂತ ತಮ್ಮನಿಗೆ ಧೈರ್ಯ ಏಳಿದ್ಳು. ದಾದರ್ ಟೇಶನ್‌ತನಕ ಬಂದಿದ್ದ ಲಚಮಣ್ಣ ತನ್ಬೆಲ್ಲಿದ್ದವ್ ಇನಾ ಈಸ್ ರೊಕ್ಕ ಕೊಟ್ಟ್ ಶಾಣಪ್ಪಗ ಗಾಡಿಗಿ ಕುಂದ್ರಿಸಿ ವಾದ.

ಮರ್‌ದಿನ ಮುಂಜಾನಿ ಗಾಡಿ ನಾಲ್ವಾರ್ ಟೇಶನ್‌ದಾಗ ನಿಂತಾಗ, ಯಾತಗಿರಿಗಿ ವೋಗಿ ಇಳ್ಯ್ಯಾಕ ತಡಾ ಆಗ್ತಾದಂತ್ಹೇಳಿ ಅಲ್ಲೇ ಇಳ್ದ ಶಾಣಪ್ಪ. ಸಂತಿ(ಸನ್ನತಿ) ಬಸ್ ಏರಿದ, ಸಂತಿ ವೊಳಿ ದಂಡಿಗಿ ಕಿಸ್ತಿ ಸಲ್ಯಾಕ ಕಾಯ್ಕಂಡ ಕುಂತಾಗ ಅಲ್ಲಿದ್ದ ಸಿರ್ವಾಳದ ಮಂದಿ 'ಈಗ್ ಬಂದೇನ್‌ಪಾ ಶಾಣಪ್ಪ, ಮನ್ಯಾಗ ಮುದ್ಕಗೆ ಭಾಳ ಅರಾಮಿಲ್ಲಂತ, ಸೊಲ್ಪ ಎಲ್ಲ್ಯನ ಶ್ಯಾಣೇರ್ ಬೆಲ್ಲಿ ಕರ್ಕೊಂಡ್ಹೋಗಿ ತೋರ್ಸಪ' ಅಂತಂದಾಗ ಶಾಣಪ್ಪಗ ಮತ್ತಿಷ್ಟ ಅಂಜ್ಕಿ ಬಂತ್.

ವೊಳಿ ದಾಟಿ ದಡದಡ ನಡ್ಕೊಂತ ಒಂಟಿದ್ದ ಶಾಣಪ್ಪನ್ನ ದೂರಲಿಂದೆ ಕೂನಾ ಇಡ್ದ್, ಸವ್ಕಾರ್ ತ್ವಾಟದಾಗ ಗಳ್ಯಾ ಎಳಿತಿದ್ದ 'ಅಣ್ಮೆತ್ತು' 'ಅಂಬಾ' ಅಂತ ಒದಿರ್ತು. ಎತ್ತಿನ ನೋಡಿದ ಶಾಣಪ್ಪನ ವೊಟ್ಟ್ಯಾಗ ಬುಗಲ್ ಬುಗಲ್ ಅನ್ಲಕತ್ತೀತ್. ಇಂದಕ್ ಒಳ್ಳಿ ಒಳ್ಳಿ ಎತ್ತಿನ ನೋಡ್ಕೆಂತ ಊರ್ ಸನ್ಯಾಕ್ ವಾದ್ ಮ್ಯಾಲ, ಪೂಲಿನ ತೆಳಗ ನಾಯಿಗಳ್ ಕಡ್ದಾಡದ್ ನೋಡಿದ...! ಅಲ್ಲಿ ಎತ್ತಿನ ಎಡ್ಡ ಕೋಡಗಳು ಕಾಣಸ್‌ತಿದ್ವು, ಅವು ತನ್ನ 'ಶರಬೆತ್ತಿನ' ಕೋಡುಗಳಂತ ತಿಳ್ಕೊಲ್ಲಾಕ ಶಾಣಪ್ಪಗ ಭಾಳ ಒತ್ತಿಡಿಲಿಲ್ಲ. ಈಗಂತ್ರ ಕಾಲ್ತೆಳಗಿನ ನೆಲ ಬಾಯ್‌ಬುಟ್ಟಂಗನ್ಸಿತಗ. ಅಂಗೇ ಒಂದೇ ಉಸರ್‌ನ್ಯಾಗ ತನ್ ಮನಿ ಬೆಲ್ಲಿ ಬಂದ ನಿಂತ...! ಮನಿಮುಂದ್ಲ ಕಟ್ಟೀಗಿ ಬರ್ಕಂತ ಕುಂತಿದ್ದ ಮುದಕವ್ವ ಒಳ್‌ಗೋಗಿ ಆಯಿಗಿ ಮಾಮ ಬಂದಾನಂತ್ಹೇಳಿ ನೀರ ತಂದ್ ಕೊಟ್ಳ್.

ಮಗ ಬಂದದ್ದ ಗೊತ್ತಾಗಿ ಅಪ್ಪ ಮನ್ಯಾಗ ವರ್ಸಿನ ಮ್ಯಾಲ ಎದ್ದ ಕುಂತಾಗ ಕೆಮ್ಮ್ ಜಾಸ್ತಿ ಆಯ್ತು. ಮನ್ಯಾಕ್ ವಾದ ಶಾಣಪ್ಪ ಅಪ್ಪನ ಬೆಲ್ಲಿ ಕುಂತ ದಳದಳ ಕಣ್ಣಿನ ನೀರ್ ಸುರ್ಸಿ ಅಳ್ಯಾಕ ಸುರು ಮಾಡ್ದ. 'ಯಾಕಳ್ತಿ ಯಣ್ಮಕ್ಕಳತ್ತಂಗ... ಎಷ್ಟ ದಿನ ಅಂತ ಕಾಡಂಗಾದ ಮಗಂದ್ ಒಂದಿನ ತಾನೇ ಓಳಾಗ್ತದ, ಅಕ್ಕ ಮಾಮ ಪಾಡಾರ ಎಂಗ ?' ಅಂತ ಕೇಳಿದ ಕೆಮ್ಮಿಕೊಂತ. ತೆಲಿ ಆಡಿಸಿದ ಶಾಣಪ್ಪ. 'ಬರಾಗ ನಿನಗುಡ ಅಕ್ಕನ ಕರ್ಕಂಡ ಬಂದಿಲ್ಲ ನೋಡಪ, ಯಾಕೇನ್ ಅಕಿಮ್ಯಾಲ ಕ್ಯಾಲಾಗಿತ್ತ' ಅಂತಂದಾಗ ಕೆಮ್ಮು ಇನ ಸೊಲ್ಪ ಜಾಸ್ತಿನೇ ಆಯ್ತು. 'ನಡಿ ಶಾಪೂರ್‌ಕನ ಹೋಗಿ ಬರಮ್ರಿ ದವ್‌ಕಾನಿಗಿ' ಅಂತಂದ ಶಾಣಪ್ಪ. 'ಏ ಬ್ಯಾಡಪಾ ನನಗೇನಾಗ್ಯದ ಸೊಲ್ಪ ಕೆಮ್ಮ ಜಾಸ್ತ್ಯಾಗ್ಯದ, ತಾನೆ ಅರಾಮಾತ್ತದ..., ನಾಯೇನ್ ಸಾಯಂಗಿಲ್ಲ, ಇವತ್ತಾ ಆಯ್ತಾರಾದ ಡಾಗಟರ್‌ನು ಇರಂಗಿಲ್ಲ ನಾಳಿಗ್ಗಿನಾ ವಾದರಾಯ್ತು, ನೀ ಮೈತೊಳ್ಕಂಡ ಉಣು' ಅಂತಂದ ಅಪ್ಪ.

ವೊರಗ ಕಟ್ಟಿ ಮ್ಯಾಲ ಬಂದ ಕುಂತ ಶಾಣಪ್ಪಗ ನೋಡಿದ ಮುದಕವ್ವ 'ಮಾಮಾ ನಮ್ ಎತ್ಗೋಳಿಗಿಲ್ಲಾ ಆ ಸವ್‌ಕಾರನ ಆಳ್‌ಮಕ್ಳ ಬಂದ್ ಇಡ್ಕೊಂಡ್ ವೋಗ್ಯಾರ್, ಮುತ್ಯಾ ಎಷ್ಟ ಬ್ಯಾಡಂದ್ರನೂ ಬುಡ್ಲಿಲ್ಲ, ಮುತ್ಯಗ ದಬ್ಬಿಗೇಸಿ ಬಿಚ್ಗೆಂಡ್ಹೋಗ್ಯಾರ, ಅವತ್ ಮುತ್ಯಾ ಮನ್ಯಾಗ ಕುಂತ ಆಳ್ಲಾಕತ್ತಿದ್ದ. ಅಂಗೆ ಆ ದೊಡ್ಡೆತ್ತಿತ್ತಲ್ಲ 'ಶರಬಾ' ಅದ್ಕ ಗಳ್ಯಾ ಎಳೆವಲ್ದಂತ ಅವ್ರು ಕಟ್ಗರಿಗಿ ಕೊಟ್ಟಿದ್ರಂತ, ಅದಕ್ಕ ತಂದ್, ನಾವ್ ಬಟ್ಟಿ ಒಗ್ತಿವಲ್ಲಾ ಅಳ್ದಾಗ ಅಲ್ಲೇ ಪೂಲಿನ ತೆಳಗ ಕೊಯ್ದಾರ...! ಅಂತ ಏಳಿದ್ಳು. ಈ ಮಾತ್ಗಳನ್ ಕೇಳಿ ಕಪಾಳಕ್ಕ ಬಂದಿದ್ದ ಕಣ್ಣನ್ ನೀರ್ ವರ್ಸಿಗೆಂತ ಅವ್ವ ಬಾಗಲದಾಗ ನಿಂತ 'ಇವತ್ತಾ ವೋಗಿ ತಂಗಿಗೆನ ಕರ್ಕಂಡ ಬಾರ್‌ಪ, ನಿನ್ನ್ಯಾ ನಿಮ್ಮಪ್ಪ ಯಾಕೇನ್ ಅಕಿನ್ ಮಾರಿ ನೋಡಂಗಾಗೆದ ಅಂತಂದಿದ್ದ...!' ಅಂದ್ಳು.

ಅಪ್ಪಗ ರಾತ್ರಿಗಿ ಕೆಮ್ಮು ಎಚ್ಚಿಗಾದದ್ದ ನೋಡಿ ಶಾಣಪ್ಪ ಊರಾಗಿನ ಡಾಗಟರ್‌ಗ ಕರ್ಕೊಂಡ್ ಬಂದ್ ಚೂಜಿ ಮಾಡ್ಸಿ ಅತನ್ ಮೆಯ್‌ಕೈಗಿ ಜಂಡುಬಾಮ್ ಅಚ್ಚಿ ವರ್ಸಿದ. ರಾತ್ರಿ ಭಾಳ ಆದದ್ದ ನೋಡಿ. 'ಎಷ್ಟತ್ತಂತ ಕುಂದ್ರತೆಪ ನೀ ಮಕ್ಕ, ಡಾಗಟರ್ ಬಂದು ಚೂಜಿ ಮಾಡಿ ವಾದ್ ಮ್ಯಾಲ, ತಟಗ ಅರಾಮನ್ಸಲಕತ್ತಾದ ನಾನ್ ಮಕ್ಕಂತ್ನಿ' ಅಂತಂದ ಕೆಮ್ಕೆಂತ. 'ಗೇ ಯವ್ವಾ ಅಪ್ಪನ ಬೆಲ್ಲಿದ ದೀಪಾ ಯಾಕಾ ಸಣ್ಣ ಆಗ್ಯದ ನೋಡ್ಗೆ' ಅಂತ ಶಾಣಪ್ಪ ಅವರವ್ವಗಂದಾಗ 'ಅದರಾಗಿನ್ ಎಣ್ಣಿ ಸನ್ಯಾ ಮಾಡ್ಯದೇನಂತ್ನೆಪ' ಅಂದ್ಳು ಮಕ್ಕಂಡಲ್ಲಿಂದ್ಲೆ. ಅಪ್ಪ ಕೆಮ್ಮದು ಸೊಲ್ಪ ಕಮ್ಮಿ ಮಾಡಿದ ಮ್ಯಾಗ ಶಾಣಪ್ಪ ಮನಿ ಮುಂದಲ ಕಟ್ಟೀಗಿ ಅಂಗೇ ಅಡ್ಡಾದ... ಎಕಡ್ಲಿಂದ ಬಂತಾ ಏನಾ ನಿದ್ದಿ ತಡನಿಲ್ದೇ ಕಣ್ ಮುಚ್ಚಿದ್ವು.

ಬೆಳ್ಚುಕ್ಕಿ ಒಂಡ್ಲಾಕತ್ತಿರ್ಬೇಕು ಶಾಣಪ್ಪ ಒಮ್ಮಿಂದೊಮ್ಲೆ ಗಪ್ಪನ ಎಚ್ರಾಗಿ ಎದ್ದಕುಂತ್ ಮ್ಯಾಲ ನೋಡಿದಾ. ಮುಗಲ್ ತುಂಬಾ ಗೊಡ್ಡ ಮಾಡಕ್ಕಿಟ್ಟಿತ್ತು. ಏನಾ ಕನಸ ಬಿದ್ದಂಗಾಗಿತ್ತು ಅದನ್ನ ನೆನಸ್ಗೆಂಡೆ ಎದ್ಕಂತಿದ್ದ, ಆ ಕನಸನ್ಯಾಗ ಜಗ್ಗ್ಯ ಮಳಿ ಬಂದ ವೊಲಾ ಚೆಂದ್ ಬೆಳ್ದಿತ್ತು..., ಮನ್ಯಾಗ ಏನಾ ಕಾರಣಾ ಮಾಡಿದಂಗಾ..., ಅಪ್ಪ-ಅವ್ವಗ ವಸಾ ಬಟ್ಟಿ ಉಡ್ಸಿದಂಗಾ..., ಬಂದ ಮಂದಿಗೆಲ್ಲ ಓಳ್ಗಿ ಮಾಡಿ ಉಣ್ಸಿದಂಗಾಗಿತ್ತ...! ಶಾಣಪ್ಪ ಆ ಕನಸಿ ಬಗ್ಗೇನೇ ತೆಲಿಕೆಡಿಸಿಕೊಂಡು, ಇಷ್ಟದಿವ್ಸ ಇಲ್ದ ಇವತ್ಯಾಕ ಇಂಗ ಕನಸ ಬಿತ್ತ ಅಂತ ಇಚಾರ ಮಾಡ್ಕೆಂತ ಕುಂತಿದ್ದ. ಅವಗೇ ವರಗ್ ಸಂದ್ಯಾಗ ಬುಡ್ ಬುಡ್ಕ್ಯಾರು ಊರ್ಹಾಡ್ಲಾಕ ಬಂದದ್ದ ಸಪಳ ಕೇಳ್ಸಿ, ತಮ್ ಮನಿಮುಂದ ಅವ್ರ ಏನ್ ನುಡ್ಯಾರಂತ ಕೇಳ್‌ಸ್ಗಬೇಕಂತ ಶಾಣಪ್ಪ ಅಕಡಿಗಿ ಕಿವಿಕೊಟ್ಟ, ಅವ್ರು 'ವಸಾ...ऽ ಒಲಿ...ऽ ಊಡ್ತಾದಿಲ್ಲೀ...ऽ ವಸಾ...ऽ ಗಡ್ಗಿ...ऽ ಬಳಸ್ತಾರಿಲ್ಲಿ...ऽ' ಅಂತ ಆಡ್ಕೆಂತ ವಾದ್ರು. ಇಂಗಂದ್ರೇನಂತ ಶಾಣಪ್ಪ ತನಗ ತಾನೇ ಅರ್ತ ಆಕ್ಕೆಂತ ಕುಂತಿದ್ದ. ಯಕಡ್ಯಾ ದೂರ್‌ದಾಗ ಗೂಗಿ ಒದರಿದ್ದ ಕೇಳಿಸ್ತ. ಬೆಳಗಾನ ಕೆಮ್ಕೆಂತ ಮಕ್ಕಾತ ಅಪ್ಪ ಇವತ್ಯಾಕ ಕೆಮ್ಮನೇವಲ್ಲನಲ್ಲಾ...? ಅನ್ಕಂಡ ಶಾಣಪ್ಪ ಓಗಿ ನೋಡಿದ್ರಾಯ್ತಂತ ಎದ್ದನಿಂದ. 'ಶ್ಯಾ...ऽ ಣೂ...ऽ' ಅಂತ್ ಸವ್‌ಕಾಸ್ ಕರ್ದಂಗಾಯ್ತ, ಯಾಕಾ ಅಪ್ಪ ಕರ್ಲೆಕತ್ಯಾನಂತೇಳಿ ಶಾಣಪ್ಪ ಒಳಗ್ಹೋಗಿ ಎಡಗೈಲಿ ದೀಪ ತೊಗದ್ಕ...! ಸ...ಣ್ಣ...ಗ ಉರಿತಿದ್ದ ದೀಪಾ ಪೂರಾ ಆರಿ ಒಯ್ತ...!

ಡಾ|| ಮೋನಪ್ಪ ಎಸ್. ಶಿರವಾಳ (ಅನಘ)
ಶಿರವಾಳ ಮುಖ್ಯ ಅಂಚೆ, ಶಹಾಪೂರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ - ೫೮೫ ೨೨೩

# ಕ್ಷಮೆ ಪರಿಹಾರವಲ್ಲ



## ರೋಸಿ...

ಅವಳು...
ಮಾರನೇ ಹಗಲ ಒಲೆಯುರಿಸಲು
ಪ್ರತಿ ರಾತ್ರಿಯೂ
ದೀಪವಾರಿಸುವಾಕೆ

ದಿನಾಂಕ ಮುಗಿದ
ಹಾಲಿನ ಕಾರ್ಡಿನಂತೆ
ಹಣವಾದ ಅವಳ ಮೈ
ವ್ರಣವಾದ ನಂತರ...

ಅವಳ ಉಡುಪು ಮಾತ್ರ
ಅವಳನ್ನು
ಸ್ಪರ್ಶಿಸಲು ಸಮ್ಮತಿಸಿದ
ಒಂದು ಹೊತ್ತಲಿ –

ಅವಳ ಬಾಳ
ಅಸ್ತಮಾನದಿ...
ಅವಳ ಕಣ್ಣೀರೊಂದಿಗೆ
ಕರ್ತನ ಜ್ಞಾಪಕ
ಜಿನುಗಿತು

''ಎಸಗಿದ ಪಾಪಕ್ಕೆ
ನಾನೂ
ಶಿಲುಬೆಯ ಹೊರಬಹುದೆ ?''

ಪಾಪ
ತನ್ನ ಸ್ವಂತ ಬೆನ್ನಮೂಳೆಯನ್ನೇ
ಹೊರಲಾರದವಳು
ಶಿಲುಬೆಯನ್ನೂ
ಸೇರಿಸಿ ಹೇಗೆ ಹೊರಬಲ್ಲಳು ?

ಮಲಗುವ ಸಂತೆಯಲಿ...
ರಾತ್ರಿ
ಹಗಲೂ
ನಲುಗಿ ನಲುಗಿ
ಇನ್ನು ಮೇಲೆ
ಚಲಾವಣೆಯಾಗದ ನಂತರ...
ಆ ನಾಣ್ಯ
ಕೊನೆಗೆ ಬಂತು

ಕರ್ತನ ಖಜಾನೆಗೆ...
ಕರ್ತನು
ಅವಳಿಗಾಗಿ
ಮತ್ತೊಮ್ಮೆ ಪುನರುಜ್ಜೀವಿಸಿದ

''ಕರ್ತನೇ
ಈ
ಬಾಡಿಗೆ ಬಾಳು
ಪ್ರಾಪ್ತವೆಂದು ತಿಳಿದಿದ್ದರೆ
ನನ್ನ ತಾಯ
ಗರ್ಭದಲ್ಲೇ ನಾ
ಆತ್ಮಹತ್ಯೆಗೈದುಕೊಳ್ಳುತ್ತಿದ್ದೆ
ನನ್ನ ರಕ್ಷಿಸುವಿರಾ ?''

''ಅಳಬೇಡ ಮಗಳೆ
ನಿನ್ನ
ಕಣ್ಣೀರ ಒರಸಲು ಬಂದರೆ
ನನ್ನೀ
ಬೆರಳೂ ಅತ್ತುಬಿಡುತ್ತೆ
''ನಿನ್ನೀ ಸ್ಥಿತಿಗೆ ಕಾರಣೀಭೂತರು ಯಾರಮ್ಮಾ ?''

ಕಣ್ಣೀರ ಕಾಸುಗಳ
ಕರವಸ್ತ್ರದಿ
ಶೇಖರಿಸುತ್ತಲೇ
ತುಸು ತಲೆಯೆತ್ತಿದಳು

''ಮೂವರು ಕರ್ತನೇ
ಮೂವರು''

''ಯಾರ್‍ಯಾರು ಮಗಳೇ ?
ಯಾರ್‍ಯಾರು ?''

''ಮರಣ ಯಾತ್ರೆಗೆ
ತಾಲೀಮು ನಡೆಸುತ್ತಿದ್ದ ನನ್ನ ಮಾತೆಯೂ''.

''ಬಾಳಿನ ಯಾತ್ರೆಗೆ
ತಾಲೀಮು ನಡೆಸುತ್ತಿದ್ದ
ನನ್ನ ಮಗನೂ''...

''ಮೂರನೆಯವರು
ಯಾರು ಮಗಳೇ ?''

ಅವಳ ಮುಂಜಾನೆಯ ಹಾಸುಗೆಯಂತೆ
ಅವಳ ಹಣೆಯಲಿ
ಸಾವಿರ ಸುಕ್ಕುಗಳು

ಅವಳ
ತೋರ್ಬೆರಳ ಕೋವಿ
ಕರ್ತನನ್ನು ಗುರಿಯಿಟ್ಟಿತು

''ನೀನೇ ಕರ್ತ
ನೀನೇ
ಪಾಪಿಗಳ ರಕ್ಷಿಸುವುದಾಗಿ
ಪಾಪಕ್ಕೆ ನೀನೇ ಅಲ್ಲವೆ
ಅನುಮೋದನೆ ನೀಡಿದೆ ?''

ಕರ್ತನು
ಮತ್ತೊಮ್ಮೆ
ಪುನರುಜ್ಜೀವಿಸದಂತೆ
ಕಾಲವಾದನು

'ಧರ್ಮ'ವೆಂಬುದು
'ರೋಸಿ'ಯಂತಹವರಿಗೆ
ಕ್ಷಮೆಯನ್ನು ತಾನೇ ಒದಗಿಸುತ್ತಿದೆ.
ಹೊಸಬಾಳನ್ನು ...?


ತಮಿಳು ಮೂಲ : **ಡಾ|| ವೈರಮುತ್ತು**
ಅನುವಾದ : **ಮಲರ್ ವಿಳಿ ಕೆ.**
ಪ್ರೆಸಿಡೆನ್ಸಿ ಕಾಲೇಜು, ಹೆಬ್ಬಾಳ

# ಜೇಬು

ವೈ. ಎಸ್. ಗುಂಡೂರಾವ್

**ಮಾ**ರ್ಚ್-ಏಪ್ರಿಲ್ ಬಂದಿತೆಂದರೆ ಸಾಕು, ಎಲ್ಲರೂ ತಮ್ಮ ತಮ್ಮ ಜೇಬಿನ ಬಗ್ಗೆ ಯೋಚನೆ ಮಾಡಲಾರಂಭಿಸುತ್ತಾರೆ. ಆಯ-ವ್ಯಯ ಮಂಡನೆಯಾಗುತ್ತಿದ್ದಂತೆ ಪತ್ರಿಕೆಗಳಲ್ಲಿ ಪ್ರಕಟವಾಗುವ ಪ್ರತಿಕ್ರಿಯೆಗಳಲ್ಲಿ 'ಬಡವನ ಜೇಬಿಗೆ ಸರಕಾರದ ಕತ್ತರಿ' ಎಂದೋ ಇಲ್ಲವೇ 'ಮಧ್ಯಮ ವರ್ಗದವರ ಜೇಬಿಗೆ ದೊಡ್ಡ ಕತ್ತರಿ' ಎಂದೋ ಬರೆದು ಪ್ರಕಟವಾಗುವ ಸುದ್ದಿಯನ್ನು ನೀವೆಲ್ಲ ಓದಿರಬಹುದು. ಪ್ರತಿಯೊಬ್ಬರ ಸ್ಥಾನಮಾನಗಳನ್ನು ಅಳೆಯುವುದು ಅವರವರ ಜೇಬಿನ ಗಾತ್ರದಿಂದಲೇ. ಹೀಗೆಂದಾಕ್ಷಣ ಸದಾ ಜೇಬಿನಲ್ಲಿ ಹಣವನ್ನು ತುಂಬಿಟ್ಟುಕೊಂಡು, ಜೇಬನ್ನು ಉಬ್ಬಿಸಿಕೊಂಡು ಎಲ್ಲೆಡೆ ಓಡಾಡಬೇಕೆಂದೇನಲ್ಲ. ಬ್ಯಾಂಕಿನಲ್ಲಿಟ್ಟಿದ್ದರೂ ಅದು ಆಪತ್ಕಾಲಕ್ಕೆ ಬೇಕೆಂದಾಗ ಸಿಗುವುದರಿಂದ ಜೇಬಿನಲ್ಲಿದ್ದಷ್ಟೇ ಗ್ಯಾರಂಟಿ. ಈಗಂತು ನೀವು ಬ್ಯಾಂಕಿನ ಕೆಲಸದ ವೇಳೆ, ಬ್ಯಾಂಕಿಗೆ ರಜಾ ಎಂದೇನೂ ಕೊರಗಬೇಕಿಲ್ಲ, ಎಟಿಎಂ ಕೌಂಟರ್‌ಗೆ ಹೋಗಿ, ಅರ್ಧರಾತ್ರಿಯಲ್ಲಿಯೂ ಹಣ ತರಬಹುದಾಗಿರುವುದರಿಂದ ಜೇಬಿನಲ್ಲಿದ್ದಷ್ಟೇ ಸಮಾಧಾನದಿಂದಿರಬಹುದು. ಆದ್ದರಿಂದ ಈಗ ಜೇಬಿನಲ್ಲಿರುವುದು ಹಣವಲ್ಲ– ಬರೇ ಕ್ರೆಡಿಟ್ ಕಾರ್ಡ್‌ಗಳೇ!

ಜೇಬು ಒಂದು ರೀತಿ ಷೋಕೇಸಿನಂತೆ. ನನ್ನೊಬ್ಬ ಸಂಬಂಧಿ ಇದ್ದಾನೆ. ಅವನು ಮೂರುಕಾಸು ಯಾರಿಗೂ ಕೊಡ, ಯಾರಿಂದಲೂ ತೆಗೆದುಕೊಳ್ಳ. ಆದರೂ ಐನೂರರ ಒಂದು ನೋಟನ್ನು ಎಲ್ಲರಿಗೂ ಕಾಣುವಂತೆ ಶರಟಿನ ಮೇಲಿನ ಜೇಬಿನಲ್ಲಿಟ್ಟು ತಿರುಗಾಡುತ್ತಿದ್ದ. ಬಹುಶಃ ಈ ರೀತಿ ನೋಟು ಕಾಣಲೆಂದೇ ತೆಳ್ಳಗಿನ ಶರಟನ್ನು ಹೊಲಿಸಿಕೊಳ್ಳುತ್ತಿದ್ದನೋ ಏನೋ! ಆದರೆ ಅವನಾಗಿ ಕೈಯಾರೆ ಯಾರಿಗೂ ಹತ್ತು ರೂಪಾಯಿ ತೆಗೆದುಕೊಟ್ಟದ್ದನ್ನು ಕಾಣೆ. ನಮ್ಮ ಸಂಬಂಧಿಕರಲ್ಲಿ ನಡೆಯುವ ಪ್ರತಿಯೊಂದು ಫಂಕ್ಷನ್ನಿಗೂ ತಪ್ಪದೆ ಹಾಜರಾಗುವ, ಐನೂರರ ನೋಟಿನ ಜೇಬಿನಿಂದ ''ಮಂಡ್ಯದ ಸಾಹುಕಾರ್ರು ಬಂದ್ರು'' ಎಂದೇ ಅವನ ಬೆನ್ನ ಹಿಂದೆ ಕಿಚಾಯಿಸುತ್ತಿದ್ದರು. ಇದಕ್ಕೆ ವ್ಯತಿರಿಕ್ತವೆಂದರೆ ಹಿಂದಿ ಸಿನಿಮಾದ ಒಂದು ಡೈಲಾಗ್ ಜ್ಞಾಪಕಕ್ಕೆ ಬರುತ್ತದೆ : ''ಹಮ್ ತೋ ಜಂಟಲ್‌ಮನ್ ಹೈ, ಲೇಕಿನ್ ಜೇಬ್ ತೋ ಖಾಲಿ ಹೈ''. ಇದು ಜಂಟಲ್‌ಮನ್ ಎನ್ನಿಸಿಕೊಂಡವರ ಶೂನ್ಯದಿಂದ ತುಂಬಿರುವ ಜೇಬಿನ ಚಿತ್ರಣ. ಇದೂ ಒಂದು ರೀತಿ.

ಜೇಬು ಮಕ್ಕಳ ಸಕಲ ವಸ್ತು ಸಂಗ್ರಹಣಾ ಉಗ್ರಾಣವೂ ಹೌದು. ಚಿಕ್ಕಂದಿನಿಂದಲೂ ನನ್ನ ಶರಟಿಗಾಗಲೀ, ಚಡ್ಡಿಗಾಗಲಿ ಎರಡೆರಡು ಜೇಬುಗಳಿರಲೇಬೇಕು. ಒಂದುಸಾರೆ ಗೌರಿಹಬ್ಬಕ್ಕೆಂದು ಹೊಲಿಸಿದ ಚೆಡ್ಡಿಗೆ ದರ್ಜಿ ಒಂದೇ ಜೇಬು ಹೊಲಿದುಬಿಟ್ಟಿದ್ದ. ಪ್ರತಿಸಾರೆಯೂ ಹೊಲಿದುಕೊಡುತ್ತಿದ್ದ ದರ್ಜಿಯ ಬಳಿ ವಿಪರೀತ ರಶ್ ಇದ್ದುದರಿಂದ ಮತ್ತೊಬ್ಬ ದರ್ಜಿಗೆ ಹೊಲಿಯಲು ಕೊಟ್ಟು, ಅವನಿಗೆ ನಮ್ಮ ಮನೆಯವರ ಮರ್ಜಿ ತಿಳಿಯದೆ ನನ್ನ ಚೆಡ್ಡಿಗೆ ಒಂದೇ ಜೇಬು ಇಟ್ಟಿದ್ದರಿಂದ, ಚಡ್ಡಿ ತಂದಕೂಡಲೇ ನೋಡಿದ ನನಗೆ ಆಘಾತವಾದಂತಾಗಿ ಅಮ್ಮನೊಡನೆ ''ಒಂದೇ ಜೇಬು ಇಟ್ಟಿದ್ದಾನೆ'' ಎಂದು ರಗಳೆ ತೆಗೆದೆ. ಅಮ್ಮನೂ ಹೇಳುವಷ್ಟು ಹೇಳಿದರೂ ನಾನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಅವರಿಗೇನು ಗೊತ್ತು ನನ್ನ ಕಷ್ಟ! ಸ್ಕೂಲಿನಿಂದ ಬಂದನಂತರ ಸಂಜೆ ಬೀದಿ ಬೀದಿ ಸುತ್ತಿ, ಇತರರಿಗಿಂತ ಹೆಚ್ಚು ಟಿಕ್ಕಿಗಳನ್ನು (ಸಿಗರೇಟು, ಬೆಂಕಿಪೆಟ್ಟಿಗೆಯ ಮೇಲೆ ಮುದ್ರಿಸಿರುವ ಚಿತ್ರಗಳಿರುವ ಭಾಗಗಳನ್ನು ಕತ್ತರಿಸಿ) ಶೇಖರಿಸಬೇಕೆಂಬ ನನ್ನ ಆಸೆಗೆ ತಣ್ಣೀರೆರೆಚಿದ್ದ. ಆರಿಸಿದ ಟಿಕ್ಕಿಗಳನ್ನು ತುಂಬಿಕೊಳ್ಳಲು ಜೇಬು ಇಲ್ಲದಿದ್ದರೆ... ಸ್ನೇಹಿತರ ನಿಕ್ಕರ್‌ಗೆಲ್ಲಾ ಎರಡೆರಡು ಜೇಬು ಇರುವಾಗ ನನ್ನ ನಿಕ್ಕರ್‌ಗೆ ಒಂದೇ ಇದ್ದುದು ಎಂಥ ಅವಮಾನ! ಇದು ನಮ್ಮಮ್ಮನಿಗೇನು ಗೊತ್ತು! ಅಳುತ್ತ ನಿಂತಿದ್ದಾಗ ಎಲ್ಲೋ ಹೋಗಿದ್ದ ಅಪ್ಪ ಬಂದರು. ಏಕೆ ಅಳುತ್ತಿದ್ದಾನೆಂದು ಕಾರಣ ಕೇಳಿದರು. ಅವರಿಗೂ ಪಿತ್ತ ನೆತ್ತಿಗೇರಿತು. ''ಹಬ್ಬಾಂತ ಹೊಸಬಟ್ಟೆ ಹೊಲಿಸಿಕೊಟ್ಟಿದ್ದಾರೆ ಅಂತ ಸಂತೋಷಪಡೋದು ಬಿಟ್ಟು, ಟಿಕ್ಕಿ ತುಂಬಿಕೊಳ್ಳೋಕೆ ಜೇಬು ಸಾಲದಂತೆ'' ಎಂದು ಬೆನ್ನಿಗೊಂದು ಬಾರಿಸಿದರು. ಮತ್ತೆ ಅಳುತ್ತ ಹಿತ್ತಲಕಡೆಯಿದ್ದ ಬೃಂದಾವನ ಕಟ್ಟೆಯ ಮೇಲೆ ಕುಳಿತು ಗೋಳಾಡಿದೆ. ಸಮಾಧಾನಪಡಿಸಲು ಯಾರೂ ಬರಲಿಲ್ಲವೆಂಬ ಬಿಗುಮಾನದಿಂದಲೇ ಅಳು ಮುಂದುವರಿಸಿದ್ದೆ. ಅಮ್ಮ ಬಂದು ಸಮಾಧಾನಪಡಿಸಿದಾಗ ತಕ್ಷಣ ಅಳು ನಿಲ್ಲಿಸಿದ್ದೆ. ''ನೀನು ಹೀಗೆ ಸಿಕ್ಕಿದ ಕಸಕಡ್ಡಿಯನ್ನೆಲ್ಲ ಕಾರ್ಪೊರೇಷನ್ ತೊಟ್ಟಿಯ ಥರ ತುಂಬಿಕೊಂಡುಬಂದ್ರೆ ನಾನು ಒಗೆದು ಹಾಕೋದಾದ್ರೂ ಹೇಗೆ? ನನಗಂತು ನಿನ್ನ ಕೊಳಕು ಜೇಬಿನ ಚಡ್ಡಿ ಒಗ್ದು ಒಗ್ದು, ಜಾಲಾಡಿ ಸಾಕಾಗಿ ಹೋಗಿದೆ'' ಎಂದು ಅಮ್ಮ ಅದೆಷ್ಟು ಸಾರಿ ಹೇಳಿದ್ದಾಳೋ! ಟಿಕ್ಕಿ ಆರಿಸಿ ಪೆನ್ಸಿಲ್‌ಗೆ, ರಬ್ಬರ್‌ಗೆ ವಿನಿಮಯ ಮಾಡಿಕೊಳ್ಳುವ ಚಾಣಕ್ಯತೆ ಅಮ್ಮನಿಗೇನು ಗೊತ್ತು? ಹೀಗೆ ಬೇಕಾದ್ದು, ಬೇಡದ್ದು ಎಲ್ಲವನ್ನೂ ಜೇಬಿಗೆ ತುಂಬಿಕೊಳ್ಳುವ ಈ ನನ್ನ ಕಾಯಕ ಹೈಸ್ಕೂಲು ಸೇರುವವರೆವಿಗೂ ಮುಂದುವರಿದಿತ್ತು.



ಪ್ಯಾಂಟಿಗೆ ಜೇಬು ಹೆಚ್ಚಿದಷ್ಟೂ ತೊಡುವವರ ಗೆಟಪ್ ಹೆಚ್ಚುತ್ತದೆಂದು ಇತ್ತೀಚಿನ ಹುಡುಗರು ಹಾಕಿಕೊಳ್ಳುವ ಪ್ಯಾಂಟಿಗೆ ಎರಡೇನು, ಹನ್ನೆರಡು ಜೇಬಾದರೂ ಇರಲೇಬೇಕು. ಪ್ಯಾಂಟಿನ ಮಂಡಿಯ ಕೆಳಭಾಗದಲ್ಲಿ ಎರಡು, ತೊಡೆಯ ಮೇಲೆರಡು, ತೊಡೆಯ ಪಕ್ಕದಲ್ಲೆರಡು, ಹಿಂಬದಿ ಎರಡು, ಹೀಗೆ ಹಲವು ಹತ್ತು ಜೇಬುಗಳೆಂದರೆ ಹುಡುಗರಿಗೆ ದಶಪ್ರಾಣ. ಇದೇ ಪ್ರಮಾಣದಲ್ಲೆ ಅರ್ಧಪ್ಯಾಂಟ್, ಮುಕ್ಕಾಲು ಪ್ಯಾಂಟಿನಲ್ಲೂ ಜೇಬುಗಳಿರುವುದನ್ನು ಕಾಣಬಹುದು. ನಾನು ಬಸ್ಸಿನಲ್ಲಾಗಲೀ ರೈಲಿನಲ್ಲಾಗಲೀ ಪ್ರಯಾಣ ಮಾಡುವಾಗ ಕೊಂಚ ಕೊಂಚ ಹಣವನ್ನು ಷರಟಿನ, ಪ್ಯಾಂಟಿನ ಜೇಬಿನಲ್ಲೆಲ್ಲಾ ಭಾಗಮಾಡಿ ಇಟ್ಟುಕೊಂಡಿರುತ್ತಿದ್ದೆ, ಒಂದು ಜೇಬಿನದು ಪಿಕ್‌ಪಾಕೆಟ್ ಆದರೂ ಆಪತ್ತಿಗೆ ಇತರೆ ಜೇಬಿನಲ್ಲಾದರೂ ಸುರಕ್ಷಿತವಾಗಿರಲೆಂದು. ಹಾಗೇನಾದರೂ ಇಂದಿನ ಹುಡುಗರು ಪ್ಯಾಂಟಿನ ಹತ್ತಾರು ಕಿಸೆಯಲ್ಲಿ ಆಪತ್ತಿಗೆಂದು ಹಣ ಇಟ್ಟಿರುತ್ತಾರೆಂದು

ತಿಳಿದಿದ್ದೀರಾ ? ಖಂಡಿತ ಇಲ್ಲ, ಬಡಿದರೂ ಕೆಲವರಲ್ಲಿ ಒಂದು ರೂಪಾಯಿ ನಾಣ್ಯ ಕೂಡ ಉದುರದು. ಆಪತ್ತಿ ಗಿರಲಿ ಎಂದು ಹೊಲಿದ ಜೇಬುಗಳಲ್ಲ, ಇವೆಲ್ಲ ಬರೀ ಫ್ಯಾಷನ್‌ಗಾಗಿ ಹೊಲಿದವು. ಆದರೆ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕೆಲವೊಂದು ಕಾರ್ಮಿಕರಿಗೆ ಅವರ ಸಮವಸ್ತ್ರದ ಪ್ಯಾಂಟಿನಲ್ಲಿ ಹತ್ತಾರು ಜೇಬಿರುತ್ತಿದ್ದುದರ ಉಪಯೋಗ, ಮಿಷನ್ ರಿಪೇರಿಮಾಡುವ ಟೂಲ್ಸ್‌ಗಳನ್ನು ಇಟ್ಟುಕೊಳ್ಳಲೆಂದು. ಆದರೆ ಮಹಾತ್ಮ ಗಾಂಧಿ ರಸ್ತೆಯಲ್ಲಿ ಸುತ್ತುವ ಪಡ್ಡೆ ಹುಡುಗರಿಗೇಕೆ ಇಷ್ಟು ಜೇಬುಗಳು ?

ಹಬ್ಬ ಬಂದರೆ ಸಾಕು ಅಪ್ಪನ ಜೇಬಿಗೆ ಕತ್ತರಿ ಇದ್ದದ್ದೇ. ಅದರಲ್ಲೂ ದೀಪಾವಳಿ ಬಂದಿತೆಂದರೆ ಸಾಕು, ಅಪ್ಪನ ಜೇಬನ್ನು ಥಮಗುಡಿಸಿಬಿಡುತ್ತಿದ್ದೆವು. ಎಲ್. ಗುಂಡಪ್ಪ ನವರು ಬರೆದಿರುವಂತೆ ''ಅಪ್ಪನ ಜೇಬಿನ ದುಡ್ಡುಗಳೆಲ್ಲ ಚಟಪಟಗುಟ್ಟುತ ಸಿಡಿಯುವುವು...'' ಎಂಬುದಕ್ಕೆ ಸರಿಯಾಗಿ, ''ಲೋ ಹುಡುಗ್ರಾ, ಮೂರು ದಿವಸಕ್ಕು ಸೇರಿಸಿ ಪಟಾಕಿ ತಂದಿದೀನಿ, ಅದನ್ನೇ ಇಟ್ಕೊಂಡು ಹೊಡೀರಿ'' ಎಂದು ಅಪ್ಪ ಪ್ರತಿವರ್ಷ ಹೇಳುತ್ತಿದ್ದರೂ ಅವರು ತಂದ ಪಟಾಕಿಯೆಲ್ಲ ಒಂದೇ ರಾತ್ರಿಗೆ ಚಟ್... ಪುನಃ ಮಾರನೆಯ ದಿನಕ್ಕೆ ಹೊಸದಾಗಿ... ಇದನ್ನು ಕಂಡ ಅಪ್ಪ, ಬುದ್ಧಿವಂತಿಕೆಯಿಂದ ಒಂದು ದಿನಕ್ಕೆಷ್ಟು ಬೇಕೋ ಅಷ್ಟನ್ನೇ ತರಲು ಶುರುಮಾಡಿದರು. ಅಂತೂ ಮೂರು ದಿವಸ ಅಪ್ಪನ ಜೇಬಿನ ದುಡ್ಡನ್ನು ಚಟಪಟಗುಟ್ಟಿಸಿಬಿಡುತ್ತಿದ್ದೆವು.

ಜೇಬು ಷೋಕೇಸಿನಂತೆ ಒಬ್ಬರ ಡಂಭಾಚಾರವನ್ನು ಎತ್ತಿ ತೋರಿಸಿದರೆ ಮತ್ತೊಬ್ಬರ ಉದಾಸೀನತೆಯನ್ನು, ಕೊಳಕುತನವನ್ನು ತೋರಿಸಬಲ್ಲದು. ಹೈಸ್ಕೂಲಿನ ಎಂಟನೆಯ ತರಗತಿಯಲ್ಲಿ ರಾಮಸುಬ್ಬು ಅನ್ನೋ ಸ್ನೇಹಿತ ನೊಬ್ಬನಿದ್ದ. ಅವನ ವಿಚಿತ್ರ ನಡವಳಿಕೆ ಎಂದರೆ ಪಾಠ ಬರೆದುಕೊಳ್ಳಲು ಪೆನ್ನಿನ ಕ್ಯಾಪ್ ತೆಗೆದವನು ಒಂದು ದಿನವೂ ಪುನಃ ಕ್ಯಾಪ್ ಮುಚ್ಚುತ್ತಿರಲಿಲ್ಲ, ಹಾಗೇ ತೆರೆದ ಪೆನ್ನನ್ನು ಜೇಬಿನಲ್ಲಿಟ್ಟುಕೊಂಡು, ಜೇಬು ತುಂಬಾ ಶಾಯಿ ಮಾಡಿಕೊಂಡುಬಿಡುತ್ತಿದ್ದ. ಆಗೆಲ್ಲ ಈಗಿನಂತೆ ಬಾಲ್‌ಪೆನ್ನಿನ ಬಳಕೆ ಅಷ್ಟಾಗಿರಲಿಲ್ಲ. ಹೀಗೆ ಶಾಯಿ ಮಾಡಿಕೊಂಡು ಸ್ಕೂಲಿನಿಂದ ಹೋದಾಗಲೆಲ್ಲ ಅವರಮ್ಮನಿಂದ ಬೈಗುಳ ತಿನ್ನುತ್ತಿದ್ದ. ಅವರಿಗೂ ಬೈದುಬೈದು ಸಾಕಾಗಿ ಕೊನೆಗೆ ಸ್ಕೂಲಿನಿಂದ ಹೋಗುತ್ತಿದ್ದಂತೆ ಶರಟನ್ನು ಬಿಚ್ಚಿಸಿ ಒಗೆದು ಹಾಕಿಬಿಡುತ್ತಿದ್ದರು. ನಿನಗೆ ಪೆನ್ ಬೇರೆ ಕೇಡು, ಬರ್ಕೊ ಪೆನ್ಸಿಲ್‌ನಿಂದ ಎಂದು ಪೆನ್ನು ಕಿತ್ತು ಪೆನ್ಸಿಲ್ ಕೊಡತೊಡಗಿದರು.

ಜೇಬು ಕೆಲವುಸಾರೆ ಮರ್ಯಾದೆ ತಂದುಕೊಟ್ಟರೆ ಕೆಲವು ಸಾರೆ ಮರ್ಯಾದೆ ಕಳೆದುಬಿಡುತ್ತದೆ. ಕೊಂಚಕಾಲದ ಹಿಂದೆ ಅಂದರೆ ೧೯೭೦ರ ಆಸುಪಾಸಿನಲ್ಲಿ ಶರಟಿಗೆ ಯಾರೂ ಜೇಬನ್ನೇ ಇಡಿಸುತ್ತಿರಲಿಲ್ಲ. ಅದೇ ಅಂದಿನ ಫ್ಯಾಷನ್ ಆಗಿತ್ತು. ನಾವು ಐದಾರು ಜನ ಸ್ನೇಹಿತರು ಸಂಜೆ ವಾಕಿಂಗ್‌ಗೆ ಹೋದಾಗ ಒಬ್ಬೊಬ್ಬರು ಒಂದೊಂದು ದಿನ ಕಾಫಿ ತಿಂಡಿ ಕೊಡಿಸುವುದೆಂದು ಕರಾರು ಮಾಡಿಕೊಂಡಿದ್ದೆವು. ಆಗ ಶರಟಿಗೆ ಜೇಬಿಲ್ಲದಿದ್ದರೂ ಪ್ಯಾಂಟಿಗೆ ಜೇಬಿರುತ್ತಿತ್ತು. ಈ ಐದಾರು ಜನರಲ್ಲಿ ನಟರಾಜ ಅನ್ನುವ ಸ್ನೇಹಿತನೊಬ್ಬನಿದ್ದ. ಅಂದು ಹೋಟೇಲಿನ ಬಿಲ್ಲು ತೆರುವ ಸರದಿ ಅವನದು. ತಿಂಡಿ ತಿಂದನಂತರ ಅವನನ್ನು ಬಿಲ್ಲು ಕೊಡು ಎಂದಾಗ ''ನೋಡಮ್ಮ ಶರಟಿಗೆ ಜೇಬೇ ಇಲ್ಲ'' ಎಂದು ಕೈ ಅಲ್ಲಾಡಿಸಿದ. ''ಶರಟಿಗೆ ಜೇಬಿಲ್ಲದಿದ್ದರೆ ಪ್ಯಾಂಟಿಗೆ ಜೇಬಿಲ್ಲವಾ, ತೆಗೆ'' ಎಂದು ಶ್ರೀಕಂಠ ಪ್ಯಾಂಟಿನ ಜೇಬಿಗೆ ಕೈಹಾಕಿ ಹುಡುಕಿದರೆ ಅದಕ್ಕೂ ಜೇಬುಗಳೇ ಇಲ್ಲ. ಅದ್ಯಾವ ಮುಟ್ಠಾಳ ಟೈಲರ್ ಹೊಲಿದನೋ ಎಂದು ಇದ್ದ ಒಂದು ಜೇಬಿಗೆ ಶೀನಿ ಕೈಹಾಕಿದರೆ ತೊಡೆತನಕ ಇಳಿದ ಹರಿದ ಜೇಬು! ಕಡೆಗೆ ನಾವೇ ಹಂಚಿಕೊಂಡು ಬಿಲ್‌ತೆತ್ತು ಹೊರಬಂದು ಈ ಪ್ಯಾಂಟನ್ನು ನಾಳೆಯೇ 'ಹಳೇ ಬಾಗಿನ ಕಂಬಿ'ಯವನಿಗೆ ಹಾಕಿಬಿಡು ಎಂದು ತಾಕೀತು ಮಾಡಿದೆವು.

ಪ್ರಯಾಣ ಮಾಡುವಾಗಲೂ ಅಷ್ಟೆ. ಈ ಜೇಬಿನ ಬಗ್ಗೆ ಎಷ್ಟು ಹುಷಾರಾಗಿದ್ದರೂ ಸಾಲದು. ಹನಿಮೂನ್ ಗೆಂದು ಊಟಿಗೆ ಹೊರಟಾಗ ನನ್ನಂತೆ ಹೊಸದಾಗಿ ಮದುವೆಯಾಗಿದ್ದ ನನ್ನ ಸ್ನೇಹಿತ ರಾಮಮೂರ್ತಿ ಅವನ ಹೆಂಡತಿಯೊಡನೆ ಮೈಸೂರಿನಲ್ಲಿ ಕೂಡಿಕೊಂಡ. ಅಂದು ಸಂಜೆ ಕೆ.ಆರ್.ಎಸ್.ಗೆ ಹೋಗಿಬರುವುದೆಂದು ಕಾರ್ಯಕ್ರಮ ಹಾಕಿಕೊಂಡೆವು. ಕೆ.ಆರ್.ಎಸ್.ಗೆ ಬಸ್




ನವಕರ್ನಾಟಕ ಪ್ರಕಟಿಸಿರುವ ಹೆಚ್. ವೈ. ಶಾರದಾ ಪ್ರಸಾದ್ ಅವರ 'ಎ ವಿಂಡೋ ಆನ್ ದಿ ವಾಲ್' (ಕ್ವಿಟ್ ಇಂಡಿಯಾ ಚಳವಳಿಯ ಸೆರೆಮನೆ ದಿನಚರಿ) ಮತ್ತು ಅದರ ಕನ್ನಡ ಅನುವಾದ 'ಅರಿವಿನ ಆಡುಂಬೊಲ' ಕೃತಿಗಳ ಲೋಕಾರ್ಪಣೆ ಬೆಂಗಳೂರಿನಲ್ಲಿ ದಿನಾಂಕ ೨೮-೨-೨೦೧೦ರಂದು ನಡೆಯಿತು. ಭಾರತದ ಸರ್ವೋಚ್ಚ ನ್ಯಾಯಾಲಯದ ಮಾಜಿ ಮುಖ್ಯನ್ಯಾಯಾಧೀಶರಾದ ಎಂ. ಎನ್. ವೆಂಕಟಾಚಲಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಎಚ್. ಎಸ್. ದೊರೆಸ್ವಾಮಿ ಪುಸ್ತಕ ಅನಾವರಣ ಮಾಡಿದರು. ಇತಿಹಾಸ ಲೇಖಕ ಶ್ರೀ ರಾಮಚಂದ್ರ ಗುಹ ಮತ್ತು ನಿವೃತ್ತ ಐಎಸ್ ಅಧಿಕಾರಿ ಶ್ರೀ ಚಿರಂಜೀವ್ ಸಿಂಗ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಮೊದಲನೇ ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಕೆ. ಎಸ್. ಪಾರ್ಥಸಾರಥಿ, ಶ್ರೀಮತಿ ಕಮಲಮ್ಮ ಶಾರದಾ ಪ್ರಸಾದ್, ಶ್ರೀ ಚಿರಂಜೀವ್ ಸಿಂಗ್, ಶ್ರೀ ರಾಮಚಂದ್ರ ಗುಹ, ಶ್ರೀ ಎಂ. ಎನ್. ವೆಂಕಟಾಚಲಯ್ಯ, ಶ್ರೀ ಎಚ್. ಎಸ್. ದೊರೆಸ್ವಾಮಿ, ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ಸುಗತ ಶ್ರೀನಿವಾಸರಾಜು (ಕೃತಿಯ ಸಂಪಾದಕ), ಶ್ರೀಮತಿ ರೋಸಿ ಡಿ'ಸೋಜ (ಅನುವಾದಕಿ). ಬಲಗಡೆಯ ಚಿತ್ರ ಸಭಾಸದರದ್ದು.

ಸೌಕರ್ಯ ಬಹಳ ಕಡಿಮೆ ಇದ್ದು, ಇದ್ದ ಪ್ರೈವೇಟ್ ಬಸ್ಸಿಗೆ ಬಹಳ ರಶ್. ಹತ್ತಲು ಹೋದಾಗ ನನ್ನ ಗಮನವೆಲ್ಲ ಜೇಬಿನ ಕಡೆಗೇ ಇತ್ತು. ಆದರೂ ಒಮ್ಮೆ ಆ ಗಲಾಟೆಯಲ್ಲೂ ಪ್ಯಾಂಟಿನ ಜೇಬು ಮುಟ್ಟಿನೋಡಿಕೊಂಡು, ಶರಟಿನ ಜೇಬಿನ ಕಡೆ ನೋಡಿ, ಇನ್ನೊಮ್ಮೆ ಪ್ಯಾಂಟು ಜೇಬು ಮುಟ್ಟಿದರೆ ಖಾಲಿ. ತಕ್ಷಣ ಹಿಂಬದಿಯಲ್ಲಿ ನಿಂತಿದ್ದವನ ಕಾಲರ್ ಹಿಡಿದೆ. ಆಗ ಆತ ''ನಾನಲ್ಲ ಸಾರ್, ನಾನಲ್ಲ ಸಾರ್'' ಎಂದ. ಒಂದು ಕೊಟ್ಟೆ. ಅವನು ಕದ್ದಿಲ್ಲದಿದ್ದರೆ, ''ಯಾಕ್ರೀ ಕುತ್ತಿಗೆ ಪಟ್ಟಿ ಹಿಡಿಯುತ್ತೀರಾ'' ಎಂದು ಕೇಳಬೇಕಾದವನು, ನಾನು ಏನೂ ಮಾತನಾಡದಿದ್ದರೂ ''ನಾನಲ್ಲ ಸಾರ್'' ಎಂದದ್ದು ಅವನೇ ಎಂಬುದು ಖಾತ್ರಿಯಾಗಿತ್ತು. ತಕ್ಷಣ ಕಾಲ ಬುಡಕ್ಕೆ ಪರ್ಸ್ ಹಾಕಿ ಓಡಲು ನೋಡಿದಾಗ, ಪರ್ಸ್ ಎತ್ತಿಕೊಂಡು ಅಕ್ಕಪಕ್ಕದವರಿಗೆ ವಿಷಯ ತಿಳಿಸಿದೆ. ಎಲ್ಲರೂ ಸೇರಿ ಧರ್ಮದೇಟು ಹಾಕಿದರು. ಅಂದೇನಾದರೂ ಪರ್ಸ್ ಕಳೆದುಕೊಂಡುಬಿಟ್ಟಿದ್ದರೆ, ಖಂಡಿತ ಮನಸ್ಸಿಗಾಗುತ್ತಿದ್ದ ಆಘಾತ, ನಷ್ಟದಿಂದ ನಮ್ಮ ಕೆ.ಆರ್.ಎಸ್. ಕಾರ್ಯಕ್ರಮ ನೀರಸವೆನಿಸಿಬಿಡುತ್ತಿತ್ತು.

ಹೀಗೆ ಜೇಬಿನ ಬಗ್ಗೆ ಎಷ್ಟೇ ಎಚ್ಚರವಹಿಸಿದರೂ ಸಾಲದು. ಬಸ್ಸ್ಟ್ಯಾಂಡಿನಲ್ಲಿ, ರೈಲ್ವೆ ನಿಲ್ದಾಣದಲ್ಲಿ 'ಜೇಬುಗಳ್ಳರಿದ್ದಾರೆ ಎಚ್ಚರಿಕೆ' ಎಂದು ಬೋರ್ಡ್ ಹಾಕಿದ್ದರೂ ಹಣ ಕಳೆದುಕೊಳ್ಳುವವರಿಗೇನೂ ಕಡಿಮೆಯಿಲ್ಲ. ಈ ಬೋರ್ಡ್ ಸಾಮಾನ್ಯವಾಗಿ ಕರ್ನಾಟಕದಲ್ಲಿ ಕನ್ನಡದಲ್ಲೇ ಇರುವುದನ್ನು ನೋಡಿದಾಗ ಬಹುಶಃ ಕನ್ನಡದವರು ಕಳ್ಳತನ ಮಾಡಬಾರದೆಂದೇ! ಈ ಕಳ್ಳರಿಗೆ ದೇಶ-ಭಾಷೆಯ ಗೊಡವೆಯೇಕೆ ?

ಒಮ್ಮೆ ಹಳ್ಳಿಯಿಂದ ಬಂದ ನನ್ನ ಸ್ನೇಹಿತನೊಬ್ಬನು ಪಂಚೆಯುಟ್ಟು, ಒಳನಿಕ್ಕರಿನ ಜೇಬಿನಲ್ಲಿಟ್ಟಿದ್ದ ಐದುನೂರು ರೂಪಾಯಿಗೆ ಕಳ್ಳರು ಕತ್ತರಿ ಹಾಕಿಬಿಟ್ಟಿದ್ದರು. ಬಂದತಕ್ಷಣ ಹಣ ಹೋಯಿತೆಂದು ದುಃಖದಲ್ಲಿ ಹೇಳಿಕೊಂಡಾಗ ಸುಳ್ಳು ಹೇಳುತ್ತಿದ್ದಾನೆಯೇ ಎಂಬ ಸಂಶಯ ಬಂತು. ಹಳ್ಳಿಯಿಂದ ಬಂದವರು ವಾಪಸ್ ಹೋಗಲು ಬಸ್‌ಚಾರ್ಜ್ ವಸೂಲು ಮಾಡಲು ಈ ರೀತಿ ನಾಟಕವಾಡುತ್ತಿದ್ದುದು ಸಾಮಾನ್ಯವಾಗಿತ್ತು. ನಾನು ಆತನ ಮುಖ ನೋಡಿದೆ. ''ಏನಪ್ಪ ನಿನಗೆ ನಂಬಿಕೆ ಬರ್‍ತಾಯಿಲ್ವಾ'' ಎಂದು ತನ್ನ ನಿಕ್ಕರಿನ ಜೇಬು ತೋರಿಸಿದಾಗ, ಹರಿದ ಜೇಬು ನೋಡಿ ಅವಾಕ್ಕಾದೆ. ತಕ್ಷಣ ನನಗೆ ನಗು ತಡೆಯಲಾಗದೆ ನಕ್ಕೆ. ''ಏಯ್, ನಾನು ಐನೂರು ಕಳ್ಕೊಂಡೆ ಅಂದ್ರೆ ನಿಂಗೆ ಸುಮಾನಾನ ?'' ಎಂದ. ಇಲ್ಲ, ಕತ್ತರಿ ಅಥವಾ ಬ್ಲೇಡ್ ಹಾಕಿದೋನು ಇನ್ನು ಸ್ವಲ್ಪ ಮುಂದಕ್ಕೆ ಹಾಕಿಬಿಟ್ಟಿದ್ರೆ ಏನ್‌ಗತಿ ಎಂಬ ಯೋಚನೆ ಬಂತು... ''ಸದ್ಯ ನಿನ್ನ ಸೆಂಟ್ರಲ್ ಗೌರ್‍ನಮೆಂಟಿಗೆ ಕತ್ತರಿ ಬೀಳಲಿಲ್ಲವಲ್ಲ'' ಎಂದಾಗ ಅವನೂ ನಗತೊಡಗಿದ.

ಜೇಬು ಎಂಬುದು ಕೆಲವರಿಗೆ ಒಂದು ರೀತಿಯ ರಿಸರ್ವ್ ಬ್ಯಾಂಕ್ ಇದ್ದ ಹಾಗೆ ಇದ್ದರೂ ಇನ್ನು ಕೆಲವರಿಗೆ ಪತ್ರಗಳ ಸಂಗ್ರಹಣಾ ಕೊಠಡಿಯೂ ಹೌದು. ರಾಜರತ್ನಂರವರು ಸೆಂಟ್ರಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ಕ್ಲಾಸಿಗೆ ಬರಬೇಕಾದರೆ ದಪದಪ ಹೆಜ್ಜೆಹಾಕುತ್ತ ಬರುತ್ತಿದ್ದರಂತೆ. ತರಗತಿಯಲ್ಲಿ ಹುಡುಗರೇನಾದರೂ ಗಲಾಟೆ ಮಾಡುತ್ತಿದ್ದರೆ ಬಂದಷ್ಟೇ ವೇಗದಿಂದ ವೇದಿಕೆ ಏರಿ ಒಮ್ಮೆ ಸುತ್ತಲೂ ನೋಡಿ, ಗಲಾಟೆ ತಹಬಂದಿಗೆ ಬಾರದಿದ್ದರೆ ಜೇಬಿನಿಂದ ಒಂದೊಂದೇ ಪತ್ರವನ್ನು ತೆಗೆದು ರಪ್ ರಪ್ ಎಂದು ಟೇಬಲ್ಲಿನ ಮೇಲೆ ಒಗೆಯುತ್ತಿದ್ದರಂತೆ. ಒಂದೇ, ಎರಡೇ... ಇವರು ಹೀಗೆ ರಪ್, ರಪ್ ಎಂದು ಒಗೆಯುತ್ತಿದ್ದುದನ್ನು ನೋಡಿದ ಹುಡುಗರಿಗೆ, ಏಕೋ ಇವತ್ತು 'ಗರಂ' ಆಗಿದ್ದಾರೆ ಎಂದು ತಿಳಿದು ಗಪ್‌ಚುಪ್ ಆಗಿಬಿಡುತ್ತಿದ್ದರಂತೆ. ನಿಶ್ಶಬ್ದವಾದನಂತರ ಎಸೆದ ಪತ್ರಗಳನ್ನೆಲ್ಲಾ ಒಂದೊಂದಾಗಿ ಹೆಕ್ಕಿ ಜೋಡಿಸಿ ಪುನಃ ಜೇಬಿನೊಳಗೆ ಸೇರಿಸಿದ ಮೇಲೆ ಪುಸ್ತಕ ಹಿಡಿದು ಪಾಠ ಮಾಡಲು ಪ್ರಾರಂಭಿಸುತ್ತಿದ್ದರಂತೆ.

ಹೆಂಡತಿಯರಿಗೆ ಗಂಡಂದಿರ ಜೇಬಿಗೆ ಕೈಹಾಕುವುದೆಂದರೆ ಜಾಮೂನು ತಿಂದಷ್ಟೇ ಸಂಭ್ರಮ. ಜೇಬು ತಡಕಾಡುವುದೆಂದರೆ ಆಪ್ಯಾಯಮಾನವಾದ ಬಾಬುಗಳಲ್ಲೊಂದು. ಅದರಲ್ಲೂ ಪಗಾರದ ದಿನ ಯಾವ ಹೆಂಡತಿ ಜೇಬು ಶೋಧಿಸುವುದಿಲ್ಲ ಹೇಳಿ. ಪ್ರತಿಯೊಬ್ಬ ಹೆಂಡತಿಗೂ ಅವರವರ ಗಂಡಂದಿರ ಜೇಬಿನ ಬಗ್ಗೆ ವಿಪರೀತ ಕಾಳಜಿ. ಹದಿನೈದು ಇಪ್ಪತ್ತನೆಯ ತಾರೀಕು ಆಯಿತೆಂದರೆ ಜೇಬಿನ ಬಗ್ಗೆ ಒಲವು ಕಳೆದುಕೊಂಡುಬಿಡುತ್ತಾರೆ. ಈ ರೀತಿ ಜೇಬಿನ ಮೇಲೆ ಚಲಾಯಿಸುವ ಅಧಿಕಾರ, ಅಲಿಖಿತ ನಿಯಮ - ಅನಾದಿ ಕಾಲದಿಂದಲೂ ಹೆಂಡತಿಯರಿಗೆ ಲಭಿಸಿದ್ದು!

ಒಮ್ಮೆ ಬಾದಷಹ ಅಕ್ಬರ್, ಬಾದಷಹರ ಗಡ್ಡವನ್ನೆಳೆದವರಿಗೆ ಏನು ಶಿಕ್ಷೆ ವಿಧಿಸಬೇಕು, ಎಂದು ಸಭೆಯನ್ನುದ್ದೇಶಿಸಿ ಪ್ರಶ್ನಿಸಿದ. ಆಗ ಸಭೆಯಲ್ಲಿದ್ದವರೆಲ್ಲರೂ ಬಾದಷಹರ ಗಡ್ಡ ಎಳೆಯುವುದೆಂದರೇನು, ಅವರ ಕೈಕತ್ತರಿಸಬೇಕು ಎಂದು ಒಬ್ಬರೆಂದರೆ, ಗಡಿಪಾರು ಮಾಡಬೇಕೆಂದು ಮತ್ತೊಬ್ಬರು, ಗಲ್ಲು ಶಿಕ್ಷೆಯೇ ಆಗಬೇಕೆಂದು ಇನ್ನೊಬ್ಬರು ಹೀಗೆ ತಮಗೆ ತೋಚಿದ್ದನ್ನು ಹೇಳಿದರು. ಆಗ ''ನೀನೇನು ಹೇಳುತ್ತೀಯಾ ಬೀರಬಲ್'' ಎಂದು ಬಾದಷಹ ಕೇಳಿದ. ಅದಕ್ಕೆ ಬೀರಬಲ್ ''ಅಂಥವರ ಬಾಯಿಗೆ ಸ್ವಲ್ಪ ಸಕ್ಕರೆ ಹಾಕಬೇಕು ಹುಜೂರ್'' ಎಂದ. ಇದನ್ನು ಕೇಳಿದ ಇಡೀ ಸಭೆಯೇ ಸ್ತಬ್ಧವಾಯಿತು. ಏನು ? ಬಾದಷಹರ ಗಡ್ಡ ಎಳೆದವರ ಬಾಯಿಗೆ ಸಕ್ಕರೆಯೇ ? ಇದೊಂದು ಅವಿವೇಕದ ಪರಮಾವಧಿ ಎಂದು ಯೋಚಿಸಿದರು. ಆಗ ಬಾದಷಹ ''ಏಕೆ ಆ ರೀತಿ ಹೇಳುತ್ತಿದ್ದಿಯಾ, ಶಿಕ್ಷೆ ಕೊಡುವುದು ಬೇಡವೇ ?'' ಎಂದು ಕೇಳಿದ. ''ಹುಜೂರ್, ನಿಮ್ಮ ಗಡ್ಡ ಎಳೆಯುವ ಅಧಿಕಾರ ನಿಮ್ಮ ಚಿಕ್ಕಮಕ್ಕಳಿಗಲ್ಲದೆ ಮತ್ತಾರಿಗಿದೆ'' ಎಂದಾಗ ಎಲ್ಲರೂ ಹರ್ಷೋದ್ಗಾರ ಮಾಡಿದರು.

ಹೀಗೆ ಗಂಡಂದಿರ ಜೇಬನ್ನು ಜಪ್ತಿಮಾಡುವ ಅಧಿಕಾರ ಹೆಂಡತಿಯರಿಗಲ್ಲದೆ ಮತ್ತಾರಿಗಿದೆ ಹೇಳಿ? ಆದರೂ ಸಂಪಾದಿಸಿದ್ದೆಲ್ಲ ಜೇಬಿನಲ್ಲಿಟ್ಟು ನಂತರ ಹಣಕ್ಕೆ ಹಲ್ಲುಗಿಂಜಬೇಕಾದೀತೆಂದು ಹಲವಾರು ಗಂಡಸರು ತಮ್ಮದೇ ಆದ ವಿಧಾನದಿಂದ ಹಣ ಉಳಿಸಿ ಹೆಂಡತಿಗೆ ನಾಮ ಹಾಕುವ ದಾರಿ ಹುಡುಕಿಕೊಂಡಿರುತ್ತಾರೆ.

ಸಂಪಾದಿಸಿದ್ದೆಲ್ಲ ಕುಡಿಯುವುದಕ್ಕೆ ಖರ್ಚು ಮಾಡಿಬಿಡುತ್ತಾನೆಂದು ಸಂಶಯಿಸಿದ ಪುಟ್ನಂಜಿ, ರತ್ನ ಬಂದ ತಕ್ಷಣ ಅವನ ಜೇಬು ಜಡತಿ ಮಾಡುವಳು. ಆದರೆ ರತ್ನ ಅಷ್ಟು ಪೆದ್ದನೇ ?

ಯೆಂಡಕ್ ಒಂದ್ ಎಲ್ಡಾಣೆ  
ಕೂದ್ಲಾಗ್ ಸಿಕ್ಸಿ  
ಅಟ್ಟೀಗ್ ಬಂದ್ ತಕ್ಸಾನ  
ಜೋಬ್ ಒದ್ರಿ ಬೊಗ್ಸಿ  
ಯೆಡ್ತಿಗೆ ಮೋಸ  
ಮಾಡ್ದ್ ಸಂತೋಸ!

– ಎಂದು ರಾಜರತ್ನಂ ಹೇಳುವಾಗ, ಹೆಂಡತಿಗೆ ಕೊಂಚ 'ಯಾಮಾರಿಸಿ' ಜೇಬಿನಲ್ಲೇನೊ ಬಚ್ಚಿಟ್ಟುಕೊಳ್ಳುವುದರಲ್ಲೆ ಸಂಸಾರದ ಸಾಮರಸ್ಯ, ಸಂತೋಷ!

ಆದ್ದರಿಂದ ಜೇಬಿಗೂ ಜಾಬಿಗೂ ಬಹಳ ನಂಟು. ಎರಡೂ ಒಂದನ್ನೊಂದು ತಳಕು ಹಾಕಿಕೊಂಡಿರುತ್ತವೆ. ಅಮೆರಿಕದ ಆರ್ಥಿಕ ವ್ಯವಸ್ಥೆಗೆ ಬಲವಾದ ಹೊಡೆತ ಬಿದ್ದು ಹಲವಾರು ಮಂದಿ ಭಾರತೀಯರ ಜೇಬಿಗೆ ಕತ್ತರಿಬಿದ್ದ ವಿಷಯ ನಿಮಗೆ ಗೊತ್ತೇ ಇದೆ. ಹೀಗೆ ಜಾಬ್ ಭದ್ರತೆಗೆ ಪೆಟ್ಟು ಬೀಳುವಾಗ ಜೇಬಿನ ಭದ್ರತೆಯ ಬಗ್ಗೆ ವಿಶೇಷ ಕಾಳಜಿ ವಹಿಸಬೇಕಾಗುತ್ತದೆ. ಜೋಬದ್ರ (ಜೋಬುಭದ್ರ) ಮಾಡದಿದ್ದರೆ ಜೋಬದ್ರ ತನದಿಂದ ಬದುಕಬೇಕಾಗುತ್ತದೆ.

ವೈ. ಎನ್. ಗುಂಡೂರಾವ್  
[illegible]



- ಅಲ್ರೀ, ನಾವು ಯಾವುದರಲ್ಲಿ ಕಡಿಮೆ ಇದ್ದೇವರಿ, ಗಂಡಸರಿಗಿಂತ ಒಂದು ಹೆಜ್ಜೆನೇ ಮುಂದೆ ಇದ್ದೇವರಿ, ಎಲ್ಲ ರಂಗದಲ್ಲಿ ನಾವೇ ಮುಂದು. ಓದು ವಿದ್ಯೆ ಬುದ್ಧಿಯಲ್ಲಿ ಗಂಡಸರು ಎಲ್ಲಿ ಇರತಾರ ಅಲ್ಲಿ ನಾವ ಇರ್ತೇವರಿ.
- ಅವರು ಈ ಹಿಂದೆ ನಮ್ಮನ್ನು ಹೊಸ್ತಿಲ ದಾಟಗೊಡಿಸುತ್ತಿರಲಿಲ್ಲ, ಈಗ ನೋಡ್ರಿ ನಮ್ಮ ಕಾಲನ ಮುಂದದ.
- ಹೆಣ್ಮಕ್ಕಳ ಬುದ್ಧಿ ಮೊಳಕಾಲ ಕೆಳಗ ಅನ್ನುವವರ ಬಾಯಿನ ಇಂದು ಮುಚ್ಚಿಸಿಬಿಟ್ಟೇವರಿ.
- ಗಂಡಸರ ಸರಿಸಮಾನ ಅನ್ನು ಪದಕ್ಕ ನಾವೂ ಇಂದು ಸರಿಯಾಗಿ ನಮ್ಮ ಉಡುಗೆ-ತೊಡುಗೆಯಿಂದ ತೋರಿಸ್ತಿದ್ದೀವರಿ.
- ಅವರ ಹಾಂಗ ಪ್ಯಾಂಟ-ಶರ್ಟ್ ಹಾಕ್ಕೊಂಡೀವಿ. ಕೈಯಾಗಿನ ಬಳಿ ತೆಗೆದೀವಿ. ಹಣಿಯಾಗ ಧೂಳಿನ ಕಣದಂತ ಚುಕ್ಕಿ ಇಟಗೊಂಡಿವರಿ. (ಅದೂ ಇಲ್ಲ) ಕಿವಿ ಮೂಗಿನಾಗಿನದೂ ತೆಗೆದೀವಿ.
- ಕೈಯಾಗ ಒಂದ ವಾಚ ಕಟ್ಟೇವಿ. ಕೂದಲಾನೂ ಬಾಯ್‌ಕಟಿಂಗ ಮಾಡಿಸೇವರಿ. ನಮಗೂ ಒಂದು ಬ್ಯೂಟಿ ಪಾರ್ಲರ ತೆಗೆಸೀವಿ. ನಾವು ಯಾವುದರಲ್ಲಿ ಕಡಿಮೆ ಇದ್ದೇವರಿ.
- ಇನ್ನ ಮನಿಯವರದೊಂದು ಗೊಣಗಾಟ ಇರ್ತದ. ಗಂಡಮಕ್ಕಳ ಹಾಂಗ ಮಾಡಿದರ ನಡಿತದೇನು. ಹೆಣ್ಮಕ್ಕಳ ಇದ್ದಾಂಗ ಇರಬೇಕು.
- ಏನ್ರೀ ಅದು ಹೆಣ್ಮಕ್ಕಳು ಗಂಡಮಕ್ಕಳು ಅನ್ನುವ ವ್ಯತ್ಯಾಸ ? ಅವರಿಗೆ ಇಂದಿನ ಕಾಲದಾಗ ಹ್ಯಾಂಗ ಇರಬೇಕು ಅನ್ನೂದ ಗೊತ್ತ ಇಲ್ಲ. ಯಾವ ಕಾಲದ ಮಾತಾಡತಾರೋ ಏನೋ ?

# ನಾವು ಯಾವುದರಲ್ಲಿ ಕಡಿಮೆ ಇದ್ದೇವೆ ?

- ಪಾಪ ಅವರಿಗಾದರೂ ಏನ ಗೊತ್ತದ. ಇಂದು ಸ್ತ್ರೀ ಸ್ವಾತಂತ್ರ್ಯ ಅದಅನ್ನೂದ ಅವರಿಗೆ ಗೊತ್ತೇ ಇಲ್ಲ. ಮನಿ ಬಿಟ್ಟ ಹೊರಗ ಬಂದರತಾನೆ ಎಲ್ಲ ಗೊತ್ತಾಗೋದು ?
- ಅವರದೂ ಖರೇನ ಅದ, ಅವರಿಗೆ ವಿದ್ಯೆ ಬುದ್ಧಿ ಇಲ್ಲ. ಗಂಡ ಹೇಳಿದಾಂಗ ಕೇಳಿಕೊಂಡು ಇರೂದು. ಸಾಕಷ್ಟು (ಬಹಳ) ಮಕ್ಕಳನ್ನ ಹೆರೋದು. ಮನಿ ಕೆಲಸ ಮಾಡೋದು, ದನಕ್ಕ ಬಡಿದಾಂಗ ಬಡಿಸಿಕೊಳ್ಳುವುದು. ಇದೆಂತಹ ಹೆಣ್ಣಿನ ಜನ್ಮ ಅಂತ ಅಳೂದು.
- ಇನ್ನು ಗಂಡ ಹೋಗಲಿ, ಅತ್ತೆ-ಮಾವ, ನಾದಿನಿ, ಭಾವಮೈದುನ ಒಬ್ಬರ ಇಬ್ಬರ, ಎಲ್ಲರ ಕಾಟವನ್ನು ಸಹಿಸಿಕೊಳ್ಳುವದು, ಏನು ಕರ್ಮ ನಮ್ಮದು !
- ಅತ್ತೆ-ಮಾವ-ಗಂಡ ವರದಕ್ಷಿಣೆ ಸಲುವಾಗಿ ಕಾಟ ಕೊಟ್ಟು ಮನಿ ಬಿಟ್ಟು ಓಡಿಸುವದು. ಇಲ್ಲದಿದ್ದರ ಬೆಂಕಿ ಹಚ್ಚಿ ಸುಡೋದು. ಇಲ್ಲದಿದ್ದರ ಆತ್ಮಹತ್ಯೆ ಮಾಡಿಕೊಳ್ಳುವ ಹಾಂಗ ಮಾಡೂದು.
- ಇಂತಹದನ್ನೆಲ್ಲ ಯಾರು ಸಹಿಸ್ಕೋತಾರ್ರೀ ? ಅದಕ ನಾವು ನಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡೂದಕ ಮಹಿಳಾ ಆಯೋಗ ಹಕ್ಕು ರಕ್ಷಣೆ ಸಲುವಾಗಿ ಮಹಿಳಾ ಸಂಘ ಸಂಸ್ಥೆ ಮಾಡಿಕೊಂಡೇವಿ.
- ನಮ್ಮ ಹೋರಾಟ ಎಷ್ಟಂದರ ಪ್ರತಿಯೊಂದು ಊರಾಗ ನಮ್ಮ ಸಂಘ ಸಂಸ್ಥೆ ಇದೇರಿ.
- ಅದಕ್ಕ ನಾವು ಈಗ ಯಾರಿಗೂ ಹೆದರೂ ಹಾಂಗಿಲ್ಲ. ನಮ್ಮ ಕಾಲದ ಮೇಲೆ ನಾವು ನಿಂತ್ಕೊಂಡ್ಡಿದ್ದೇವಿ.
- ಹ್ಯಾಂಗ ಅಂತ ಕೇಳ್ತೀರಾ ? ನಾನು ನನ್ನ ಗಂಡ ಅಷ್ಟೇ ತಂದೆ-ತಾಯಿ, ಅತ್ತೆ-ಮಾವಂದಿರ ಹಂಗಿನಾಗ ಇಲ್ಲರೀ, ನಾವಾಯ್ತು ನಮ್ಮ ನೌಕರಿಯಾಯ್ತು.
- ಅಡಿಗೆ ಮನೆನೂ ಬೇಕಿಲ್ಲ. ಹಣ ಗಳಿಸ್ತೀವಿ ಅಂದ ಮೇಲೆ ಅಡಿಗೆ ಮಾಡಕ ಯಾಕ ಹೋಗಬೇಕ್ರಿ ?
- ಹೋಟಲ್ ತಿಂಡಿ ಊಟ ಇರ್ತದ. ಬೇಕರಿ ತಿನಿಸು ಸಾಕಷ್ಟು ಅಂಗಡಿಗಳಿರುವಾಗ ಅಡಿಗೇದೂ ಅವಶ್ಯಕವಿಲ್ಲ. ಬೇಕಾದರ ಅಷ್ಟ ಅಡಿಗೆ ಮಾಡೂದು ಬಿಡೋದು.
- ಗಂಡಸರಿಗೆ ಅಷ್ಟ ಬರದ ಕೊಟ್ಟದೇನು ಹೋಟಲ್ ಊಟ, ನಾವೂ ಯಾಕ ಹೋಗಬಾರದು ? ಹಾಂಗ ಪಬ್ ಕ್ಲಬ್‌ಗೂ ಹೋಗತೇವಿ. ಹೋದರೆ ಏನಾದರೂ ಗಲಾಟೆ ಆದರೆ ಸರಕಾರ ಮಹಿಳಾ ಸಂಘಗಳು ನಮ್ಮ ರಕ್ಷಣೆಗೇ ಬರ್ತಾರ. ನಾವು ಯಾಕ ಅಂಜಬೇಕರಿ.
- ನಮಗೆ ಈಗ ಸಿಕ್ಕ ಸ್ವಾತಂತ್ರ್ಯ (ಮಹಿಳಾ ಸ್ವಾತಂತ್ರ್ಯ) ಸಾಕಾಗಂದ ಇಲ್ರೀ. ಹಿಂದಿನದನ್ನು ನೆನೆಸಿಕೊಂಡರ ನಾವೆಷ್ಟು ಸ್ವಾತಂತ್ರ್ಯ ಅನುಭವಿಸಿದರೂ ಕಡಿಮೆಯೇ.
- ಇನ್ನು ನಮ್ಮ ಅಪ್ಪ ಅಮ್ಮ ಮದುವಿ ಚಿಂತೆ ಮಾಡತಾರ. ನಮಗ ಯಾವಾಗ ಯಾರನ್ನು ಮದುವೆ ಮಾಡಿಕೊಬೇಕು ಅನ್ನುದು ನಮಗ ಚೆನ್ನಾಗಿ ಗೊತ್ತದ.
- ನಾನು ಹೇಳಿದ ವರನನ್ನು ಅಪ್ಪ ಅಮ್ಮ ಒಪ್ಪುವರಾ ! ಅವರು ಆರಿಸೋದೇ ಬೇರೆ, ಸಂಪ್ರದಾಯ ಸೀರೆ ಉಡುವದು ತಾಳಿ ಹಾಕಿಕೊಂಡು ಇರುವದು, ಇತ್ಯಾದಿ ಇದು ನನ್ನ ಕೈಯಿಂದ ಆಗದ ಮಾತು.
- ಅಲ್ರೀ ಹೆಣ್ಮಕ್ಕಳಿಗೆ ತಾಳೀ ಕಟ್ಟತಾರ. ಆದರ ಗಂಡನಿಗೆ ಯಾಕ ಕಟ್ಟುವದಿಲ್ಲರೀ ನಮಗೊಂದು ಅವರಿಗೊಂದು ಕಟ್ಟಳೆ ಇರಬಾರದರೀ.
- ತಾಳೀ-ಮಂಗಳಸೂತ್ರ ಹಾಕಿಕೊಳ್ಳುವದು ಬಿಡುವುದು ನಮ್ಮ ವಿಚಾರಕ್ಕಾ ಸೇರಿರೋದು, ಕಾಲುಂಗುರ, ತಾಳಿ ಗಂಡಸರ ಗುಲಾಮಗಿರಿಯಾಗ ಇದ್ದಹಾಂಗ.
- ಮತ್ತೆ ಗಂಡ ಸತ್ತರ ಕುಂಕುಮ ತಾಳಿ ಎಲ್ಲ ತೆಗೆಯಬೇಕಂತ. ಮೊದಲು ನಾವು ತೆಗೆದುಬಿಟ್ಟರ ಒಳ್ಳೆಯದಲ್ಲವೇನ್ರಿ.
- ಮಂಗಳಸೂತ್ರ ಇಲ್ಲದವರು ಅಮಂಗಳರು ಅನ್ನುವ ಶಬ್ದಾನೂ ಹೋಗಿಬಿಡ್ತದ, ನಮ್ಮ ಹಾಂಗ ಹೆಂಡತಿ ಸತ್ತವರು ಅಮಂಗಳರು ಅನ್ನೂದಿಲ್ಲವಲ್ಲ ಯಾಕೆ ?
- ನನ್ನ ಗಂಡ ಎಂತಹವನಿರಬೇಕು. ನಾವು ಆರಿಸುವ ಸ್ವಾತಂತ್ರ್ಯ ಇರಬೇಕರಿ. ಗಂಡನೆಂದರೆ ಅವನಷ್ಟೇ ಹಕ್ಕು ಬಾಧ್ಯತೆ ನಮಗಿರಬೇಕು. ನಾವು ಆರಿಸುವ ಸ್ವಾತಂತ್ರ್ಯ ಇರಬೇಕರಿ. ಗಂಡನೆಂದರೆ ಅವನಷ್ಟೇ ಹಕ್ಕು ಬಾಧ್ಯತೆ ನನಗಿರಬೇಕು. ನಾನು ಹೇಳಿದಾಂಗ ಅವನು ಕೇಳಬೇಕು.
- ನಾನು ಕೇಳಿದಾಗ ಕೇಳಿದಷ್ಟು ಹಣ ಕೊಡಬೇಕು.
- ನನ್ನ ಮನಿಯಾಗ ನಾನು ನನ್ನ ಗಂಡ-ಮಕ್ಕಳು ಮಾತ್ರ ಇರಬೇಕು. ಅತ್ತೆ-ಮಾವ ಅದೂ ವಯಸ್ಸಾದವರು ಇರಲೇಬಾರದು. ಅವರ ಸೇವಾ-ಧರ್ಮ ಎಂದು ಕಾಟ ಸಹಿಸೋದು ಆಗೂದಿಲ್ರಿ.
- ಅವರಾದರೂ ನಾನು ಹೇಳಿದಾಂಗ ಕೇಳಿಕೊಂತ ಇದ್ದರ ಇರಲಿ. ಇಲ್ಲಾಂದರ ಅವರು ವೃದ್ಧಾಶ್ರಮಕ್ಕಾದರೂ ಹೋಗಲಿ. ಅದರ ವ್ಯವಸ್ಥಾ ಬೇಕಾದರ ನಾವು ಮಾಡತೀವಿ.
- ಸ್ವಾತಂತ್ರ್ಯವೇ ನಮ್ಮ ಮೂಲ ಮಂತ್ರ. ನಾವು ಈಗಿನ ಕಾಲಕ್ಕ ತಕ್ಕಂತೆ ಇರುವದೇ ನಮ್ಮ ಧರ್ಮ, ಬೇಕಾದವರು (ಗಂಡನಾಗಿರಲಿ ಅತ್ತೆ-ಮಾವ-ತಂದೆ-ತಾಯಿಗಳಿರಲಿ) ನಮ್ಮ ಜೊತೆಗೆ ಇರಬಹುದು, ಬಿಡಬಹುದು.
- ಒಟ್ಟು ನಾವು ಗಂಡಸರ ಸರಿಸಮಾನರು ಅಂದರ ಹೀಂಗ ಇರುತ್ತೇವೆ. ಎಲ್ಲದಕ್ಕೂ ಆಲದ ಮರ ಇದೆಯಂತ ಅದಕ್ಕ ಜೋತು ಬೀಳವವರು ನಾವಲ್ಲ, ನಾವು ಸ್ವತಂತ್ರರು ಇದ್ದೇವೆ.

**ಶಾಂತಾದೇವಿ ಹಿರೇಮಠ**
ಪ್ರಭುಸಿದ್ಧ ನಿಲಯ, ವಿಕಾಸ ನಗರ, ಕೊಪ್ಪಳ - ೫೮೩೨೩೧

ಕಾವ್ಯ ನಡೆದು ಬಂದ ದಾರಿಯಲ್ಲಿ ಎಪ್ಪತ್ತರ ದಶಕದ ಚರಿತ್ರೆ ಗಮನೀಯ ಸ್ಥಾನ ಪಡೆದಿದೆ. ಸಂಘಟನೆಗಳಿಗೆ ಇರುವ ಸಾಂಸ್ಕೃತಿಕ, ರಾಜಕೀಯ, ಸಾಹಿತ್ಯಕ ಸತ್ವವನ್ನು ಗುರುತಿಸಿದ ಕಾಲಘಟ್ಟವಿದಾಗಿತ್ತು. ಏಕಾಂತದ ಹಾಡುಪಾಡುಗಳೆಲ್ಲವೂ ಸಾರ್ವಜನಿಕರ ಅಭಿವ್ಯಕ್ತಿಯಾಗಿ ಸಮೂಹದ ಶಕ್ತಿಯನ್ನು ಈ ಹಂತದಲ್ಲಿ ಕಂಡುಕೊಳ್ಳಲಾಯಿತು. ಇಲ್ಲಿಯವರೆಗಿನ ಸಾಹಿತ್ಯಕ ಕೃತಿಗಳು ಆಕೃತಿ ಹಾಗೂ ಮಾದರಿ ನಿರ್ಮಾಣ ಕುರಿತಾದ ಆಲೋಚನೆಗಳನ್ನು ಮಾತ್ರ ಒಳಗೊಂಡಿದ್ದವು. ಮನುಕುಲದ ನಡುವಣ ಅಸಮಾನತೆಯ ಬದುಕು ಸಾಹಿತ್ಯದಿಂದ ಹೊರಗೆಯೇ ಉಳಿದುಬಿಟ್ಟಿತ್ತು.

ಎಪ್ಪತ್ತರ ದಶಕದ ನಂತರ ವಿಚಾರ ಹಾಗೂ ಸಾಹಿತ್ಯ ನಿರ್ಮಿತಿಗಳೂ ಮಾತು ಮರೆತು, ದೌರ್ಜನ್ಯವನ್ನು ಅನಿವಾರ್ಯವಾಗಿ ಸಹಜವಾಗಿ ಒಪ್ಪಿಕೊಂಡಿದ್ದ ಶೂದ್ರ ವರ್ಗದ ನೆಲ ಮತ್ತು ನೆಲದ ಅಪ್ಪಟ ವಿಚಾರಗಳಿಗೆ ಹೆಚ್ಚು ಒತ್ತುಕೊಟ್ಟವು. ಇಲ್ಲಿ ಸಹಜವಾಗಿಯೇ ಎರಡು ವರ್ಗಗಳಾದ ಶೋಷಕರು, ಶೋಷಿತರು ಎಂಬ ಎರಡು ವಿಚಾರಗಳು ಪ್ರಧಾನವಾಗಿ ಬಿಂಬಿಸಲ್ಪಟ್ಟವು. ರಾಜಕೀಯ, ರಾಜಕೀಯ ಸಿದ್ಧಾಂತಗಳು, ಸಂಘಟನೆಗಳು ಪ್ರಜ್ಞಾಪೂರ್ವಕವಾಗಿ ಗುರುತಿಸಲ್ಪಟ್ಟು ಹೊಸ ಸಮಾಜದ ತುರ್ತಿನೆಡೆಗೆ ದುಡಿದವು.

ತುಳಿಸಿಕೊಂಡವರೆಲ್ಲಾ ಒಂದೇ ವರ್ಗವೆಂಬ ಸಮ್ಮತಿಯಲ್ಲಿ ತಮ್ಮನ್ನು ಹತ್ತಿಕ್ಕಿರುವ ಬಹು ಹಿಂದಿನ ಯಜಮಾನಿಕೆಯನ್ನು ಪೂರ್ಣಪ್ರಮಾಣದಲ್ಲಿ ಪ್ರಶ್ನಿಸಿದ, ದಂಗೆಯೆದ್ದ, ಬೀದಿಗಿಳಿದ ವಿಶೇಷ ಸಂದರ್ಭವಿದಾಗಿತ್ತು. ಈ ಹೋರಾಟದ ಸಂದರ್ಭವು ಸಹಜವಾಗಿಯೇ ಸಮಾಜದ ಉತ್ಪನ್ನವಾದ ಸಾಹಿತ್ಯದ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರಿತು. ಈ ಹಿನ್ನೆಲೆಯಲ್ಲಿ ಮಾರ್ಕ್ಸವಾದ ಮತ್ತು ಅಂಬೇಡ್ಕರರ ವಿಚಾರಧಾರೆಗಳು ಸಹಜವಾಗಿಯೇ ಕೆಲಸ ಮಾಡಿವೆ. ಬಹುಕಾಲದಿಂದ ಬೇರುಬಿಟ್ಟಿದ್ದ ಅಗ್ರಹಾರದ ಸಂಸ್ಕೃತಿಗೆ ಎದುರಾಗಿ ಎಲ್ಲ ಶೂದ್ರವರ್ಗಗಳು ಸಂಘಟನೆಗೊಂಡು ಬೀದಿಗಿಳಿದ, ತರಾಟೆಗೆ ತೆಗೆದುಕೊಂಡ ಚಾರಿತ್ರಿಕ ಘಟ್ಟವಿದಾಗಿತ್ತು.

ಬಂಡಾಯದೊಂದಿಗೆ ದಲಿತತ್ವ ಸೇರಿಹೋದ ಈ ಕಾಲಘಟ್ಟದಲ್ಲಿ ದಲಿತ ಸಾಹಿತ್ಯದ ಪ್ರತಿನಿಧಿಗಳೆಂಬಂತೆ ಹಲವು ಲೇಖಕರು ಸರ್ವಶಕ್ತರಾಗಿ ಬರೆಯಹೊರಟಿದ್ದು, ಬರಹದ ಮಾಧ್ಯಮ ಹೋರಾಟದ ಹಾದಿಯೂ ಆಗಿ ನಿರ್ಮಾಣಗೊಂಡಿತ್ತು. ಇಂದೂ ಕೂಡ ಸಿದ್ಧಲಿಂಗಯ್ಯನವರ ಕವಿತೆಗಳು ಹಾಗೂ ದೇವನೂರ ಮಹಾದೇವ ಅವರ ಕತೆಗಳು ಈ ಹಾದಿಯ ಮೊದಲ ಸರ್ವಶಕ್ತ ಮೆಟ್ಟಿಲುಗಳೆಂದೇ ಕರೆಯಲ್ಪಡುತ್ತಿವೆ. ಹಲವು ಹಂತಗಳಲ್ಲಿ ಈ ಲೇಖಕರಿಬ್ಬರೂ ಅವಧೂತರಂತೆಯೇ, ಸಂತರಂತೆಯೇ ಪ್ರಶ್ನಾತೀತರಾಗಿ ತಮ್ಮ ಚಾರಿತ್ರ್ಯವನ್ನು ಉಳಿಸಿಕೊಂಡಿದ್ದಾರೆ. 'ದಲಿತತ್ವ'ವಿನ್ನೂ ಪೂರ್ಣ ಆಕಾರ ಪಡೆಯುವಲ್ಲಿ ಈ ಲೇಖಕರಿಬ್ಬರ ಬದ್ಧತೆ, ಹಾಗೂ ಹೊಸ ಆಶಯಗಳು ಪೂರ್ಣಪ್ರಮಾಣದ ಮಾದರಿಗಳಾಗಿ ನಿಂತಿರುವಂತಹವು.

ಸಾಹಿತ್ಯ ನಿರ್ಮಿತಿಯ ಪ್ರಶ್ನೆ ಬಂದಾಗ ಸಿದ್ಧಲಿಂಗಯ್ಯನವರಂತೆಯೇ ಪದ್ಯ ಬರೆಯುವುದನ್ನು, ದೇವನೂರ ಮಹಾದೇವರಂತೆ ಕತೆ ಬರೆಯುವುದನ್ನು ಕೆಲವರು ಪ್ರಜ್ಞಾ

**ಡಾ|| ಎಚ್. ಎಲ್. ಪುಷ್ಪ**

ಪೂರ್ವಕವಾಗಿಯೂ ಇನ್ನೂ ಕೆಲವರು ಅಪ್ರಜ್ಞಾಪೂರ್ವಕವಾಗಿಯೂ ಒಪ್ಪಿಕೊಂಡಿದ್ದರು. ಇಲ್ಲಿ ಆಕೃತಿ ಹಾಗೂ ಮಾದರಿಗಳ ಅನ್ವೇಷಣೆಗಿಂತ ನೋವು, ಅಪಮಾನಗಳ ಜೀವನ ವಿಧಾನವೇ ಒಂದು ಮಾದರಿಯೆಂಬಂತೆ ಅನಾವರಣಗೊಂಡಿತು. ದಲಿತ ಸಾಹಿತ್ಯದ ಎರಡನೆಯ ತಲೆಮಾರಿಗೆ ಬಂದಾಗ ನೋವು, ವಿಷಾದಗಳನ್ನು ಒಡಲಲ್ಲಿ ಇರಿಸಿಕೊಂಡು ಚರಿತ್ರೆಯಲ್ಲಿ ಆದ ತಪ್ಪನ್ನು ಸರಿಪಡಿಸುವ ದೂರದರ್ಶಿತ್ವವನ್ನು ತೋರುವ ಮನಃಸ್ಥಿತಿಯೊಂದು ನಿರ್ಮಿತಗೊಂಡಿತ್ತು. ಡಾ|| ಎಲ್. ಹನುಮಂತಯ್ಯನವರ ಕಾವ್ಯವನ್ನು ಈ ಹಿನ್ನೆಲೆಯಲ್ಲಿ ನೋಡುವುದು ಸೂಕ್ತ ಪ್ರಯತ್ನವಾಗುತ್ತದೆ. ಕಾವ್ಯಕ್ಕಿರುವ ಸಾಮಾಜಿಕ ಜವಾಬ್ದಾರಿಯನ್ನು ಗುರುತಿಸಿದ ಸಂದರ್ಭದಲ್ಲಿ ಹನುಮಂತಯ್ಯನವರ ಕಾವ್ಯರಚನೆ ಆರಂಭವಾಗಿದ್ದು ಕಾವ್ಯರಂಜನೆಗಲ್ಲ; ಅದಕ್ಕೊಂದು ಸಾಮಾಜಿಕ ಜವಾಬ್ದಾರಿಯಿದೆ ಎಂಬ ಅರಿವು ಇಲ್ಲಿನ ಕವಿತೆಗಳಲ್ಲಿವೆ. ಈ ಹಂತದಲ್ಲಿ ಕಾವ್ಯ ರಚಿಸ ಹೊರಟವರು ಇದೇ ಎಚ್ಚರವನ್ನು ಅತಿಸಹಜವೆಂಬಂತೆ ತಮ್ಮ ಮೇಲೆ ಆರೋಪಿಸಿಕೊಂಡಿದ್ದರು.

ಎಲ್.ಎಚ್. ಅವರು ಒಟ್ಟು ನಾಲ್ಕು ಕವನಸಂಕಲನಗಳನ್ನು ಹೊರತಂದಿದ್ದು, ಅವು ಕ್ರಮವಾಗಿ ಕಪ್ಪುಕಣ್ಣಿನ ಹುಡುಗಿ, ಅವ್ವ, ಅಕ್ಷಾರ ಅಕ್ಷಾರವೇ ಹಾಗೂ ಕರ್ಣರಾಗ ಆಗಿವೆ. ಕರ್ಣ, ಕರ್ಣನ ಕವಚ, ಕುಲಬಾಂಧವರಿದ್ದೂ ಅನಾಥನಾದ ಕರ್ಣ, ಅನ್ನದ ಹಂಗಿಗೆ ತನ್ನನ್ನು ತೆತ್ತುಕೊಂಡ ಕರ್ಣ, ದುರಂತ ಪಾತ್ರವಾಗಿ ಬಹುಚರ್ಚಿತಗೊಂಡ ಕರ್ಣ ಎಲ್.ಎಚ್. ಅವರಿಗೆ ಕಾಡಿದ ಕುಲಸಂಬಂಧಿ ಸಂಕೇತಗಳಾಗಿವೆ. ಹೀಗಾಗಿ ಇವರ ಈವರೆಗಿನ ಸಮಗ್ರ ಕಾವ್ಯದಲ್ಲಿ ಹೊರಹೊಮ್ಮುವುದು ತನ್ನ ನೆಲ ಹಾಗೂ ಜನರ ನಡುವೆ ಪರಕೀಯನಾಗಿ ನಿಂತ ಕರ್ಣನ ಅಸಹಾಯಕತೆ. ಇದು ಚರಿತ್ರೆ ಹಾಗೂ ಪುರಾಣವನ್ನು ಅವಲೋಕಿಸುತ್ತಲೇ ವರ್ತಮಾನವನ್ನು ಒಂದು ನಿರ್ದಿಷ್ಟ ಅಂತರದಲ್ಲಿ ನಿಂತು ಸಿಂಹಾವಲೋಕನ ಮಾಡುವ ಕ್ರಮವಾಗಿದೆ. ಬೆನ್ನ ಹಿಂದೆ ತನ್ನ ಜನ, ಮುಂದೆ ನೆಲ, ಕುಲವುಳ್ಳ ಜನರ ನಡುವೆ ನಿಂತ ಕವಿಯ ಅಸಹಾಯಕತೆ ಕವಿತೆಗಳ ಹಿಂದೆ ಮನೆಮಾಡಿದೆ.

ಪ್ರತಿಯೊಬ್ಬ ಕವಿ ತನ್ನ ಮೊದಲ ಸಂಕಲನದಲ್ಲೇ ತನ್ನ ವ್ಯಕ್ತಿತ್ವವನ್ನು ಹೆಚ್ಚು ಕಡಿಮೆ ರೂಪಿಸಿಕೊಂಡಿರುತ್ತಾನೆ. ಮುಂದೆ ಬರುವ ಸಂಕಲನದಲ್ಲಿ ಈ ವ್ಯಕ್ತಿತ್ವದ ವಿಸ್ತರಣೆ ಮುಂದುವರಿಯುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಎಲ್.ಎಚ್. ಅವರ ಮೊದಲ ಸಂಕಲನದ 'ಅಟ್ಟ ಹತ್ತಬೇಡ' ಎಂಬ ಕವಿತೆಯನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು. ಅಜ್ಜ ಮತ್ತು ಮಗನ ಸಂಭಾಷಣೆ ರೂಪದ ಕವಿತೆಯಲ್ಲಿ ಪೂರ್ವದ ಸಿದ್ಧದಾರಿಯನ್ನು ಅತಿಕ್ರಮಿಸಿಯೇ ಹೊಸ ದಾರಿಯನ್ನು ಹಿಡಿಯಬೇಕಾದ ಅನಿವಾರ್ಯತೆಯನ್ನು ಕವಿ ಗುರ್ತಿಸುತ್ತಾರೆ. ಹೊಸ ಸಮಾಜದ ಕನಸು ಕಂಡವರು ''ಅಟ್ಟ ಹತ್ತದವರು ಬೆಟ್ಟ ಹತ್ತುತ್ತಾರೆಯೇ'' ಎಂಬ ಪ್ರಶ್ನೆಯನ್ನು ನಿರಾಕರಿಸಿ ಒಮ್ಮೆಲೇ ಬೆಟ್ಟ ಹತ್ತುವ ಛಲವನ್ನು ಇಲ್ಲಿ ಸ್ಥಾಪಿಸಿಕೊಳ್ಳಬೇಕಿದೆ :

# ಇದ್ದರೆ ಇರಬೇಕು ಈ ಮರದಂತೆ

ಎಲ್. ಹನುಮಂತಯ್ಯನವರು ಈವರೆಗೆ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕಪ್ಪು ಕಣ್ಣಿನ ಹುಡುಗಿ, ಅವ್ವ, ಅಕ್ಷಾರ ಅಕ್ಷಾರವೇ, ಕರ್ಣರಾಗ ಎಂಬ ಕವನ ಸಂಕಲನಗಳೇ ಅಲ್ಲದೆ 'ಅಂಬೇಡ್ಕರ್' ನಾಟಕ ಮತ್ತು 'ಕಥಾಕಥನ' ಸಂಶೋಧನ ಪ್ರಬಂಧಗಳು ಪ್ರಕಟವಾಗಿವೆ. ಕಳೆದ ಹಲವಾರು ವರ್ಷಗಳಿಂದ ಕರ್ನಾಟಕದ ಜನಪರ ಚಳವಳಿಗಳಲ್ಲಿ ಸಕ್ರಿಯವಾಗಿರುವ ಇವರು ಮೂಲತಃ ಕವಿ. ಬೀದಿಯ ಹೋರಾಟಗಳಲ್ಲಿದ್ದವರ ಅಂತರಂಗದ ಕವಿ ಸದಾ ಎಚ್ಚರವಾಗಿರುತ್ತಾನೆ. ಬಂಡಾಯ ಸಾಹಿತ್ಯದ ಅಬ್ಬರದಲ್ಲಿಯೂ ಅನುಭವಗಳ ಚಿಪ್ಪಿನೊಳಗಿಂದ ಬಗೆದು ಹೊರಬಂದ ಬಸವನಹುಳುವಿನಂತೆ ಕಾವ್ಯದ ಸಾಲುಗಳನ್ನು ಹೆಣೆಯುತ್ತಾನೆ. ಎಲ್. ಹನುಮಂತಯ್ಯನವರ ಕೃತಿಗಳಲ್ಲಿ ದಲಿತ ಸಂವೇದನೆಯೊಂದು ಒಳಝರಿಯಾಗಿ ಕೆಲಸ ಮಾಡಿರುವುದು ಉದ್ದಕ್ಕೂ ಕಾಣುತ್ತದೆ.

ಹೌದಜ್ಜ
ಅಟ್ಟ ಹತ್ತದವನು
ಬೆಟ್ಟ ಹತ್ತುತ್ತಾನೆಂದು ತೋರಿಸಬೇಕಾಗಿದೆ
ಅಟ್ಟ ಮನುಷ್ಯ ಕಟ್ಟಿರುತ್ತಾನೆ
ಬೆಟ್ಟ ಅವನಿಂದ ನಿರ್ಮಿತವಲ್ಲ
ಅದಕ್ಕೆ ಅಟ್ಟ ನೋಡದವೆ ಬೆಟ್ಟ ಹತ್ತುತ್ತೇನೆ
ಮೇಲೇರಿ ನಿಲ್ಲುತ್ತೇನೆ.

(ಅಟ್ಟ ಹತ್ತಬೇಡ)

'ಊರಿಗೊಂದು ಪತ್ರ' – ಹೊಸ ಸಮಾಜದ, ಹೊಸ ಬಾಳ್ವೆಯ ಕನಸು ಹೊತ್ತ ಮತ್ತೊಂದು ಕವಿತೆ. ಈ ಕವಿತೆಯಲ್ಲಿ ನಾಟಕೀಯ ಗುಣ, ತಂದೆಯೊಂದಿಗೆ ಪತ್ರದೊಂದಿಗೆ ಮಾತನಾಡುವ ತಂತ್ರ ಸಹಜ ಧ್ವನಿಯಿಂದ ಕೂಡಿವೆ. 'ನನಗೊಂದು ಕೆಲಸ ಸಿಕ್ಕಿದೆ' ಎಂಬ ಕವಿತೆಯ ಸಾಲು ಕವಿತೆಯುದ್ದಕ್ಕೂ ಅನುರಣನಗೊಂಡು ಆತ್ಮವಿಶ್ವಾಸದ ಮೆಟ್ಟಿಲೆಂಬಂತೆ, ಕಳೆದ ಬದುಕಿನ ಕರಿನೆರಳಿಂದ ಬಿಡುಗಡೆ ಎಂಬಂತೆ ಬಳಕೆಯಾಗುತ್ತದೆ. ಕೆಲಸ ಸಿಕ್ಕಿದ್ದು, ಸಂಘ ಸೇರಿದ್ದು, ಹೊಸ ದಾರಿ ಕಂಡಿದ್ದು ವಿಕಾಸದ ಪಥವೆಂಬಂತೆ ಚಿತ್ರಿತವಾಗುತ್ತವೆ. ಇಲ್ಲಿ ಹೋರಾಟದ ಸಂಭ್ರಮ ಹಾಗೂ ಬಿಡುಗಡೆಯ ಬಯಕೆ ಅದಮ್ಯವಾಗಿದೆ. ಸಂಘಟನೆಗಳ ಶಕ್ತಿಯ ಹೊಸ ಅರಿವು ಇಲ್ಲದ್ದು ಅದು ಈಗಾಗಲೇ ಬೆಳೆದ ಮರವೊಂದು ತನ್ನ ಬೇರನ್ನು ಬದಲಿಸಿಕೊಳ್ಳುವ ಪ್ರಯಾಸದ, ಆದರೆ ಆಗಲೇಬೇಕಾದ ಕೆಲಸಕ್ಕೆ ಕೈಹಾಕುವಂತೆ ಎಚ್ಚರಗೊಂಡಿದೆ.

'ಕರ್ಣ' ಮತ್ತು 'ಏಕಲವ್ಯ' ಮಹಾಭಾರತದಲ್ಲಿ ಬಹು ಚರ್ಚಿತವಾದ, ಪೌರುಷವಿದ್ದೂ ಸಾಮರ್ಥ್ಯವಿದ್ದೂ ಸೋಲನ್ನು ಅನುಭವಿಸಿದ ಪಾತ್ರಗಳಾಗಿದ್ದು ಸಂಕೇತ ಗಳೆಂಬಂತೆ ಬಳಕೆಯಾಗುತ್ತಿವೆ. ಕರ್ಣಕುಂಡಲ ಹಾಗೂ ಕರ್ಣಕವಚ ಕರ್ಣನ ಹುಟ್ಟಿನಿಂದಲೇ ಬಂದ ಕೊಡುಗೆಗಳು. 'ಕವಚ' ಎನ್ನುವ ಪದ ಹೊರಗಿನ ಘಾತುಕ ಶಕ್ತಿಗೆ ತಡೆಯೊಡ್ಡಿ ಜೀವ ಉಳಿಸುವಂಥದ್ದು ಎಂಬ ಅರ್ಥ ಪಡೆದಿದೆ. ಆದರೆ ಎಲ್.ಎಚ್. ಈ ಪ್ರತಿಮೆಯನ್ನು ಒಡೆದು ಅದರ ಜಾಗದಲ್ಲಿ ಮರುಪ್ರತಿಮೆಯನ್ನು ಸೃಷ್ಟಿಸುತ್ತಾರೆ. 'ಕವಚ' ಎನ್ನುವ ಕವಿತೆಯಲ್ಲಿ ಹುಟ್ಟಿನೊಂದಿಗೆ ಬಂದ ಜಾತಿಯೇ ಕವಚವಾಗುತ್ತದೆ. ದೇಹದ ಒಂದೊಂದು ಭಾಗ ಕತ್ತರಿಸಿ ಒಗೆದರೂ ಈ ಕವಚ ಬೇರ್ಪಡುವುದಿಲ್ಲ. ಈ ಕವಚವನ್ನು ಎಷ್ಟೋ ಮಹಾತ್ಮರು ಕಳಚಿ ಶಾಸ್ತ್ರದ ವಸ್ತ್ರದೊಳಗೆ ಸುತ್ತಿ ಎಸೆದರೂ ಅಷ್ಟೇ ಬೇಗ ಮಣ್ಣ ಕಣದಲ್ಲಿ ಬೆರೆತು ಮತ್ತೆ ಮನುಷ್ಯನ ದೇಹವನ್ನು ಪ್ರವೇಶಿಸುತ್ತದೆ. ಬಸವ, ಬುದ್ಧ, ರಾಮಾನುಜರು ಬಂದು ಹೋದರೂ ಈ ಕವಚ ಭದ್ರವಾಗಿಯೇ ಸಮಾಜವನ್ನು ಅಪ್ಪಿಕೊಂಡಿದೆ. ಈ ಜಾತಿಯನ್ನು ಸೂಚಿಸುವ ಕವಚ 'ಕಾಲಾಂತರಗಳ ಹೆಜ್ಜೆಗಳ ಲಾಳ', 'ನಾಳೆಯ ನಾಲಿಗೆ ಸುಡುವ ದರ್ಭೆ' ಎಂಬ ಸಮರ್ಥ ಚಿತ್ರಣಗಳಲ್ಲಿ ಅಡಗಿಹೋಗಿದೆ.

ವಾಸ್ತವ ಜಗತ್ತಿನೊಂದಿಗೆ ಇರುವ ಸಂಬಂಧವನ್ನು, ಸಂಬಂಧಪಟ್ಟವರನ್ನು ವಿಮರ್ಶೆಗೆ ಒಡ್ಡುವ ಸ್ವವಿಮರ್ಶಾ ನಿಲುವು ಪಾರದರ್ಶಕತೆಯನ್ನು ಹೊಂದಿರುವಂಥದ್ದಾಗಿದೆ. ಇಲ್ಲಿನ ನಾಯಕ ಅಕ್ಷರದ ಕಾಳನ್ನು ಕೈಲಿ ಹಿಡಿದು ಲೋಕದ ಎಲ್ಲ ಸಂಗತಿಗಳಿಗೆ ಮುಖಾಮುಖಿಯಾಗುತ್ತಾನೆ. ಆದರೆ ಈ ಮುಖಾಮುಖಿ ಅಷ್ಟು ಸಲೀಸಲ್ಲ. ಅದು ವಾಸ್ತವ ಲೋಕದ ಪರಿಸ್ಥಿತಿ ಕಂಡು ಕ್ಷಣಕ್ಷಣಕ್ಕೂ ನೊಂದು ಹಿಡಿಯುತ್ತದೆ. ಅಸಹಾಯಕವಾಗಿ ತಬ್ಬಿಬ್ಬುಗೊಳ್ಳುತ್ತದೆ. ತಾನು ಕವಿ ಎಂಬ ಸತ್ಯಲೋಕದ ಸತ್ಯಗಳನ್ನು ಒಪ್ಪಿ ಕೊಳ್ಳುವಾಗ ತಕರಾರು ಮಾಡುತ್ತದೆ. ಸಾರ್ವಜನಿಕವಾಗಿ ತಮ್ಮನ್ನು ಗುರ್ತಿಸಿಕೊಂಡವರಿಗೆ ಈ ಸ್ವವಿಮರ್ಶೆ ಅತ್ಯಗತ್ಯ ವಾಗಿದ್ದು, ಅದು ಅವರನ್ನು ಜೀವಂತವಾಗಿಡುತ್ತದೆ. 'ಕವಿತೆ ಬರೆಯುತ್ತೇನೆ' ಕವಿತೆಯಲ್ಲಿ ತನ್ನನ್ನು ಕವಿ ಎಂದು ಕರೆದಾಗ ಸಂತೋಷದಿಂದ ಒಪ್ಪಿಕೊಂಡವನಿಗೆ ಕವಿತೆ ಓದುವಾಗ ತನ್ನವರನ್ನು ನೆನೆದು ಮೂಡುವ ಖಿನ್ನತೆ ಇನ್ನೂ ಜಡವಾಗಿಲ್ಲ, ಜೀವಂತ ಎಂಬುದನ್ನು ನೆನಪಿಸುತ್ತದೆ :

*ಅಕ್ಷರ ಬಲ್ಲವರು*
*'ಕವಿ'ಯೆಂದು ಕರೆಯುವರು*
*ಸಂಸ್ಕೃತಿ ಇಲಾಖೆಯೂ*
*ಕವಿತೆ ಓದಲು ಕರೆಯುತ್ತದೆ*
*ಆಗ ಖುಷಿಯಾಗುತ್ತದೆ.*
*ವಿಶೇಷ ಘಟಕದ ಕವಿಗೋಷ್ಠಿಗೆ*
*ಬರಬೇಕೆಂದು ಪತ್ರ ಬಂದಾಗ*
*ಖಿನ್ನನಾಗುತ್ತೇನೆ;*
*ನನ್ನವರ ನೆನೆಯುತ್ತೇನೆ.*

(ಊರಿಗೊಂದು ಪತ್ರ).

ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಸಂಘಟನೆ, ಸಾಹಿತ್ಯಕ್ಕೆ ರಾಜಕಾರಣ ಅನಿವಾರ್ಯವೆಂಬಂತೆ, ಪರ್ಯಾಯವೆಂಬಂತೆ ಒಪ್ಪಿಕೊಳ್ಳಲಾಯಿತು. ಏರುಪೇರು ಗಳಿಂದ ಕೂಡಿದ ಸಮಾಜದ ಬದಲಾವಣೆಗೆ 'ರಾಜಕೀಯ, ರಾಜಕಾರಣ'ವೂ ಒಂದು ಪರಿಹಾರವೆಂಬಂತೆ ಚಿಂತನೆ ನಡೆಯಿತು. ಬಂಡಾಯ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಲ್. ಎಚ್. ಅದರ ಇತಿಮಿತಿಗಳನ್ನು ಹತ್ತಿರದಿಂದಲೇ ಕಂಡವರು. ರಾಜಕಾರಣದ ನಡುವೆಯೂ ಮಾನವೀಯ ಸಂಬಂಧಗಳನ್ನು ಗೌರವಿಸುತ್ತಲೇ ಬಂದವರು. ವಿಧಾನಸೌಧವನ್ನು ಹೊರಗಿನಿಂದಲೂ, ಒಳಗಿನಿಂದಲೂ ನೋಡಬಲ್ಲ ಕಣ್ಣುಳ್ಳವರು. ಜನಸಾಮಾನ್ಯನಾಗಿ ಅಧಿಕಾರ ಕೇಂದ್ರವನ್ನು ನೋಡುವುದಕ್ಕೂ, ಅಧಿಕಾರ ಕೇಂದ್ರ ದೊಳಗಿನಿಂದ ರಾಜಕಾರಣಿಯಾಗಿ ನೋಡುವುದಕ್ಕೂ ಅಪಾರ ವ್ಯತ್ಯಾಸವಿದೆ.

*ಪಕ್ಕದಲ್ಲಿ ನಿಂತ ಸಚಿವರೆಲ್ಲರು*
*ಮಾತಿನ ಮಳೆಗರೆದು ಆಲಿಕಲ್ಲುಗಳ*
*ಉದುರಿಸಿ ಮನಸುಗಳನ್ನು*
*ಬಂಡೆ ಮಾಡಿಕೊಂಡಿದ್ದು ಕಂಡೆ.*
*ಒಂದರೆಕ್ಷಣದಲ್ಲಿ ಇಷ್ಟೆಲ್ಲ*
*ಎಲ್ಲಿ ನಡೆಯುತ್ತಿದೆಯೆಂದು*
*ಹೊರಗೆ ಓಡಿಬಂದು ತಿರುಗಿ*
*ನೋಡಿದರೆ ವಿಧಾನಸೌಧವೆಂಬ*
*ಕಲ್ಲಿನ ಕಟ್ಟಡ.* (ಪ್ರತಿಮೆ)

ಈ ಸಾಲುಗಳು ವಿಧಾನಸೌಧದೊಳಗಿನ ಕಲ್ಲುಮನಸ್ಸಿನ ರಾಜಕೀಯವನ್ನು ಯಥಾರ್ಥತೆಯಲ್ಲಿ ಚಿತ್ರಿಸುತ್ತವೆ. ಇಲ್ಲಿ ಕಾಗೆ ಕಲ್ಲಾಗುತ್ತದೆ, ಕೋಗಿಲೆಯ ಕಂಠಕ್ಕೆ ಬಾಣ ಬಿಡ ಲಾಗುತ್ತದೆ, ಕಲ್ಲು ನವಿಲು ಮೈದುಂಬಿ ಮುಖ್ಯಮಂತ್ರಿಯ ಎದುರು ಕುಣಿಯುತ್ತದೆ. ಇಂತಹ ಸೌಧದಿಂದ ಗಾಬರಿ ಗೊಂಡು ಹೊರಗೆ ಬಂದರೆ ಎದುರಾಗುವುದು ಕಲ್ಲಿನ ರೂಪದಲ್ಲಿ ನಿಂತ ಅಂಬೇಡ್ಕರ್. ಆ ಶಿಲ್ಪ ತಾನೇ, ಆ ಪ್ರತಿಮೆ ತನ್ನದೇ ಎಂಬ ಅರಿವು ರಾಜಕಾರಣದ ನಡುವೆಯೂ ಕಳೆದುಕೊಳ್ಳದ ಆತ್ಮವಿಮರ್ಶೆಯನ್ನು ಚಿತ್ರಿಸುತ್ತದೆ.

ಎಲ್.ಎಚ್. ಅವರು ಕಾವ್ಯವನ್ನು ಬಂಡಾಯದ ನೆಲೆಯಲ್ಲಿ ಆರಂಭಿಸಿದರೂ ದಲಿತಕಾವ್ಯದ ಪ್ರಜ್ಞೆಯ ಇತಿಮಿತಿಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸುತ್ತಾರೆ. ಎರಡೂ ಸಂಘಟನೆಗಳನ್ನು ತನ್ನ ಉಸಿರಾಗಿಸಿಕೊಂಡ ಕಾವ್ಯ ಒಂದು ಕಾಲಘಟ್ಟಕ್ಕೆ ಸ್ಥಗಿತಗೊಳ್ಳುವುದಿಲ್ಲ. ಡಾ|| ಸಿದ್ಧಲಿಂಗಯ್ಯ ದಲಿತಕಾವ್ಯದ ಆದಿಕವಿ ಎಂದು ಗುರ್ತಿಸಲ್ಪಟ್ಟಿದ್ದು ದಲಿತ ಲೋಕದ ಚಿತ್ರಣವನ್ನು ಕಾವ್ಯದ ಮುಖೇನ ಚಿತ್ರಿಸಿ ಹೋರಾಟದ ದಾರಿಯೊಂದನ್ನು ಯಶಸ್ವಿಯಾಗಿ ತೆರೆದಿಟ್ಟರು. ಅಲ್ಲಿಯವರೆಗೂ ಕಾವ್ಯದಲ್ಲಿ ಪ್ರಕಟವಾಗದ ಲೋಕವೊಂದು ಅನಾವರಣಗೊಂಡು ಓದುಗರು ಸಹಜವಾಗಿಯೇ ತಬ್ಬಿಬ್ಬು ಗೊಂಡರು. ವಿಮರ್ಶಕರು ಜಡಗೊಂಡ ವ್ಯವಸ್ಥೆ ಬಿಂಬಿಸುವ ಕಾವ್ಯಕ್ಕೆ ಸತ್ವ, ವೈವಿಧ್ಯತೆ ತುಂಬಿದ ಕಾವ್ಯವೆಂದು ಕರೆದರೆ ನೋವನ್ನುಂಡವರಿಗೆ ಈ ಅನಾವರಣ ಒಂದು ರೀತಿಯ ಬಿಡುಗಡೆಯ ಸಾಧ್ಯತೆಯಾಗಿ ತೋರಿತು. ಇಲ್ಲಿ ರೊಚ್ಚು, ಆವೇಶ, ಆರ್ಭಟ ಸಹಜವಾಗಿತ್ತು. ಎರಡನೆಯ ತಲೆಮಾರಿಗೆ ಬಂದಾಗ ಅದು ಸಂಘಟನೆಯಾಗಿ, ಚಳುವಳಿಯಾಗಿ, ಕ್ರಾಂತಿಗೀತೆಯಾಗಿ ತನ್ನ ಸ್ವರೂಪ ಪಡೆದುಕೊಂಡಿತು. ಕಾವ್ಯಕ್ಕೆ ಮಾರ್ದವತೆಯನ್ನು ಕೊಡುವ ಪ್ರಯತ್ನಗಳೂ ನಡೆದವು. ಈ ತಲೆಮಾರಿನಲ್ಲಿ ಸಹಜ ವಾಗಿಯೇ ಎಲ್.ಎಚ್. ಪ್ರಮುಖರಾಗಿ ಕಂಡುಬರುತ್ತಾರೆ. ಮೂರನೆಯ ತಲೆಮಾರಿನಲ್ಲಿ ಬಂದ ಸುಬ್ಬು ಹೊಲೆಯಾರ್, ಎನ್. ಕೆ. ಹನುಮಂತಯ್ಯ, ವಡ್ಡಗೆರೆ ನಾಗರಾಜ್ ಮತ್ತಿತರರು ದಲಿತ ಕಾವ್ಯದಲ್ಲಿ ಪುರಾಣಗಳನ್ನು ಮರುಸೃಷ್ಟಿಸುವ ಕೆಲಸಕ್ಕೆ ಕೈಹಾಕಿದ್ದಲ್ಲದೆ ಕೆಳವರ್ಗದ ವಚನಕಾರರು ಹಾಗೂ ವಚನಗಳನ್ನು ಸಮರ್ಥವಾಗಿ ಬಳಸಿಕೊಂಡರು.

ಈ ಅವಸ್ಥೆಯಲ್ಲಿಯೇ ಬುದ್ಧ ಹಾಗೂ ಬುದ್ಧನ ವಿಚಾರಧಾರೆಗಳು ಮತ್ತೆ ಮತ್ತೆ ಮರುಓದಿಗೆ ಒಳಪಟ್ಟವು. ಕವಿಯಾಗಿ ಏಕಾಂತ ಹಾಗೂ ಲೋಕಾಂತವನ್ನು ಕಾಪಾಡಿ ಕೊಳ್ಳುವ ಪ್ರಯತ್ನ ಈ ತಲೆಮಾರಿನಲ್ಲಿತ್ತು. ಅಗ್ರಹಾರ ಕೃಷ್ಣಮೂರ್ತಿ ಗುರುತಿಸುವಂತೆ 'ಏಕಾಂತ ಮತ್ತು ಲೋಕಾಂತ ಗಳ ಸಮತೂಕದ ಅರಿವು' ಇದಾಗಿತ್ತು. ಎಲ್.ಎಚ್. ಅವರ ಕಾವ್ಯದಲ್ಲಿ ಈ ಅರಿವನ್ನು ಪ್ರಮುಖ ಅಂಶವೆಂಬುದಾಗಿ ಅಗ್ರಹಾರ ಕೃಷ್ಣಮೂರ್ತಿ ಗುರ್ತಿಸುತ್ತಾರೆ.

ಚರಿತ್ರೆ, ಪುರಾಣವನ್ನು ಎಲ್.ಎಚ್. ಪ್ರವೇಶ ಮಾಡುವ, ಬಳಸುವ ರೀತಿ ಭಿನ್ನ ನೆಲೆಯದು. 'ನನ್ನೊಳ ಗೊಬ್ಬ ಬುದ್ಧ' ಮತ್ತು 'ಅಕ್ಕ' ಈ ರೀತಿಯ ಪ್ರಯತ್ನ ಗಳಾಗಿವೆ. ಬುದ್ಧನ ಸಾಧನೆಯನ್ನು 'ಆರಂಭ'ಕ್ಕೆ ಹೋಲಿಸುವ ಚಿತ್ರಣ ಹೊಸದೆನಿಸುತ್ತದೆ. ಕರುಣೆಯಿಲ್ಲದ, ಹತ್ತೆಂಟು ಕುಲಗಳು ತುಂಬಿದ ಭೂಮಿಯಲ್ಲಿ ನೇಗಿಲು ಹೂಡಿದ ವ್ಯವಸಾಯಗಾರ ಈ ಬುದ್ಧ. ಒಕ್ಕಲಿಗನಾದ ಇವನು ವಿವೇಕವೆಂಬ ಬೀಜ ಬಿತ್ತುತ್ತಿದ್ದಾನೆ.

*ಲೋಕ ಕೊಳೆತೊಳೆವ*
*ತವಕದಲಿ ಸುರಿದ ಮುಂಗಾರು*
*ಮಳೆಗೆ ಹೊನ್ನಾರು ಹಿಡಿದ ಒಕ್ಕಲಿಗ*
*ಊರ ಸುತ್ತಲಿನ ಸಕಲೆಂಟು ಜಾತಿಗಳ*
*ಹೊಲದೊಡೆಯರ ಆಲಯದಿ*
*ಪಟ್ಟೆಹೊಡೆದು ವಿವೇಕದ*
*ಬೀಜ ಬಿತ್ತಿದ ಅನುಭಾವಿ*

(ನನ್ನೊಳಗೊಬ್ಬ ಬುದ್ಧ).

ಇತಿಹಾಸ, ಪುರಾಣಗಳನ್ನು ಕವಿತೆಯ ಮೂಲಕ ಪ್ರವೇಶ ಮಾಡುವ ಕವಿ ಹೊರಬಂದ ನಂತರ ವರ್ತಮಾನವನ್ನು ಕಾಣಿಸಬೇಕಾಗುತ್ತದೆ. ಇದು ಒಬ್ಬ ಸಮರ್ಥ ಕವಿ ಅಗತ್ಯ ವಾಗಿ ಮಾಡಲೇಬೇಕಾದ ಎಚ್ಚರದ ಕೃಷಿಯೂ ಹೌದು. ತನ್ನ ನೆನಪಿನ ಪರಿಚಿತ ಜಗತ್ತನ್ನು ಚಿತ್ರಿಸುವಲ್ಲಿ ಕಾವ್ಯದ ಮೃದು ಲಾಲಿತ್ಯದ ಪದಗಳಿಗಿಂತ 'ಕಾಯಕವರ್ಗ' ಸೂಚಿಸುವ ಪದಗಳನ್ನು ಅರ್ಥಪೂರ್ಣವಾಗಿ ಇಲ್ಲಿ ಬಳಸಲಾಗಿದೆ. ಒಂದು ಜನಜೀವನದ ಘನತೆಯನ್ನು ಎತ್ತಿ ತೋರಿಸುವ ಪದಗಳ ಪ್ರಜ್ಞಾಪೂರ್ವಕ ಬಳಕೆ ಇದಾಗಿದೆ. ಈ ರೀತಿಯ ಪದಗಳ ಬಳಕೆ ಮತ್ತು ಆಯ್ಕೆ ವ್ಯಕ್ತಿ ವಿಶಿಷ್ಟತೆಯನ್ನು ತೋರುವಂತೆಯೇ ಸಂವಹನದ ಸಂದರ್ಭದಲ್ಲಿ ತೊಡಕಾಗಿಯೂ ಪರಿಣಮಿಸುವುದನ್ನು ನಾವು ಇಲ್ಲಿ ಗುರ್ತಿಸ ಬಹುದು. ಕನ್ನಡದ ಮತ್ತೊಬ್ಬ ಪ್ರಸಿದ್ಧ ಕವಿ ಎಸ್. ಜಿ. ಸಿದ್ಧರಾಮಯ್ಯ ದೇಸೀ ಪ್ರಜ್ಞೆಯನ್ನು ಸಮರ್ಥವಾಗಿ ಬಳಸಿಕೊಂಡರೂ ಸಂವಹನದ ಸಂದರ್ಭದಲ್ಲಿ ಈ ಪ್ರಜ್ಞೆ ತೊಡಕೆಂಬಂತೆ ಭಾಸವಾಗುವುದನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು.

'ಕರ್ಣರಾಗ' ಸಂಕಲನದ ಕವಿತೆಗಳು ಉಳಿದ ಮೂರು ಸಂಕಲನಕ್ಕಿಂತ ಲಯ ಮತ್ತು ಗೇಯತೆಯಲ್ಲಿ, ಪದಬಂಧ ಗಳಲ್ಲಿ ಹೆಚ್ಚು ನಿಖರತೆಯಿಂದ ಕೂಡಿವೆ. ಮೊದಲ ಸಂಕಲನದಲ್ಲಿನ ವಿಷಾದ, ನೋವು ಕವಿತೆಯಾಗುವಲ್ಲಿ ಆಕೃತಿಗಿಂತ ಸಂವೇದನೆಯ ಪ್ರಾಮಾಣಿಕ ಅಭಿವ್ಯಕ್ತಿಯತ್ತ ತುಡಿಯುತ್ತವೆ. ಎರಡು ಮತ್ತು ಮೂರನೆಯ ಸಂಕಲನಕ್ಕೆ ಬರುವಷ್ಟರಲ್ಲಿ ಕಾವ್ಯ ಹಾಗೂ ಸಂವೇದನೆಗಳು ಮಾಗಿರುವು ದಲ್ಲದೆ ಆ ಕೃತಿಯ ಕಡೆಗೆ, ಲಯದ ಕಡೆಗೆ ಗಮನ ಹರಿಸುತ್ತವೆ. ನಾಲ್ಕನೆಯ ಸಂಕಲನದಲ್ಲಿ ಸ್ಪಷ್ಟವಾಗಿ ಈ ಮಾರ್ಗಾಂತರ ಗೋಚರಿಸುತ್ತದೆ. ನಾಲ್ಕೂ ಸಂಕಲನಗಳ ಸ್ಥಾಯೀ ಭಾವ ಎಲ್ಲರೂ ಗುರ್ತಿಸಿರುವಂತೆ ವಿಷಾದವೇ. ಇಲ್ಲಿ ವಯಸ್ಸಿಗೆ ಅನುಗುಣವಾಗಿ ಸಂವೇದನೆಗಳೂ ಮಾಗಿದ್ದು ತನ್ನ ಗತದ ಬಗ್ಗೆ ಅರಿವಿದ್ದೂ ಭವಿಷ್ಯದ ಕಡೆಗೆ ಎಚ್ಚರದ ಕಣ್ಣು ನಾಟಿದ ಕವಿಯೊಬ್ಬನು ನಿಂತಿದ್ದಾನೆ. ನಾಳಿನ ಕನಸು ಇಲ್ಲಿ ಸ್ಪಷ್ಟವಾಗಿದೆ. 'ಎರಡು ತಲೆ ಹಕ್ಕಿ' ಕವಿತೆಯಲ್ಲಿ ಹಕ್ಕಿಯ ಹಾರುವಿಕೆಯ ವ್ಯಾಪ್ತಿ ಬಹು ದೊಡ್ಡದು. ಮುಗಿಲಲ್ಲೂ ಜಲದಲ್ಲೂ ಚಲಿಸಬಲ್ಲ ಈ ಹಕ್ಕಿಗೆ ದೊರೆಯಾಗುವ ಕನಸು, ಗರಿಹರಿದ ಗೂಡಿನಲ್ಲೂ ಮರಿಮಾಡುವ ಆಸೆ. ಹಕ್ಕಿ ಇಲ್ಲಿ ಪ್ರತಿಮೆಯಷ್ಟೇ. ಎಲ್ಲೆಂದರಲ್ಲಿ ಹೊಂದಿಕೊಳ್ಳಬಲ್ಲ, ಆಯಾ ಸಂದರ್ಭ ಪರಿಸರಗಳನ್ನು ಗೆಲ್ಲಬಲ್ಲ ಛಾತಿ ಈ ಹಕ್ಕಿಗಿದೆ :

ದಣಿ ಸಂಗ ತೊರೆದು ದೊರೆಯಾಗೋ ತವಕ
ಗರಿಹರಿದ ಗೂಡಿನಲು ಮರಿ ಮಾಡೋ ಮರುಕ
ಏಳು ಸುತ್ತಿನ ಕೋಟೆ ಮೆಟ್ಟಿಲಿಲ್ಲದೆ ಏರಿ
ಮಾರಿಗುಡಿ ಬಯಲಲ್ಲಿ ಲಯವಾದ ಹಕ್ಕಿ

(ಎರಡು ತಲೆ ಹಕ್ಕಿ)

'ಇವ ನಮ್ಮವ ಇವ ನಮ್ಮವ' ಕರ್ಣರಾಗ ಸಂಕಲನದ ಇಂದಿನ ಸ್ಪಷ್ಟ ರಾಜಕೀಯ ವಾತಾವರಣ ಚಿತ್ರಿಸುವ ಕವಿತೆ. ರಾಜಕೀಯವೆಂಬ ಕಬಂಧ-ಬಾಹುವಿನಲ್ಲಿ ಸಾಮಾಜಿಕ ಕಳಕಳಿಗಳೂ, ತಮ್ಮವರ ಬಗೆಗಿನ ಕಾಳಜಿಗಳೂ ಸದ್ದಿಲ್ಲದ ಧ್ವನಿ ಕಳೆದುಕೊಳ್ಳುವುದನ್ನು ಈ ಕವಿತೆ ಚಿತ್ರಿಸುತ್ತದೆ. ದಲಿತರ ಪ್ರತಿನಿಧಿಯೆನಿಸಿಕೊಂಡ ಕವಿತೆಯ ನಾಯಕ ಬಸವಣ್ಣ ಗುಡಿಯ ಉದ್ಘಾಟನೆಯಲ್ಲಿ ತನ್ನವರನ್ನು ಸಂಧಿಸ ಲಾರದೆ ಮಧ್ಯವರ್ತಿಗಳ ಕುತಂತ್ರದಿಂದಾಗಿ ದೂರ ಉಳಿಯುವ ವಿಷಾದವನ್ನು ಚಿತ್ರಿಸುತ್ತದೆ.

ಬಹುಪಾಲು ವಿಮರ್ಶಕರು ಚರ್ಚಿಸಿದಂತೆ ಎಲ್.ಎಚ್. ಅವರ ಕಾವ್ಯದಲ್ಲಿ ವಿಷಾದ ಸ್ಥಾಯೀಭಾವ. ಆ ವಿಷಾದ ವನ್ನು ಕಟ್ಟಿಕೊಡುತ್ತಲೇ ಮುಂದಿನ ಕ್ರಿಯೆಗೆ ಸಿದ್ಧವಾಗುವ ಅಥವಾ ತನ್ನ ಓದುಗರನ್ನು ವಾಸ್ತವದ ಕಡೆಗೆ ಕೊಂಡೊಯ್ಯುವ ತಂತ್ರವನ್ನು ಲೇಖಕರು ಇಲ್ಲಿ ಅನುಸರಿಸುತ್ತಾರೆ. ವಿಷಾದ ವನ್ನು ನುಂಗಿನಿಂತು ನಾಳಿನ ಜಗತ್ತನ್ನು ಸುರಕ್ಷಿತ ದಡದ ಕಡೆಗೆ ಕೊಂಡೊಯ್ಯುವ ದೂರಗಾಮಿತನ ಇಲ್ಲಿ ಕಂಡು ಬರುತ್ತದೆ. ಹೀಗಾಗಿ ಬಸವಣ್ಣನ ಗುಡಿಯಲ್ಲಿ ನಿಂತು ತನ್ನೆಡೆಗೆ ಬರುವ ತನ್ನವರು, ಅವರನ್ನು ತಡೆವ ಇನ್ನಿತರರನ್ನು ಸಾವಧಾನವಾಗಿ ಗಮನಿಸಬಲ್ಲರು. ಎಂತಹ ನೋವಿನಲ್ಲೂ, ವಿಷಾದದಲ್ಲೂ ತಾಳ್ಮೆಗೆಡದ ಪ್ರವೃತ್ತಿಯೇ ಕವಿತೆಗೊಂದು, ನಾಯಕತ್ವಕ್ಕೊಂದು ಅರ್ಥಪೂರ್ಣ ಚೌಕಟ್ಟನ್ನು ತಂದು ಕೊಟ್ಟಿದೆ. ಕವಿಯ ಒಟ್ಟು ಆಶಯವನ್ನು 'ಈ ಮರದಂತೆ' ಎಂಬ ಕವಿತೆಯಲ್ಲಿ ಕಾಣಬಹುದು. ಪ್ರಕೃತಿಯಿಂದ ಗಾಳಿ, ಬೆಳಕು, ನೀರನ್ನು ಹೀರಿ ಬೇರಿಗೆ ಕಳಿಸಿ ತನ್ನನ್ನು ಒಣಗದಂತೆ ಕಾಪಾಡಿಕೊಳ್ಳುವ ಕಲೆ ಮರಕ್ಕೆ ಪ್ರಕೃತಿದತ್ತವಾದುದು. ಹೀಗಾಗಿ ಕವಿಯ ಆಸೆ ಇದ್ದರೆ ಇರಬೇಕು ಈ ಮರದಂತೆ ಎಂಬುದಾಗಿ, ಕಡಿದರೂ, ಬಡಿದರೂ ಬಲ್ಲವರ ಜೊತೆ ಬದುಕುವ ಈ ಬದುಕಿನ ಲೀಲೆ ತೂರೆಯಲಾರದಂತಹ ದ್ದಾಗಿದೆ, ಅನಿವಾರ್ಯವೂ ಆಗಿದೆ, ನೆಲೆ ನಿಂತು ಗೆಲ್ಲುವುದೂ ಆಗಿದೆ ಎಂಬುದು ಇಲ್ಲಿನ ಕವಿತೆಗಳ ಒಟ್ಟು ಆಶಯವಾಗಿದೆ :

ಇದ್ದರೆ ಇರಬೇಕು ಈ ಮರದಂತೆ
ಕೊಂಬೆರೆಂಬೆಗಳ ಕಡಿದರೂ ಚಿಗುರುವಂತೆ
ಬಿಸಿಲ ತಾಪವ ಹೀರಿ ತಂಪನೀವಂತೆ
ಭೂಮಿ ಕುಸಿದು ಬಯಲು ಬಸಿದು ಉರುಳಿದರೂ
ಕಿಟಕಿ ಬಾಗಿಲುಗಳಾಗಿ ಮರುಜನ್ಮವೆತ್ತಿ
ದಶಕಗಳು ಜೀವಂತ ಬಲ್ಲವರ ಜೊತೆ ಬದುಕುವಂತೆ

(ಈ ಮರದಂತೆ)

ಡಾ|| ಎಚ್. ಎಲ್. ಪುಷ್ಪ
[illegible], 'ಶ್ರೀಮಾತಾ', [illegible]
ಬೆಂಗಳೂರು - [illegible]

# ಕಾಂಕ್ರೀಟ್ ಕಾಡಿನಲ್ಲೂ ಸಾವಯವ ಕೃಷಿಕ



ವೃತ್ತಿಯಿಂದ ಇಂಜಿನಿಯರ್ ಆದ ಶ್ರೀ ಜಿ. ಗಿರಿಗೌಡರು ಎರಡು ವರ್ಷದ ಹಿಂದೆ ಬೀದಿಯಲ್ಲಿ ಯಾರೋ ಬಿಸುಡಿದ್ದ ಮೂರು ನುಗ್ಗೆ ಕಡ್ಡಿಗಳನ್ನು ಮನೆಗೆ ತಂದು ತಮ್ಮ ಖಾಲಿ ಸೈಟಿನಲ್ಲಿ ನೆಟ್ಟು ಪೋಷಿಸಲು ಆರಂಭಿಸಿದರು. ಒಂದೇ ವರ್ಷದಲ್ಲಿ ಆ ಮೂರೂ ಗಿಡಗಳು ಬೆಳೆದು ಕಾಯಿ ನೀಡಲಾರಂಭಿಸಿದುವು. ಇವರು ಬೆಳೆಯುತ್ತಿರುವ ನುಗ್ಗೆಕಾಯಿಯ ವಿಶೇಷವೆಂದರೆ ಅದು ಸುಮಾರು ಎರಡು ಮೀಟರ್ ಉದ್ದದವರೆಗೂ ಬೆಳೆಯುವುದು. ಹೀಗಾಗಿ ಅವರು ನುಗ್ಗೆಕಾಯಿ ಗಿರಿಗೌಡರೆಂದೇ ಹೆಸರು ಮಾಡಿದ್ದಾರೆ. ನುಗ್ಗೆಯೊಂದಿಗೆ ಬದನೆ, ಮೂಲಂಗಿ, ಪಾಲಕ್, ತೊಗರಿ, ಕಬ್ಬು, ಕರಿಬೇವು, ಬಾಳೆ, ಬೂದುಗುಂಬಳ, ಮೆಣಸಿನಕಾಯಿ, ವೀಳೆಯದೆಲೆ, ದಾಸವಾಳ – ಹೀಗೆ ವೈವಿಧ್ಯಮಯ ಗಿಡಗಳೂ ಇವರ ಅಂಗಳದಲ್ಲಿ ತಲೆ ಎತ್ತಿವೆ.

ನಿವೃತ್ತಿಯ ನಂತರ ಇವರ ಸುಪ್ತವಾಗಿದ್ದ ಮರ-ಗಿಡಗಳ ಪ್ರೀತಿ ಸಾವಯವ ಕೃಷಿಯ ಕೈಂಕರ್ಯ ಮಾಡುವಂತೆ ಹುರಿದುಂಬಿಸಿದೆ. ಉದುರಿದ ಎಲೆ, ಕಸ ಕಡ್ಡಿ, ತರಕಾರಿ ಸಿಪ್ಪೆಗಳನ್ನು ಮರ-ಗಿಡಗಳ ಬುಡಕ್ಕೇ ಹಾಕಿ ದಿನ ಬಿಟ್ಟು ದಿನ ನೀರೆರೆಯುವುದನ್ನು ರೂಢಿಸಿಕೊಂಡಿದ್ದಾರೆ. ಆಗೀಗ ಬೇವಿನ ಹಿಂಡಿಯನ್ನು ಮಾರುಕಟ್ಟೆಯಿಂದ ಖರೀದಿಸಿ ಮಣ್ಣಿನೊಂದಿಗೆ ಬೆರೆಸುತ್ತಾರೆ. ಮಣ್ಣು ಹುಳುಗಳು ಇವರ ತೋಟದ ಮಣ್ಣಿನಲ್ಲಿ ಯಥೇಚ್ಛವಾಗಿವೆ. ಮನಸ್ಸು ಮಾಡಿದರೆ ಕಾಂಕ್ರೀಟ್ ಕಾಡಿನಲ್ಲೂ ಹೇಗೆ ಬೆಳೆ ತೆಗೆಯಬಹುದು ಎಂಬುದಕ್ಕೆ ಶ್ರೀ ಗಿರಿಗೌಡರು ಸಾಕ್ಷಿಯಾಗಿದ್ದಾರೆ.

**ಡಾ|| ಎಸ್. ಎಸ್. ಲೀಲಾ,** ನಂ. ೧೦೫, 'ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ಸ್', ೧೪-ಎ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೩

ಸಂಸ್ಕೃತ ವಿಶ್ವವಿದ್ಯಾಲಯವೊಂದು ಬೇಕು ಎಂದು ಕೇಳಿದವರಾರು ? ಅದರ ಅಗತ್ಯ ಮತ್ತು ಅನಗತ್ಯದ ಬಗ್ಗೆ ಚರ್ಚೆಯೇನಾದರೂ ನಡೆದಿದೆಯೇ? ಇವ್ಯಾವುದೂ ಇಲ್ಲದೆ ಸಾರ್ವಜನಿಕ ಬೆವರಿನ ಹಣದಲ್ಲಿ ಕೋಟ್ಯಂತರ ರೂಪಾಯಿಗಳನ್ನು ಇದರ ಸ್ಥಾಪನೆ ಮತ್ತು ನಿರ್ವಹಣೆಗೆ ಖರ್ಚು ಮಾಡುವುದು ಸರ್ಕಾರಕ್ಕೆ ಯೋಗ್ಯವೇ ? ಇಂತಹ ಸರ್ಕಾರಕ್ಕೆ ತನ್ನನ್ನು ಆರಿಸಿದ ಕೋಟ್ಯಂತರ ಸಂಖ್ಯೆಯ ಪ್ರಜೆಗಳು ಮುಖ್ಯವೇ ? ಅಥವಾ ಸೀಮಿತ ಸಂಖ್ಯೆಯ ಒಂದು ಪಂಗಡದ ಜನ ಮುಖ್ಯವೇ? ಈ ಎಲ್ಲ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಅತ್ಯಂತ ಭಂಡತನದಿಂದ ಈ ವಿಶ್ವವಿದ್ಯಾಲಯದ ಸ್ಥಾಪನೆಗೆ ಹೊರಟಿರುವ ಸರ್ಕಾರಕ್ಕೆ ಜನರೇ ಇಂದು ಸಂಘಟಿತರಾಗಿ ಪಾಠ ಹೇಳುವುದು ದೂರವಿಲ್ಲ ಎನ್ನಿಸುತ್ತಿದೆ.

ಕರ್ನಾಟಕ ರಾಜ್ಯವೇ ಅಲ್ಲದೆ ಇತರೆ ರಾಜ್ಯಗಳ ವಿಶ್ವವಿದ್ಯಾಲಯಗಳಲ್ಲಿ ಸಹ ಸಂಸ್ಕೃತ ವಿಭಾಗಗಳಲ್ಲಿ ಕನಿಷ್ಠ ಪ್ರಮಾಣದ ವಿದ್ಯಾರ್ಥಿಗಳಿಲ್ಲ. ಯು.ಜಿ.ಸಿ.ಯ ನಿಯಮಾವಳಿ ಪ್ರಕಾರ ಕನಿಷ್ಠ ಐದು ಮಂದಿ ವಿದ್ಯಾರ್ಥಿಗಳಿಗಿಂತ ಕಡಿಮೆ ವಿದ್ಯಾರ್ಥಿಗಳಿರುವ ವಿಭಾಗಗಳನ್ನು ಮುಚ್ಚಬೇಕು. ಈ ದಿಸೆಯಲ್ಲಿ ಈಗಾಗಲೇ ಅನೇಕ ವಿಭಾಗಗಳನ್ನು ಸಹ ಮುಚ್ಚಲಾಗಿದೆ. ಅದೇಕೋ ಏನೋ ಸಂಸ್ಕೃತ ವಿಭಾಗಗಳನ್ನು ಇನ್ನೂ ಮುಚ್ಚಿಲ್ಲ.

ಸಂಸ್ಕೃತವು ದೇವಭಾಷೆಯೆಂದು ಕೆಲವರಿಂದ ಒತ್ತಾಯಪೂರ್ವಕವಾಗಿ ಕರೆಸಿಕೊಂಡಿದ್ದರಿಂದ ಅಲ್ಲಿ ದೇವರುಗಳ ಮಕ್ಕಳೇನಾದರೂ ಓದುತ್ತಿರಬಹುದೇ? ಹುಲು ಮಾನವರ ಕಣ್ಣಿಗೆ ಅದು ಕಾಣುವುದಿಲ್ಲ. ಏನೇ ಆದರೂ ಇರುವ ವಿಭಾಗಗಳಿಗೇ ಕನಿಷ್ಠ ಪ್ರಮಾಣದ ವಿದ್ಯಾರ್ಥಿಗಳು

# ಸಂಸ್ಕೃತದ ವಕ್ತಾರರ ಪಾಪದ ಹೊರೆ ಕಮ್ಮಿಯಾಗಲಿ !

ಇಲ್ಲದಿರುವಾಗ ಅದಕ್ಕೊಂದು ವಿಶ್ವವಿದ್ಯಾಲಯ ಬೇಕೆ ? ಇದು ಕನಿಷ್ಠ ವಿವೇಕ ಇರುವ ಯಾರಿಗೇ ಆದರೂ ಹೊಳೆಯುತ್ತದೆ.

ಒಂದು ವಿಶ್ವವಿದ್ಯಾಲಯದ ಅಸ್ತಿತ್ವಕ್ಕೆ ಕನಿಷ್ಠ ನೂರು ಕಾಲೇಜುಗಳಾದರೂ ಇರಬೇಕು. ಹಾಗೆ ನೋಡಿದಾಗ ಕರ್ನಾಟಕದಲ್ಲಿ ಬೆರಳೆಣಿಕೆಗೂ ಮೀರಿದಷ್ಟು ಸಂಸ್ಕೃತ ಕಾಲೇಜುಗಳಿಲ್ಲ. ಹೀಗಿರುವಾಗ ಇದರ ವಿಶ್ವವಿದ್ಯಾಲಯದ ಸ್ಥಾಪನೆಗೆ ಪೂರಕ ನಿಯಮಗಳು ಎಲ್ಲಿವೆ ?

ಒಂದು ಕಡೆ ಇದು ಬೇಕೆಂದು ಜನವೂ ಕೇಳಿಲ್ಲ, ವಿದ್ವಾಂಸರು ಚರ್ಚಿಸಿ, ಇದರ ಸ್ಥಾಪನೆಗೆ ಬೇಡಿಕೆಯನ್ನು ಇಟ್ಟಿಲ್ಲ. ಆದರೂ ಇದನ್ನು ಹೇಗೋ ಮಾಡಿ ಸ್ಥಾಪಿಸಿಬಿಡಬೇಕು ಎಂದರೆ ಅದಕ್ಕೆ ನಿಯಮಾವಳಿ ಪೂರಕವಾಗಿಲ್ಲ.

ಹಾಗಾದರೆ ಇದು ಬೇಕು ಎಂದವರಾರು ? ಇದರ ಸ್ಥಾಪನೆಯ ಹಿಂದೆ ಒತ್ತಡವನ್ನು ತರುತ್ತಿರುವವರು ಯಾರು ? ಇವರಿಗೂ ಸರ್ಕಾರವನ್ನು ನಡೆಸುವವರಿಗೂ ಏನಾದರೂ ಸಂಬಂಧ ವಿದೆಯೇ ? ಅಥವಾ ಮನಃಸ್ಥಿತಿಯಲ್ಲಿ ಇಬ್ಬರೂ ಒಂದೆಯೇ ? ಜನ ಜಾಗೃತರಾಗಬೇಕಿದೆ. ಜುಟ್ಟಿನ ಬಗೆಗಿನ ಜಾಗೃತಿ ಜನರ ಜುಟ್ಟನ್ನು ಜನರ ಕೈಯಲ್ಲಿಯೇ ಉಳಿಸುತ್ತದೆ. ಭಾರತದ ಸಾಮಾಜಿಕ ಇತಿಹಾಸ ಮರುಕಳಿಸುವುದು ಬೇಡ.

ಈ ಪ್ರಶ್ನೆಗೆ ದೊಡ್ಡದಾಗಿ ತಲೆದೂಗಿದ ವಿದ್ವಾಂಸರೊಬ್ಬರನ್ನು ನಾನು ಇದುವರೆಗೂ ಕಂಡಿಲ್ಲ. ಕಾವ್ಯಾತ್ಮಕ ನೆಲೆಯಲ್ಲಿ ಉತ್ತಮ ಕೃತಿಗಳು ಕೆಲವಿರುವುದು ನಿಜ. ಅವು ಈಗಾಗಲೇ ಚರ್ಚೆಯಾಗಿವೆ; ಆಗುತ್ತಲಿವೆ; ಬೋಧಿಸಲ್ಪಡುತ್ತಲೂ ಇವೆ. ಅಂತೆಯೇ ಸಮಾಜವನ್ನು ಕ್ರಾಂತಿಕಾರಕವಾಗಿ ಮುಂದಕ್ಕೆ ಕೊಂಡೊಯ್ಯುವ ವಿಚಾರಗಳೇನಾದರೂ ಅಲ್ಲಿ ಇದ್ದು, ಅವುಗಳು ಇದುವರೆಗೆ ಚರ್ಚೆಗೇನಾದರೂ ಬಾರದೇ ಇದ್ದರೆ ಆಗ ಕೊಂಚ ಯೋಚಿಸಬಹುದಿತ್ತು. ಅಂತಹ ವಿಚಾರಗಳಿದ್ದ ಕೃತಿಗಳನ್ನು ಆಗಿಂದಾಗ್ಗೆ ಬಲಪಂಥೀಯ ವಿದ್ವಾಂಸರು ನಾಶಮಾಡಿ ತಮ್ಮ ಪುರೋಗಾಮಿ ಅಸ್ತಿತ್ವವನ್ನೂ ಮತ್ತು ತಿರೋಗಾಮಿ ನಡೆಯನ್ನೂ ಪ್ರಕಟಿಸುತ್ತ ಬಂದಿದ್ದಾರೆ. ಇಂತಹ ಹಿನ್ನೆಲೆಯಲ್ಲಿ ಯಾವ ಪುರುಷಾರ್ಥಕ್ಕಾಗಿ ಇದರ ಸ್ಥಾಪನೆಯ ಅಗತ್ಯವಿದೆ ? ತಿಳಿಯದಾಗಿದೆ.

ಸಂಸ್ಕೃತವು ಮೂಲಭೂತವಾಗಿ ಒಂದು ಭಾಷೆ. ಇದನ್ನು ಕುರಿತ ಹೊಗಳಿಕೆ ಮತ್ತು ತೆಗಳಿಕೆ ಇದರ ವಕ್ತಾರರೆನ್ನಿಸಿಕೊಂಡವರ ವರ್ತನೆಗಳಿಗೆ ಸಂಬಂಧಿಸಿದ್ದಾಗಿದೆ. ಸಾವಿರಾರು ವರ್ಷಗಳಿಂದ ಇದನ್ನು ಅಸ್ತ್ರವನ್ನಾಗಿಸಿಕೊಂಡು ಸಮಾಜವನ್ನು ಕತ್ತಲಿನಲ್ಲಿಟ್ಟ ಪುರೋಹಿತಶಾಹಿ ವರ್ಗದ ಚರಿತ್ರೆ ಯಾರಿಗೇ ಆದರೂ ತಿಳಿದಿರುವುದೇ ಆಗಿದೆ. ಇವರು ಈ ಭಾಷೆಯನ್ನು (ಶಿಕ್ಷಣದ ವಿಚಾರ ಸದ್ಯಕ್ಕೆ ಬೇಡ) ಜನರಿಂದ ದೂರ ಮಾಡಿ, ಗರ್ಭಗುಡಿಯಲ್ಲಿಟ್ಟರು. ಅಲ್ಲಿ ಧೂಪ-ದೀಪ ಹಾಕಿ ಬಾಗಿಲನ್ನು ಮುಚ್ಚಿದರು. ಗರ್ಭಗುಡಿಗೆ ಕಿಟಕಿಯಿಲ್ಲ, ಹಾಗಾಗಿ ಆ ಧೂಪ-ದೀಪದ ಹೊಗೆಯಲ್ಲಿ ಸಂಸ್ಕೃತ ಉಸಿರಿಡಿದುಕೊಂಡು ಸತ್ತುಹೋಯಿತು. ಗರ್ಭ ಗುಡಿಗೆ ಕಿಟಕಿ ಇದ್ದಿದ್ದರೆ, ಬಾಗಿಲು ತೆಗೆದಿದ್ದರೆ ಅದು ಬದುಕುತ್ತಿತ್ತು ಮತ್ತು ಜನರನ್ನು ಅಥವಾ ಜನರು ಅದನ್ನು ತಲುಪಬಹುದಿತ್ತು. ಜನ ಉಳಿದುಬಂದಂತೆ ಜನರ ನಡುವೆ ಕನ್ನಡ, ತೆಲುಗು ಮೊದಲಾದ ಜನಭಾಷೆಗಳಂತೆ ಅದೂ ಉಳಿಯುತ್ತಿತ್ತು. ಆದರೆ ಇವತ್ತು ಅದು ಯಾರ ಮಾತೃಭಾಷೆಯೂ ಆಗದ 'ಮಾತೃಭಾಷೆ' ಎನ್ನಿಸಿಕೊಂಡಿದೆ. ಇಂತಹ 'ಮಾತೃಭಾಷೆ'ಯ ಶೋಧಕ್ಕೆ ವಿಶ್ವವಿದ್ಯಾಲಯಗಳಲ್ಲಿರುವ ವಿವೇಕಪೂರಿತ ವಿಭಾಗಗಳೇ ಸಿದ್ಧವಿಲ್ಲ. ಹೀಗಿರುವಾಗ ವಿಶ್ವವಿದ್ಯಾಲಯವೇಕೆ ? ಶ್ರಾದ್ಧಕ್ಕೆ ಹೆಚ್ಚು ಜನ ಬರುವುದಿಲ್ಲ. ಅದರಿಂದ ಲಾಭವೇನಾದರೂ ಇದ್ದರೆ ಅದು ಪುರೋಹಿತನಿಗೆ ಮಾತ್ರ. ಸುಲಭ ಮತ್ತು ಅನ್ಯಾಯದ ಧನಸಂಪಾದನೆ ಬೊಜ್ಜು ತರಿಸುತ್ತದೆ. ಅದು ಸ್ವತಃ ಅದನ್ನು ಪಡೆದವನಿಗೇ ಶ್ರೇಯಸ್ಕರವಲ್ಲ.

ಬುದ್ಧಿವಂತ ಪುರೋಹಿತಶಾಹಿ ವರ್ಗ ತನ್ನ ಮಕ್ಕಳನ್ನು ಸಂಸ್ಕೃತ ಪದವಿಗೆ ಕಳಿಸುವುದು ಸಾಧ್ಯವೇ ? ಅದೂ ಐ.ಟಿ., ಬಿ.ಟಿ.ಗಳಿರುವಾಗ ? ಹಾಗಾದರೆ ಇದನ್ನು ಆರಿಸುವವರು ಯಾರು ? ಮುಗ್ಧ ಪುರೋಹಿತಶಾಹಿ ವರ್ಗವಲ್ಲವೆ ? ಇವರ ಮುಗ್ಧತೆಯನ್ನು ಮಾತ್ರ ಬಳಸಿಕೊಂಡು ನಾವು ಅವರನ್ನು ಹೀಗೆ ಶೋಷಣೆ ಮಾಡುವುದು ಸಾಧ್ಯವೇ ? ಮಾನವೀಯ ನೆಲೆಯಲ್ಲಿ ಯೋಚಿಸುವ ಯಾರೇ ಆದರೂ ಇದನ್ನು ಖಂಡಿಸುತ್ತಾರೆ. ಆದ್ದರಿಂದ ಪುರೋಹಿತಶಾಹಿ ವರ್ಗ ಮತ್ತು ಇತರೆ ವರ್ಗದಲ್ಲಿ ಈ ಕುರಿತ ಜಾಗೃತಿ ಮೂಡುವುದು ಅಗತ್ಯ. ಮೊದಲ ಬಲಿಪಶುಗಳಾಗುವ ಈ ಮುಗ್ಧ ಪುರೋಹಿತಶಾಹಿ ವರ್ಗವೇ ಮೊದಲು ಬಂಡೇಳಬೇಕು.

ಸಂಸ್ಕೃತವನ್ನು ಅಸ್ತ್ರವನ್ನಾಗಿ ಮಾಡಿಕೊಂಡು ದೊಡ್ಡ ಪ್ರಮಾಣದ ಜನ ಸಮುದಾಯವನ್ನು ಕತ್ತಲಿನಲ್ಲಿಟ್ಟು ಬಂದು ಒಂದು ವರ್ಗ ಈಗಾಗಲೇ ಆತ್ಮವಿಮರ್ಶೆ ಮಾಡಿಕೊಂಡಿದೆ. ಅದರ ಪರಿಣಾಮವಾಗಿ ಅನೇಕ ಸಮಾಜಪರ ಚಿಂತನಾ ಪಂಥ ಮತ್ತು ಹೋರಾಟಗಳಲ್ಲಿ ಆ ವರ್ಗದ ಜನರು ಮುನ್ನಡೆದದ್ದೂ ಇದೆ. ಇದು ಒಂದೆಡೆ ತಮ್ಮ ಪೂರ್ವಿಕರು ನಡೆಸಿದ ಸಾಮಾಜಿಕ ಪಾಪದ ಬಗೆಗಿನ ಪಾಪಪ್ರಜ್ಞೆಯೂ ಹೌದು; ಅಂತೆಯೇ ತಮಗಿರುವ ದಿಟ್ಟ ಸಾಮಾಜಿಕ ಕಾಳಜಿಯೂ ಹೌದು. ಇದನ್ನು ಎಲ್ಲರೂ ಸ್ವಾಗತಿಸಿದ್ದಾರೆ. ಹೀಗೆ ಮುನ್ನಡೆದ ಒಂದು ವರ್ಗದ ಜನರನ್ನು ಒಂದು ನಿರ್ದಿಷ್ಟ ಸಾಮಾಜಿಕ ಗುಂಪಿನಲ್ಲಿ ಗುರುತಿಸಿ, ಅವರ ಮೇಲೆ ಈಗಾಗಲೇ ಇರುವ ಪಾರಂಪರಿಕ ಪಾಪದ ಹೊರೆಯನ್ನು ಇನ್ನಷ್ಟು ಹೊರಿಸುವುದು ಹಾಗೂ ಹಾಗೆ ಹೊತ್ತವರಂತೆ ಉಳಿದವರೆಲ್ಲರೂ ಕಾಣುವುದು ನ್ಯಾಯವೇ ? ಯಾಕೆ ಈ ಮಾತನ್ನು ಹೇಳುತ್ತಿದ್ದೇನೆ ಎಂದರೆ ಸಂಸ್ಕೃತವು ಹೇಗೋ ಪೂರ್ವಕಾಲದಿಂದಲೂ ಅವರ ಅಕೌಂಟಿಗೆ ಸೇರಿದೆ. ಹೀಗಿರುವಾಗ ಅದರ ಡೆಬಿಟ್ಟು ಕೂಡ ಅವರಿಗೇ ಸೇರಿಬಿಡುತ್ತದೆ. ಹಾಗಿದೆ ನಮ್ಮ ಸಮಾಜದ ಮನಃಸ್ಥಿತಿ. ಆದ್ದರಿಂದ ಸಂಸ್ಕೃತ ವಿಶ್ವವಿದ್ಯಾಲಯವೇ ಅಲ್ಲದೆ ಸಂಸ್ಕೃತದ ಹೆಸರಿನಲ್ಲಿರುವ ಪಾಪದ ಪರಂಪರೆಯನ್ನು ಇವರು ಮತ್ತು ಅನ್ಯರು ಸೇರಿಯೇ ತಪ್ಪಿಸಬೇಕು. ಇದು ಪರಸ್ಪರರು ತೋರುವ ಸಾಮಾನ್ಯ ಮನುಷ್ಯ ಪ್ರೀತಿಯೂ ಹೌದು.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಸಹ ಪ್ರಾಧ್ಯಾಪಕ, ಕನ್ನಡ ಅಧ್ಯಯನ ವಿಭಾಗ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ - ೫೬೩ ೧೦೧



# 'ಇನ್ಸುಲಿನ್' ಸಂಶೋಧಕ ಫ್ರೆಡರಿಕ್ ಗ್ರಾಂಟ್ ಬ್ಯಾಂಟಿಂಗ್ (೧೮೯೧–೧೯೪೧)

ಡಾ॥ ವಸಂತ ಎ. ಕುಲಕರ್ಣಿ

**ತ**ನ್ನ ಹೊಟ್ಟೆಪಾಡಿಗಾಗಿ ಅರೆಕೆಲಸದ ಸಾಮಾನ್ಯ ಶಿಕ್ಷಕ ಹಾಗೂ ಉತ್ಸಾಹಿ ತರುಣ. ಈತ ಶರೀರ ಕ್ರಿಯಾಶಾಸ್ತ್ರ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿದ್ದ. ಮಧುಮೇಹ, ಅಂದರೆ ಸಕ್ಕರೆ ಕಾಯಿಲೆ ಕುರಿತು, ಉಪನ್ಯಾಸ ಟಿಪ್ಪಣಿ ಸಿದ್ಧಪಡಿಸುತ್ತಿರುವಾಗ ಮೇದೋಜೀರಕ ಗ್ರಂಥಿಯ ಕ್ರಿಯಾವಿನ್ಯಾಸ ಕುರಿತು ಹೊಸ ವಿಚಾರವೊಂದು ಹೊಳೆಯಿತು. ಸರ್ಜಿಕಲ್ ಜರ್ನಲ್‌ವೊಂದರಲ್ಲಿ ಪ್ರಕಟಗೊಂಡ ಸಂಶೋಧನಾ ಪ್ರಬಂಧದಲ್ಲಿಯ ಹೊಸ ವಿಚಾರ ಇದಕ್ಕೆ ಮತ್ತಷ್ಟು ಪುಷ್ಟಿಕೊಟ್ಟಿತ್ತು. ಮೇದೋಜೀರಕ ಗ್ರಂಥಿಯ ನಾಳವನ್ನು ಕಟ್ಟಿದಾಗ ಉಂಟಾಗುವ ಗ್ರಂಥಿ ಕ್ಷಯಿಸುವಿಕೆ ಅಥವಾ ಪಿತ್ತಕೋಶದಲ್ಲಿ ಉಂಟಾಗುವ ಹರಳುಗಳಿಂದ ಉಂಟಾದ ಕ್ಷಯಿಸುವಿಕೆ ಕುರಿತು ಸಾಮ್ಯತೆ ಕಂಡುಕೊಂಡ. ಈ ಎರಡೂ ವಿಷಯಗಳನ್ನು ಒಟ್ಟಾಗಿ ಸೇರಿಸಿ ಹೊಸದೊಂದು ವಿಚಾರಕ್ಕೆ ನಾಂದಿ ಹಾಡಿದ. ಈ ಹೊಸ ವಿಷಯದ ಬೆಳಕು ಅವನನ್ನು ಮತ್ತಷ್ಟು ಉತ್ತೇಜಿಸಿತು. ಬರಬರುತ್ತ ಹೊಸ ವಿಚಾರ ಮೂರ್ತಸ್ವರೂಪ ಪಡೆಯಿತು. ಅನೇಕರಲ್ಲಿ ಈ ವಿಚಾರ ಮಂಡಿಸಿದಾಗ ಉತ್ತರ ಪ್ರಯೋಜನವಾಗಲಿಲ್ಲ. ಪ್ರಯೋಗದ ಸೌಲಭ್ಯಗಳೂ ಇರಲಿಲ್ಲ. ತನ್ನ ವಿಚಾರಗಳನ್ನೆಲ್ಲ ದಿನಚರಿಯಲ್ಲಿ ದಾಖಲಿಸಿದ. ಮುಖ್ಯವಾಗಿ ಮೇದೋಜೀರಕ ಗ್ರಂಥಿಯಿಂದ 'ಸಾರ' ತೆಗೆಯಬೇಕಾಗಿತ್ತು. ದಿನೇದಿನೇ ಆಸಕ್ತಿ ಬೃಹದಾಕಾರವಾಗಿ ಬೆಳೆಯತೊಡಗಿತು. ತಡೆಯಲಾರದ ಮನಕ್ಕೆ ತೋಚಿದ್ದು ಟೊರೊಂಟೊದ ಪ್ರೊ॥ ಜೆ. ಆರ್. ಆರ್. ಮ್ಯಾಕ್‌ಲೀಡ್.

ತನ್ನ ಗಂಟು-ಮೂಟೆಯನ್ನು ಕಟ್ಟಿಕೊಂಡು ಟೊರೊಂಟೊಕ್ಕೆ ಪ್ರಯಾಣ ಬೆಳಸಿದ. ಅಲ್ಲಿ ಪ್ರೊ॥ ಮೆಕ್‌ಲೀಡ್‌ರ ಭೇಟಿ ಅವನ ಸಂಶೋಧನ ಜೀವನಕ್ಕೆ ಹೊಸ ತಿರುವನ್ನು ನೀಡಿತು. ಪ್ರೊ॥ ಮೆಕ್‌ಲೀಡ್ ಕಟ್ಟುನಿಟ್ಟಾದ ಆದರೆ ಅಶಿಸ್ತಿನ ವಿಜ್ಞಾನಿ. ಡಾ॥ ಫ್ರೆಡರಿಕ್ ಬ್ಯಾಂಟಿಂಗ್‌ಗೆ ಅವರ ಶಿಷ್ಯನಾಗುವ ಭಾಗ್ಯ ಒದಗಿಬಂದಿತು. ಪ್ರೊ॥ ಮೆಕ್‌ಲೀಡ್‌ರು ಸಹೃದಯ-ಪರಿಶ್ರಮಪಡುವ ವ್ಯಕ್ತಿಯನ್ನು ಗೌರವದಿಂದ ಪ್ರೀತಿಸುತ್ತಿದ್ದರು. ಡಾ॥ ಬ್ಯಾಂಟಿಂಗ್ ಮೆಕ್‌ಲೀಡರಿಗೆ ತನ್ನ ಸಂಶೋಧನೆಯ ವಿಚಾರಗಳನ್ನು ಹಾಗೂ ಕೈಗೊಳ್ಳಬೇಕಾದ ಪ್ರಯೋಗಗಳ ಯೋಜನೆಗಳನ್ನು ವಿವರಿಸಿದ. ಈ ಮೊದಲು ಕೈಗೊಂಡ ಪ್ರಯೋಗಗಳಲ್ಲಿ ಕಂಡುಕೊಂಡ ವಿಷಯಗಳನ್ನು ತಿಳಿಸಿದ. ಮೇದೋಜೀರಕ ಗ್ರಂಥಿಯಲ್ಲಿ ಸಿದ್ಧವಾಗುವ ಒಂದು ಮಹತ್ವದ 'ಅಂಶ' ರಕ್ತದಲ್ಲಿಯ ಸಕ್ಕರೆ ಮಟ್ಟ ನಿಯಂತ್ರಿಸುತ್ತಿರಬಹುದೆಂದೂ ತರ್ಕಿಸಿದ.

ಡಾ॥ ಬ್ಯಾಂಟಿಂಗ್‌ನ ವಿಚಾರಗಳನ್ನು ಕೇಳಿ ಡಾ॥ ಮೆಕ್‌ಲೀಡ್ ಬೆರಗುಗೊಂಡ. ಆತನು ಡಾ॥ ಬ್ಯಾಂಟಿಂಗ್‌ನಿಗೆ ಹತ್ತು ನಾಯಿಗಳನ್ನು ನೀಡಿ ಆರು ವಾರಗಳ ಅವಧಿಗೆ ತನ್ನ ಪ್ರಯೋಗಾಲಯವನ್ನು ಬಿಟ್ಟುಕೊಟ್ಟ. ಅವನ ಸಹಾಯಕ್ಕಾಗಿ ತನ್ನ ನಾಲ್ಕನೆಯ ವರುಷದ ವಿದ್ಯಾರ್ಥಿ ಬೆಸ್ಟರ್‌ನನ್ನು ಸಹಾಯಕ್ಕಾಗಿ ನೀಡಿದ. ಬೆಸ್ಟರನು ಜೀವರಾಸಾಯನಿಕ ವಿಶ್ಲೇಷಣೆಗಾಗಿ ವಿಶೇಷವಾಗಿ ನೆರವಾಗುತ್ತಿದ್ದ. ಡಾ॥ ಬ್ಯಾಂಟಿಂಗ್ ಹಾಗೂ ಬೆಸ್ಟರ್‌ರ ಜೋಡಿ ೧೬ ಮೇ, ೧೯೨೧ರಿಂದ ತನ್ನ ಕೆಲಸ ಆರಂಭಿಸಿತು. ಪಾರಂಪರಿಕ ಶುಷ್ಕ ವಿಚಾರಗಳನ್ನು ಬದಿಗೊತ್ತಿ ಧೈರ್ಯದಿಂದ ಹೊಸ ವಿಚಾರಗಳೊಂದಿಗೆ ಮುನ್ನುಗ್ಗ ಹತ್ತಿದರು. ದಿನದಿಂದ ದಿನಕ್ಕೆ ಹೊಸಬೆಳಕು ಕಾಣಹತ್ತಿದರು. ಕ್ಷೀಣಗೊಂಡ ಮೇದೋಜೀರಕ ಗ್ರಂಥಿಯಿಂದ 'ಸಾರ' ತೆಗೆದು ಹತ್ತು ಮಧುಮೇಹ ಪೀಡಿತ ಪ್ರಾಣಿಗಳಿಗೆ ಪ್ರತಿಯೊಂದಕ್ಕೂ ೭೫ ಡೋಜ್ - ಇಂಜೆಕ್ಷನ್ ಮೂಲಕ ನೀಡಿದರು. ಈಗ ಮೇದೋಜೀರಕ ಸಾರವು ತನ್ನ ಕೆಲಸ ಮಾಡಿತ್ತು. ಪ್ರಾಣಿಗಳಲ್ಲಿಯ ರಕ್ತದಲ್ಲಿ – ಹಾಗೂ ಮೂತ್ರದಲ್ಲಿ ಸಕ್ಕರೆ ಪ್ರಮಾಣ ಕಡಿಮೆಗೊಂಡಿತ್ತು. ಸಕ್ಕರೆ ಕಡಿಮೆಗೊಳಿಸುವ 'ಅಂಶ' ವಿರುವ ಬಗ್ಗೆ ಖಚಿತವಾಯಿತು. ಅದೊಂದು ಕ್ರಿಯಾಶೀಲವಾದ 'ಅಂಶ'ವೆಂದು ಮನಗಂಡರು. ಡಾ॥ ಬ್ಯಾಂಟಿಂಗ್ ಹಾಗೂ ಬೆಸ್ಟರ್ ಅವರ ಸಂಶೋಧನೆ ಸಫಲಗೊಂಡು ತುಂಬ ಹರ್ಷಿತರಾದರು. ಸಕ್ಕರೆ ಕಡಿಮೆಗೊಳಿಸುವ 'ಅಂಶ' ಮೇದೋಜೀರಕ ಗ್ರಂಥಿಯ 'ಲ್ಯಾಂಗರ್‌ಹ್ಯಾನ್ ದ್ವೀಪ-ಕೋಶ'ಗಳಲ್ಲಿ ಇದೆ ಎಂಬುದೂ ಗೊತ್ತಾದಾಗ – ವಿಶ್ವದ ಮಾನ್ಯತೆಗೆ ಪಾತ್ರರಾದರು. ಆರಂಭದಲ್ಲಿ ಅನೇಕ ವಿಜ್ಞಾನ ಸಂಸ್ಥೆಗಳೂ, ದೇಶಗಳೂ ಡಾ॥ ಬ್ಯಾಂಟಿಂಗ್ ಬೆಸ್ಟರ್ ಜೋಡಿಗೆ ಅನೇಕ ಪಾರಿತೋಷಕ ನೀಡಿ ಸನ್ಮಾನಿಸಿದರು. ಕಾರಣ 'ಇನ್ಸುಲಿನ್' ಸಂಶೋಧನೆ ಮಧುಮೇಹಿ ಪೀಡಿತರಿಗೆ ವರದಾನವಾಯಿತು. ಮನುಕುಲವನ್ನು ರಕ್ಷಿಸುವ ಆಯುಧವಾಯಿತು. ಇಷ್ಟಕ್ಕೇ ನಿಲ್ಲದೆ 'ಇನ್ಸುಲಿನ್' ಸಂಶೋಧನೆಗೆ ನೊಬೆಲ್ ಪಾರಿತೋಷಕ ಕೂಡ ಸಂದಿತು. ಆದರೆ ಅದು ಡಾ॥ ಮೆಕ್‌ಲೀಡ್ - ಡಾ॥ ಬ್ಯಾಂಟಿಂಗ್‌ರಿಗೆ ನೀಡಲಾಯಿತು. ವಿದ್ಯಾರ್ಥಿ ಬೆಸ್ಟರ್‌ಗೆ ಈ ಗೌರವ ಲಭಿಸಲಿಲ್ಲ, ಕಾರಣ ಅವನು ಇನ್ನೂ ವಿದ್ಯಾರ್ಥಿಯಾಗಿದ್ದ.

ಇದು ಗುರುವಾಗಿದ್ದ ಡಾ॥ ಬ್ಯಾಂಟಿಂಗ್‌ನಿಗೆ ತುಂಬ ನೋವು ಹಾಗೂ ದುಃಖ ತಂದಿತು. ಮುಖ್ಯವಾಗಿ ತನ್ನೊಡನೆ ಹಗಲಿರುಳು ದುಡಿದು ಶ್ರೇಯಸ್ಸಿನಲ್ಲಿ ಮುಖ್ಯ ಪಾತ್ರ ವಹಿಸಿದ್ದ ಬೆಸ್ಟರ್‌ನನ್ನು ಕರೆದು ದುಃಖಿಸಿದ. ಅವನಿಗೆ ಬಂದ ಅರ್ಧ ಮೊತ್ತವನ್ನು ನೀಡಿ ಧನ್ಯವಾದ ಅರ್ಪಿಸಿದ. ಆದರೆ ಬೆಸ್ಟರ್‌ನು ಅದನ್ನು ಗಣನೆಗೆ ತೆಗೆದುಕೊಳ್ಳದೆ ತನ್ನ ಮುಂದಿನ ಪ್ರಯೋಗದಲ್ಲಿ ನಿರತನಾಗಿದ್ದ. ಗುರುವಿಗೆ ಕೈಮುಗಿದು ಆಶೀರ್ವದಿಸಲು ಕೇಳಿಕೊಂಡ. ಡಾ॥ ಬ್ಯಾಂಟಿಂಗ್ ಮತ್ತು ಬೆಸ್ಟರ್ 'ಇನ್ಸುಲಿನ್' ಕೊಡುಗೆ ಯತ್ನ ಆರಂಭಿಸಿದ್ದು ೧೯೨೦ರಲ್ಲಿ ಕಂಡುಕೊಂಡದ್ದು ೧೯೨೧ರಲ್ಲಿ. ಈ ಸಂಶೋಧನೆ ಮಹತ್ವದ ಮೈಲುಗಲ್ಲು.

**ಇನ್ಸುಲಿನ್ ಅಂದರೆ ಏನು ?**

ಇದೊಂದು ರಸದೂತ ಅಥವಾ ಹಾರ್ಮೋನ್. ಮೇದೋಜೀರಕ ಗ್ರಂಥಿಯ ಲ್ಯಾಂಗರ್ ಹ್ಯಾನ್ ಬೀಟಾ ಜೀವಕೋಶಗಳು ಇನ್ಸುಲಿನ್ ಉತ್ಪಾದಿಸುವ ಸ್ಥಳ. ಜರ್ಮನಿಯ ವೈದ್ಯಕೀಯ ವಿದ್ಯಾರ್ಥಿ ಪಾಲ್ ಲ್ಯಾಂಗರ್‌ಹಾನ್‌ನು ೧೮೬೯ರಲ್ಲಿ ಈ ಜೀವಕೋಶಗಳನ್ನು ಪ್ರಥಮ ಬಾರಿಗೆ ಪರಿಚಯಿಸಿದನು. ಆದ್ದರಿಂದ ಇನ್ಸುಲಿನ್ ಉತ್ಪಾದಿಸುವ ಈ ಜೀವಕೋಶಗಳಿಗೆ ಲ್ಯಾಂಗರ್ ಹ್ಯಾನ್ ದ್ವೀಪಗಳೆಂದು ಕರೆಯುತ್ತಾರೆ. ಇಲ್ಲಿ ಒಂದು ಮಿಲಿಯದಷ್ಟು ಈ ದ್ವೀಪಗಳುಂಟು.

ಮಾನವನ ಇನ್ಸುಲಿನ್ ಹಾಗೂ ಹಂದಿಗಳಲ್ಲಿನ ಇನ್ಸುಲಿನ್‌ದಲ್ಲಿ ವ್ಯತ್ಯಾಸ ಇರುವುದಿಲ್ಲ. ಇದೊಂದು ಪೆಪ್ಟೈಡ್ ರಸದೂತ ೫೧ ಅಮೈನೊ ಆ್ಯಸಿಡ್‌ಗಳ ಸರಪಣಿಗಳಲ್ಲಿ ಹೆಣೆಯಲ್ಪಟ್ಟಿದೆ. 'ಎ' ಸರಪಣಿ ೨೧ ಅಮೈನೊ ಆ್ಯಸಿಡ್‌ಗಳನ್ನೂ 'ಬಿ'

ಸರಪಣಿ ೩೦ ಸರಪಣಿ ಹೊಂದಿದೆ. ಇವೆರಡು ಸರಪಣಿಗಳನ್ನು ಡೈಸಲ್ಫೈಡ್ ಸೇತುವೆ ಬಂಧಿಸುತ್ತದೆ. ರಕ್ತಪರಿಚಲನೆಯಲ್ಲಿ ಪ್ರತಿ ಒಂದು ತಾಸಿಗೆ ೦.೫ + ೧೧.೨೫ ಯೂನಿಟ್ ಇನ್ಸುಲಿನ್ ಬಿಡುಗಡೆಗೊಳ್ಳುತ್ತದೆ. ಅಂದರೆ ೨೦-೪೦ ಮೈಕ್ರೊಗ್ರಾಮ್/ಪ್ರತಿತಾಸಿಗೆ. ಊಟದನಂತರ ತೆಗೆದುಕೊಳ್ಳುವಾಗ ಹತ್ತುಪಟ್ಟು ಹೆಚ್ಚು ಉತ್ಪಾದಿಸಲ್ಪಡುತ್ತದೆ.

ಪ್ರತಿನಿತ್ಯವೂ ರಕ್ತಪರಿಚಲನೆಗೆ ೩೦ ಯೂನಿಟ್ ಬಿಡುಗಡೆಯಾಗುತ್ತದೆ. ಸುಮಾರಾಗಿ -- ಪ್ಲಾಸ್ಮಾ ಇನ್ಸುಲಿನ್ ಮಟ್ಟ ೧೦ ಮೈಕ್ರೊ ಯುನಿಟ್/ಎಂ.ಎಲ್. ಮಿಲಿಲೀಟರ್.

ಉಪವಾಸದ ಸಮಯದಲ್ಲಿ ಶೇಕಡಾ ೫೦ ಕಡಿಮೆಗೊಳ್ಳುತ್ತದೆ. ಇದರ ಮುಖ್ಯ ಕೆಲಸ ರಕ್ತದಲ್ಲಿಯ ಸಕ್ಕರೆ ಮಟ್ಟವನ್ನು ನಿಯಂತ್ರಿಸುವುದು. ಆದರೆ ಇನ್ಸುಲಿನ್ ವೈರಿಗಳು ಹಲವಾರು. ಗ್ಲುಕೋಗಾನ್, ಎಫಿನೆಫ್ರಿನ್, ನಾರ್ ಎಫಿನೆಫ್ರಿನ್, ಥೈರಾಯಿಡ್ ಹಾರ್ಮೋನ್ಸ್, ಗ್ರೋಥ್ ಹಾರ್ಮೋನ್ ಹಾಗೂ ಗ್ಲುಕೋಕಾರ್ಟಿಕಾಯಿಡ್ - ಹಾರ್ಮೋನುಗಳು (ರಸದೂತಗಳು) ಸಕ್ಕರೆ ಮಟ್ಟ ಹೆಚ್ಚಿಸಲು ಯತ್ನಿಸುತ್ತವೆ. ಇನ್ಸುಲಿನ್ ಏಕಾಂಗಿಯಾಗಿ ಎದುರಿಸುತ್ತದೆ. ಬೇಕಾದಷ್ಟು ಔಷಧ ಕಂಪನಿಗಳು 'ಇನ್ಸುಲಿನ್' ತಯಾರಿಸುತ್ತವೆ. ಕ್ರಿಸ್ಟಲೈನ್ - ಜಿಂಕ್ ಇನ್ಸುಲಿನ್ ಸಾಮಾನ್ಯ. ಈಗ ಹ್ಯೂಮನ್ ಇನ್ಸುಲಿನ್‌ಗಳು ಮಾರುಕಟ್ಟೆಗೆ ಬಂದಿವೆ. ಇನ್ಸುಲಿನ್ ಸೂಜಿಮದ್ದನ್ನು ಚರ್ಮದಡಿಯಲ್ಲಿ ಚುಚ್ಚಿಕೊಳ್ಳಬೇಕು. ಡಾಕ್ಟರರು ಅದರ ವಿಧಾನ – ಡೋಸ್. (ಯೂನಿಟ್ಟು) ವಿವರಿಸುವರು. 'ಇಂಜೆಕ್ಷನ್' (ಸೂಜಿಮದ್ದು) ತೆಗೆದುಕೊಂಡ ೨೦ ನಿಮಿಷ ಅವಧಿಯಲ್ಲಿ ಆಹಾರ ತೆಗೆದುಕೊಳ್ಳುವುದು ಅಗತ್ಯ. ಕೂಡಲೇ ಸಕ್ಕರೆ ಕಡಿಮೆಗೊಂಡರೆ ಮಿದುಳನ್ನು ಘಾಸಿಗೊಳಿಸುವುದು. ಮಾತ್ರೆ ಮತ್ತು ಇಂಜೆಕ್ಷನ್ ತೆಗೆದುಕೊಳ್ಳುವುದು ಡಾಕ್ಟರರ ಸಲಹೆಯಂತೆ ಇರಬೇಕು.

**ಡಾ|| ವಸಂತ ಎ. ಕುಲಕರ್ಣಿ**
ಫ್ಲಾಟ್-ಎ. ೧೦೪, ರಮಣಜ್ಯೋತಿ ಅಪಾರ್ಟ್‌ಮೆಂಟ್ಸ್, ೨೦, ಯಶವಂತಪುರ ಸಬರ್ಬ್
೨ನೇ ಹಂತ, ಬೆಂಗಳೂರು - ೫೬೦ ೦೨೨



## ಜತೆ

ಸಹೋದರ
ಎಲ್ಲಿಂದ ಬರುತ್ತಿರುವೆ ?
ನಿನ್ನ ಹೆಗಲ ಮೇಲಿರುವ ಆ ಎಲ್ಲ ಸತ್ತ
ಹಕ್ಕಿಗಳನ್ನು ಯಾವ ಸೀಮೆಗೆ ಒಯ್ಯುತ್ತಿರುವೆ
ಸಹೋದರ ?

ಆ ಹಕ್ಕಿಗಳಿಗೆ ಪ್ರಾಣ ನೀಡಲು
ನನ್ನ ತಾಯಿಯ ಹತ್ತಿರಕ್ಕೆ ಕೊಂಡೊಯ್ಯುತ್ತಿರುವೆ
ತಂಗಿ, ಮಳೆ ಈ ಹಕ್ಕಿಗಳಿಗೆ ಸಾವು ತಂದಿದೆ;

ನಿನ್ನ ತಾಯಿ ಎಲ್ಲಿಹಳು ಸಹೋದರ ?

ಆ ಶಿಖರಗಳ ಹಿಂದೆ ರಣಹದ್ದುಗಳಂತೆ
ಬಾಗಿರುವ ಪರ್ವತಗಳಲ್ಲಿ, ಬೀಸುವ ಗಾಳಿ
ಹಿಂದಿರುವ ಮನೆಗಳಲ್ಲಿ, ಆದರ ಹಿಂದೆ ಎಡಿವಿ
ಬಿದ್ದು ಹಾರುತ್ತಿರುವ ಮೋಡಗಳಲ್ಲಿ, ನಕ್ಷತ್ರಗಳ
ಆ ಕಡೆಗೆ ಇರುವ ಆಕಾಶದಲ್ಲಿ
...ಮತ್ತು ಹಾಡಿನ ಗೋಳಾಟದೊಂದಿಗೆ ಬದುಕುವ
ನೆಲದಲ್ಲಿ, ನೇರಳೆ ಬಣ್ಣದ ಕೊಳ ಕಾಣಿಸುತ್ತದೆ;
ಅಲ್ಲಿ ನೈದಿಲೆ ಹೂವಾಗಿ ನನ್ನ ತಾಯಿ
ವಾಸ ಮಾಡುತ್ತಾಳೆ.

ಆ ಪರ್ವತಗಳನ್ನು ಹೇಗೆ ದಾಟುವೆ ಸಹೋದರ ?
ಬಿರುಗಾಳಿ ನಿನ್ನನ್ನು ಹಿಸುಕಿ ನಿರ್ಜೀವ ಮಾಡುತ್ತದೆ,
ಮೋಡಗಳು ನಿನ್ನ ಹುಗಿದು ಮಣ್ಣು ಮಾಡುತ್ತವೆ,
ನಕ್ಷತ್ರಗಳು ಸುಟ್ಟು ಕರುಕಲು ಮಾಡುತ್ತವೆ.

ತಂಗಿ ನಾನು ಹಾಡಾಗಿ ಸಾಗುತ್ತೇನೆ,
ಶಿಲೆಗಳ ಮೂಲಕ ಹಾಯುತ್ತೇನೆ,
ಎಲೆಗಳು ಜೀವ ಹೊಡೆದುಕೊಂಡು ಪುಳಕ
ಮೂಡಿಸುತ್ತೇನೆ.

ಸಹೋದರ ನಿನ್ನ ಜೊತೆಗೆ ನನ್ನನ್ನು
ಕರೆದೊಯ್ಯುವಿಯ ? ನಿನ್ನ ತಾಯಿಯನ್ನು
ನಾನು ಅಮ್ಮ ಎಂದು ಕರೆಯುತ್ತೇನೆ,
ನಿನ್ನ ಹಾಡು ಕೇಳಲು ನನ್ನ ಕೇಶರಾಶಿ
ಬಿಚ್ಚಿ ಬಾಹುಗಳನ್ನು ಚಾಚಿ
ಅಂತರ್ಯವನ್ನು ತೆರೆದಿಡುತ್ತೇನೆ.

ತಂಗಿ ನೀನು ನನ್ನ ಜೊತೆಗೆ ಬಂದರೆ
ನನ್ನ ತಾಯಿ ಕೋಪಿಸಿಕೊಳ್ಳುವಳು,
ಹೇಗಾದರು ಆಗಲಿ ನಾನು ಒಂಟಿ.

ಸಹೋದರ ಹಾಗಾದರೆ ಮಳೆ ನನ್ನನ್ನು
ಸಾಯಿಸಲಿ ಒಂದು ಪಕ್ಷಿಯಾಗಿ
ನಿನ್ನ ಹೆಗಲ ಮೇಲೆ ನೇತಾಡುತ್ತ ಬರುವೆ.
ನಿನ್ನ ತಾಯಿಯನ್ನು ನೋಡಿ
ಅಮ್ಮ ಎಂದು ಕರೆಯುತ್ತೇನೆ,

ಅಸ್ಸಾಮಿ : **ನೀಲಿಂ ಕುಮಾರ್**
ಆಂಗ್ಲ: **ಪ್ರದೀಪ್ ಆಚಾರ್ಯ**
ಕನ್ನಡಕ್ಕೆ : **ಡಾ|| ಎಂ. ವೆಂಕಟಸ್ವಾಮಿ**
ಡಿ-೧೧, ಸಿ.ಜಿ.ಓ.ಎಚ್.
ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್, ದೊಮ್ಮಲೂರು,
ಬೆಂಗಳೂರು - ೫೬೦ ೦೭೧

# ಲೆನಿನ್ ಜೀವನ ಪುಟಗಳಿಂದ



೧೯೧೭ರ ನವಂಬರ್ ೭ರಂದು ವಿಶ್ವದ ಇತಿಹಾಸದಲ್ಲಿ ಒಂದು ಅಸಾಮಾನ್ಯ ಘಟನೆಯು ಜರುಗಿತು. ಅದೇ ರಷ್ಯದ 'ಅಕ್ಟೋಬರ್ ಸಮಾಜವಾದಿ ಕ್ರಾಂತಿ'. ಅದಾದ ಒಂದು ವಾರದ ನಂತರ ಒಬ್ಬ ನೌಕಾದಳದ ಸೈನಿಕ ಲೆನಿನ್‌ಗ್ರಾಡಿನ ಸ್ಮೋಲ್ನಿ ಅರಮನೆಯಿಂದ ಸರಸರನೆ ನಡೆದುಬಂದ. ಅವನು ಲೆನಿನ್‌ಗೆ ಅನೌಪಚಾರಿಕ ಕಾರ್ಯದರ್ಶಿ. ಒಂದು ಕಾರನ್ನು ಬರಹೇಳಿ ಅದರಲ್ಲಿ ಅಂಗಡಿ ಸಾಲುಗಳತ್ತ ಧಾವಿಸಿದ. ಒಬ್ಬ ಅಂಗಡಿಯವನಿಗೆ ಹೇಳಿದ, ''ನೋಡು, ಲೆನಿನ್‌ರ ಟೋಪಿ ಎಲ್ಲೋ ಕಳೆದುಹೋಗಿದೆ, ಅವರಿಗೆ ಬೇರೊಂದು ಟೋಪಿ ಕೊಡಿಸಬೇಕು,'' ಎಂದು. ''ನೀನದನ್ನು ಉಡುಗೊರೆಯಾಗಿ ನೀಡು'' ಎಂದು ಹೇಳಿ ಟೊಪ್ಪಿಗೆಯನ್ನು ಪಡೆದು ವೇಗವಾಗಿ ಹಿಂದಿರುಗಿದ. ಕ್ರಾಂತಿಯಿಂದ ಲೆನಿನ್‌ಗೆ ದೊರೆತ 'ಲೂಟಿ' ಆ ಟೋಪಿಯೊಂದೇ. ೧೯೧೮ ಮತ್ತು ೧೯೨೧ರ ಲೆನಿನ್ ೧೯೦೩ರ ಅದೇ ಲೆನಿನ್ ಆಗಿದ್ದ, ಅದೇ ಸರಳತೆ; ಅಥವಾ, ಅದಿನ್ನೂ ಸ್ವಲ್ಪ ಜಾಸ್ತಿಯಾಗಿತ್ತೇನೋ! ಮಾರ್ಚ್ ೧೯೧೮ರಲ್ಲಿ ಸರ್ಕಾರದ ಕೇಂದ್ರವನ್ನು ಮಾಸ್ಕೋಗೆ ಸ್ಥಳಾಂತರಿಸಲಾಯಿತು. ಕ್ರೆಮ್ಲಿನ್‌ನ ಎರಡು ಕೋಠಡಿಗಳಲ್ಲಿ ಆತನ ವಾಸ. ಮೇಜಿನ ಮೇಲೆ ಹಿಂದಿನಂತೆ ಒಣ ಮೀನಿನಿಂದ ತಯಾರಿಸಿದ ಅದೇ ಸಾರು ಅಥವಾ ಸೂಪು, ನಗರದ ಬೇರೆಯವರು ಪಡೆಯುತ್ತಿದ್ದ ಅದೇ ಒಣ ಟೀಸೊಪ್ಪಿನ ಟೀ. ಮುಂದೆ ಸ್ವಲ್ಪ ಕ್ಷಾಮದ ಪರಿಸ್ಥಿತಿ. ಆಗ ಒಬ್ಬ ಕಾರ್ಯದರ್ಶಿ ಲೆನಿನ್‌ಗೆ ಎಲ್ಲಿಂದಲೋ ಮಾಂಸದ ತುಂಡನ್ನು ತಂದುಕೊಟ್ಟ. ಹಿಟ್ಟು, ಮಾಂಸ, ಮೊಟ್ಟೆ ಎಲ್ಲವನ್ನೂ ಬೇರೆಬೇರೆ ಊರುಗಳ ರೈತಪ್ರತಿನಿಧಿಗಳು ಲೆನಿನ್‌ಗಾಗಿ ತಂದುಕೊಡುತ್ತಿದ್ದರು; ಆದರೆ ಅದೆಲ್ಲಾ ನೇರವಾಗಿ ಮಕ್ಕಳ ಆವಾಸಗಳಿಗೆ ಇಲ್ಲವೆ ಆಸ್ಪತ್ರೆಗೆ ಹೊರಟುಹೋಗುತ್ತಿತ್ತು. ಲೆನಿನ್ ಅದನ್ನು ಉಂಡಿದ್ದು ಅಪರೂಪ. ಒಮ್ಮೆ ಅವನ ಸಂಬಳವನ್ನು ಹೆಚ್ಚಿಸಲಾಗಿತ್ತು. ಅದನ್ನು ತಿಳಿದು ಲೆನಿನ್ ಕೋಪಾವಿಷ್ಟನಾದ. ಅವನಿಗೆ ಬರುತ್ತಿದ್ದುದು ೬೦೦ ರೂಬೆಲ್‌ಗಳು (ಅಂದರೆ, ಆಗ್ಗ ಸುಮಾರು ೪೦ ಡಾಲರುಗಳು ಅಥವಾ ಆಗಿನ ೨೦೦ ರೂಪಾಯಿಗಳು); ಅದನ್ನು ೮೦೦ಕ್ಕೆ ಏರಿಸಿದ್ದರು. ಬೇರೆ ಸೌಲಭ್ಯಗಳೇನೋ ಇದ್ದವು : ಒಂದು ವಾಹನ, ಹಳ್ಳಿಯಲ್ಲೊಂದು ನಿವಾಸ. ಆದರೆ ಅವು ಎಂದೂ ಅವನವಾಗಲಿಲ್ಲ, ತನ್ನ ಸ್ಥಾನದಿಂದಾಗಿ ಅವು ಅವನ ಬಳಕೆಗೆ ಲಭ್ಯವಿದ್ದುವು, ಅಷ್ಟೆ. ಆತ ಗತಿಸಿದಾಗ ಆಸ್ತಿಯನ್ನೇನೂ ಬಿಟ್ಟುಹೋಗಲಿಲ್ಲ. ಸರ್ಕಾರದ ಬೊಕ್ಕಸದಿಂದ ಒಂದು ವಿಶೇಷ ಸೌಲಭ್ಯ ದೊರಕಿಸಲಾಗಿತ್ತು : ವಿದೇಶಗಳಿಂದ ಪುಸ್ತಕಗಳನ್ನು ತರಿಸಿಕೊಳ್ಳುವ ಸವಲತ್ತು! ಬರ್ಲಿನ್, ಲಂಡನ್ ಮುಂತಾದ ಕಡೆಗಳಿಗೆ ರಾಯಭಾರಿ ಪತ್ರಗಳು ಹೋದಾಗ ಅವುಗಳಲ್ಲಿ ಪುಸ್ತಕಗಳ ಉದ್ದನೆಯ ಪಟ್ಟಿ ಇರುವುದು ಸಾಮಾನ್ಯವಾಗಿತ್ತೆನ್ನುತ್ತಾರೆ. ತನ್ನ ಸಹೋದ್ಯೋಗಿಗಳು ತನ್ನಂತೆಯೇ ಇರಬೇಕೆಂಬ ಆಶಯ ಲೆನಿನ್‌ಗಿತ್ತು, ಆದರೆ ಕೆಲವರು ದೊಡ್ಡ ಮನೆಗಳಲ್ಲಿ ವಾಸಿಸಿದರು, ವಿದೇಶದಿಂದ ಉಡುಪು ತರಿಸಿಕೊಂಡರು, ಪತ್ನಿಗೆ ಬೆಚ್ಚನೆಯ ಫ್ಲರ್ ಕೋಟ್ ತರಿಸಿಕೊಟ್ಟರು. ಆದಾಗ್ಯೂ, ವೈಯಕ್ತಿಕ ನೈತಿಕತೆಯನ್ನು ನಿಷ್ಠೂರದಿಂದ ಪಾಲಿಸುವುದು ಎಲ್ಲರಿಗೂ ಅನಿವಾರ್ಯವಾಗಿತ್ತು.

ಕ್ರೆಮ್ಲಿನ್ ಕಚೇರಿಯಲ್ಲಿ ಕೂತು ಆತ ದೇಶದ ಮೂಲೆಮೂಲೆಗಳಲ್ಲಿ ಪರಿಸ್ಥಿತಿ ಹೇಗಿದ್ದಿತೆಂದು ತಿಳಿಯುವ ವ್ಯವಸ್ಥೆ ಮಾಡಿಕೊಂಡ. ಯಾವ ಚಿಕ್ಕ ವಿಷಯವೂ ಆತನ ಗಮನಕ್ಕೆ ಬಾರದಿರುತ್ತಿರಲಿಲ್ಲ. ನವಂಬರ್ ೭ರಂದು, ಅಂದಿನ ಪೆಟ್ರೋಗ್ರಾಡಿನ ಚಳಿಗಾಲದ ಅರಮನೆ ಇನ್ನೂ ಕ್ರಾಂತಿಕಾರರ ವಶವಾಗಿರದಿದ್ದಾಗಲೇ, ಲೆನಿನ್ ಲೂನಚಾರ್ಸ್ಕಿಯನ್ನು ಕರೆದು ಹೇಳಿದನಂತೆ, ''ನೀನು ನಮ್ಮ ವಿದ್ಯಾಮಂತ್ರಿಯಾಗಬೇಕು, ತಿಳಿಯಿತೆ'' ಎಂದು. ಶಿಕ್ಷಣ ಕ್ಷೇತ್ರದಲ್ಲಿ ಏನೆಲ್ಲಾ ಪರಿವರ್ತನೆ ಮಾಡಬೇಕೆಂದು ಲೆನಿನ್‌ಗೂ ಇನ್ನೂ ಸ್ಪಷ್ಟವಿರಲಿಲ್ಲ. ''ನನ್ನ ಹೆಂಡತಿಯೊಡನೆ ಚರ್ಚಿಸು, ಆಕೆ ಈ ಬಗ್ಗೆ ಬಹಳ ಚಿಂತನೆ ನಡೆಸಿದ್ದಾಳೆ'' ಎಂದು ಲೂನಚಾರ್ಸ್ಕಿಗೆ ಲೆನಿನ್ ಹೇಳಿದ; ''ಆದರೆ ಒಂದಂತೂ ನೆನಪಿನಲ್ಲಿಡು. ಪುಸ್ತಕ ಭಂಡಾರಗಳನ್ನು ಎಲ್ಲೆಲ್ಲೂ ಸ್ಥಾಪಿಸಬೇಕು. ಏನೆಲ್ಲಾ ತಾಂತ್ರಿಕ ಸುಧಾರಣೆಗಳನ್ನು ಅಳವಡಿಸಬಹುದೋ ಅವನ್ನೆಲ್ಲ ಮಾಡಿಬಿಡೋಣ. ಓದುಗರಿಗೆ ಬೇಕಾದ ಪುಸ್ತಕಗಳೆಲ್ಲಾ ಅವರಿಗೆ ಸಿಗುವಂತಾಗಬೇಕು.''

ಕೆರೆನ್‌ಸ್ಕಿ ಆಗಿನ್ನೂ ತನ್ನ ಬೆದರಿಕೆಯನ್ನು ಕೊನೆಗೊಳಿಸಿರಲಿಲ್ಲ, ಕ್ರಾಂತಿಯಾಗಿ ಕೆಲವೇ ದಿನಗಳುರುಳಿದ್ದವು. ಅಕ್ಟೋಬರ್‌ನಲ್ಲಿ ಒಬ್ಬ ಕಾರ್ಮಿಕನ ಮನೆಯಲ್ಲಿ ಲೆನಿನ್ ಅವಿತುಕೊಂಡಿದ್ದನಲ್ಲ, ಅವನನ್ನು ಕರೆಸಿದ. ಲೆನಿನ್ ಹೇಳಿಕಳಿಸಿರುವುದರಿಂದ ಒಳ್ಳೆಯ ಪೋಷಾಕು ಧರಿಸಿಕೊಂಡು ಹೋಗಬೇಕೆಂದು ಆ ಕಾರ್ಮಿಕ ಬಹಳ ಕಷ್ಟಪಟ್ಟ. ಲೆನಿನ್ ಬಳಿ ಹೋದಾದ ಅವನಿಗೆ ಎದುರಾದ ಪ್ರಶ್ನೆ ಬಹಳ ಬೆರಗುಂಟುಮಾಡಿತು : ''ಏನಯ್ಯಾ, ನಿನ್ನ ಮನೆಯಲ್ಲಿ ನನ್ನದೊಂದು ಪ್ಯಾಂಟನ್ನು ಬಿಟ್ಟುಬಂದಿದ್ದೆನೆಂದು ತೋರುತ್ತದೆ. ಅದು ನಿನಗೆ ಸಿಕ್ಕಿತೆ? ಇನ್ನೂ ಹೊಸದಾಗಿಯೇ ಇತ್ತು, ಇಂಗ್ಲೆಂಡಿನ ಬಟ್ಟೆಯಿಂದ ಹೊಲಿಸಿದ್ದದ್ದು.'' ಇಷ್ಟೊಂದು ಗಜಿಬಿಜಿಯ ನಡುವೆ ಈ ನಾಯಕನಿಗೆ ತನ್ನ

ಜಿ. ರಾಮಕೃಷ್ಣ

ಹಳೆಯ ಪ್ಯಾಂಟಿನ ಯೋಚನೆ, ಎಂದು ಕಾರ್ಮಿಕ ಎಲ್ಲರಲ್ಲೂ ಹೇಳಿಕೊಂಡ.

ದೇಶದ ಆರ್ಥಿಕ ಪರಿಸ್ಥಿತಿಯ ಸುಧಾರಣೆ, ಪುನರ್ ನಿರ್ಮಾಣ, ಇವೆಲ್ಲಾ ತುರ್ತು ಕೆಲಸಗಳು. ಅವುಗಳ ಮಧ್ಯೆಯೂ ಲೆನಿನ್‌ಗೆ ಸಣ್ಣಪುಟ್ಟ ವಿಚಾರಗಳನ್ನು ಮರೆಯಲಾಗುತ್ತಿರಲಿಲ್ಲ. ಯಾವ ಕಾರ್ಖಾನೆಯಲ್ಲಿ ಎಷ್ಟು ಉತ್ಪಾದನೆ ಎಂಬ ಮಾಹಿತಿಗಾಗಿ ಆತ ತಡಕಾಡುತ್ತಿರಲಿಲ್ಲ, ಸ್ಮೃತಿಯಿಂದ ಸಲೀಸಾಗಿ ಹೊರತೆಗೆಯುತ್ತಿದ್ದ. ಯಾರಾದರೂ ತಪ್ಪಾಗಿ ಹೇಳಿದರೆ ಆರು ತಿಂಗಳ ನಂತರವೂ ಅವರನ್ನು ತಿದ್ದಲು ಲೆನಿನ್ ಸಮರ್ಥನಿದ್ದ. ಯಾರೋ ಇಂಜಿನಿಯರ್‌ನನ್ನು ಕರೆಸಿದರೆ ಆತನಿಗೆ ಹೇಳುತ್ತಿದ್ದ : ''ಇಂತಿಂತಹ ಬದಲಾವಣೆಗಳನ್ನು ಮಾಡಿ. ಹೇಗೆ ನಡೆಯುತ್ತಿದೆ ಎಂಬುದನ್ನು ಫೋನಿನಲ್ಲಿ ತಿಳಿಸುತ್ತಿರಿ,'' ಎಂದು. ಇದೆಲ್ಲದರ ನಡುವೆ ವಿದೇಶಗಳಲ್ಲಿ ಪುರೋಗಾಮಿ ಚಳುವಳಿಗಳು ಹೇಗೆ ಮುಂದೆ ಸಾಗುತ್ತಿವೆ ಎಂಬುದನ್ನು ಸಹ ತಿಳಿದುಕೊಳ್ಳಬೇಕಾಗಿತ್ತು. ಅಮೆರಿಕಾದ ಜಾನ್ ರೀಡ್‌ನನ್ನು ಸಂಧಿಸಿದಾಗ ಆತನನ್ನು ಒಂದು ಜವಾಬ್ದಾರಿ ಸ್ಥಾನಕ್ಕೆ ನೇಮಿಸುವ ಆಶಯ ವ್ಯಕ್ತಪಡಿಸಿದ. ಎಷ್ಟೋ ವಿದೇಶೀಯರು ಅವರವರ ದೇಶಗಳ ಬಗ್ಗೆ ತಿಳಿದಿದ್ದುದಕ್ಕಿಂತಲೂ ಜಾಸ್ತಿ ಲೆನಿನ್‌ಗೇ ಗೊತ್ತಿರುತ್ತಿತ್ತು. ಎಲ್ಲ ಎಡಪಕ್ಷಗಳ ಅಂತರರಾಷ್ಟ್ರೀಯ ಸಂಘಟನೆಯೊಂದನ್ನು ಸ್ಥಾಪಿಸಬೇಕೆಂಬ ಆಕಾಂಕ್ಷೆ ಲೆನಿನ್‌ಗಿತ್ತು. ಮೊದಲ ಮಹಾಯುದ್ಧದ ಸಂದರ್ಭದಲ್ಲಿ ಎರಡನೆ ಅಂತರರಾಷ್ಟ್ರೀಯವು ಕರಗಿಹೋಗಿತ್ತು. ಮೂರನೆಯದನ್ನು ಮಾರ್ಚ್ ೧೯೧೯ರಲ್ಲಿ ಲೆನಿನ್ ಸಂಘಟಿಸಿದ್ದು ಈಗ ಇತಿಹಾಸ. ಅಧ್ಯಕ್ಷನಾಗಿ ಆಯ್ಕೆಗೊಂಡ ಝಿನೋವೀವ್ ಹೇಳಿದ : ''ಇನ್ನೊಂದು ವರ್ಷದೊಳಗಾಗಿ ಯೂರೋಪಿನಲ್ಲೆಲ್ಲಾ ಕಮ್ಯುನಿಸ್ಟ್ ಪ್ರಭುತ್ವ ಬಂದುಬಿಟ್ಟಿರುತ್ತದೆ,'' ಎಂದು! ಸಮಾವೇಶ ಮುಕ್ತಾಯಗೊಳ್ಳುವ ಮೊದಲೇ ಹಂಗೇರಿಯಲ್ಲಿ ಸೋವಿಯೆತ್ ರಾಜ್ಯದ ಸ್ಥಾಪನೆಯಾಯಿತೆಂಬ ಸಮಾಚಾರ ಬಂತು. ''ಇದೊಂದು ಪುಷ್ಟಿ ವೇತ. ಅದರ ಕತ್ತುಹಿಸುಕಲು ಸಾಮ್ರಾಜ್ಯಶಾಹಿಗಳಿಗೆ ಇನ್ನೇನೂ ಶ್ರಮ ಬೇಕಾಗಲಾರದು,'' ಎಂದು ಲೆನಿನ್ ನುಡಿದನಂತೆ! ನಂತರ ವಿದೇಶಿ ಪ್ರತಿನಿಧಿಗಳಿಗೆ ಲೆನಿನ್ ಸಲಹೆಗಳನ್ನು ನೀಡಿದರು : ''ಸಶಸ್ತ್ರ ಬಂಡಾಯಕ್ಕೆ ಮುನ್ನ ನಿಮ್ಮ ನಿಮ್ಮ

ದೇಶಗಳಲ್ಲಿ ಮೊದಲು ಜನಸಮುದಾಯವನ್ನು ಗಟ್ಟಿಯಾಗಿ ಸಂಘಟಿಸುವ ಕ್ರಿಯೆಯಲ್ಲಿ ತೊಡಗಿಕೊಳ್ಳಿ. ಕ್ರಾಂತಿಯು ಅನಿವಾರ್ಯವೇನೋ ಸರಿ; ಆದರೆ ಅದನ್ನು ನೆಚ್ಚಿ ತಣ್ಣಗೆ ಕುಳಿತುಕೊಳ್ಳಬೇಡಿ. ಬಂಡವಾಳಶಾಹಿ ವ್ಯವಸ್ಥೆಯಿಂದ ಹೊರಬರಲಾಗುವುದಿಲ್ಲವೆಂಬುದು ಒಂದು ಮಿಥ್ಯೆ. ಯಾವ ಸನ್ನಿವೇಶವೂ ಪೂರ್ತಿ ನಿರಾಶಾದಾಯಕವಲ್ಲ. ಆದರೆ ನಮ್ಮ ಸಂಘಟನೆಯ ಕೆಲಸ ಬಹುಮುಖ್ಯ, ಅದಕ್ಕೆ ಆದ್ಯತೆ ಕೊಡೋಣ.''

೧೯೨೧ರಲ್ಲಿ ಇದೇ ಮೂರನೆಯ ಅಂತರರಾಷ್ಟ್ರೀಯದ ಇನ್ನೊಂದು ಸಮಾವೇಶ. ಆದರೆ ವಿಶ್ವದ ಬೇರೆಲ್ಲೂ ಕ್ರಾಂತಿಯೇನೂ ಆಗಿರಲಿಲ್ಲ. ಸಮಾವೇಶದ ಒಂದು ನಿರ್ಣಯ ಹೀಗೆಂದಿತು : ''ಬಂಡವಾಳಶಾಹಿಯು ಒಂದು ವರ್ಗದ ವ್ಯವಸ್ಥೆಯಾಗಿ ಹೆಚ್ಚಿನ ಆತ್ಮಸ್ಥೈರ್ಯವನ್ನು ಪಡೆದುಕೊಂಡಿದೆ. ಅದರ ಪ್ರಭುತ್ವ ಸಂಘಟನೆಯು ಮೊದಲಿಗಿಂತಲೂ ಖಂಡಿತ ಹೆಚ್ಚು ಬಲಶಾಲಿಯಾಗಿದೆ.'' ಅದೇ ಸಂದರ್ಭದಲ್ಲಿ ಸೋವಿಯೆತ್ ರಷ್ಯದ ಸೈನ್ಯವು ಪೋಲೆಂಡಿನೊಳಗೆ ನುಗ್ಗಿತ್ತು, ಅಲ್ಲಿಯ ಪರಿಸ್ಥಿತಿಯನ್ನು ಚೆನ್ನಾಗಿ ತಿಳಿದಿದ್ದವರ ಸೂಚನೆಗೆ ವಿರುದ್ಧವಾಗಿ ಲೆನಿನ್ ಇದನ್ನು ಬೆಂಬಲಿಸಿದ್ದರು. ರಷ್ಯದ ಕೆಂಪು ಸೈನ್ಯವು ಪರಾಭವಗೊಂಡು ಹಿಂದಿರುಗಿತು. ಒಂದು ವರ್ಷದ ನಂತರ ಗಾರ್ಕಿಗೆ ಬರೆದ ಒಂದು ಪತ್ರದಲ್ಲಿ ತನ್ನ ತಪ್ಪನ್ನೊಪ್ಪಿಕೊಂಡು ಸೋಲಿಗೆ ತಾನೇ ಸಂಪೂರ್ಣವಾಗಿ ಕಾರಣವೆಂದು ಲೆನಿನ್ ಹೇಳಿದ್ದು ದಾಖಲಾಗಿದೆ. ಅಧಿಕಾರಕ್ಕೆ ಬಂದಾಗ ಮುಂದಿನ ಹಾದಿಯ ಸಮಗ್ರ ನೀಲಿನಕ್ಷೆ ಲೆನಿನ್ ಬಳಿ ಇರಲಿಲ್ಲ; ಏಕೆಂದರೆ ಆತನದು ಹೊಸಹಾದಿ, ಆತನಿಗೆ ಮುಂಚೆ ಅದನ್ನು ಅನುಸರಿಸಿ ಯಾರೂ ಅನುಭವಗಳನ್ನು ಹೇಳಿಕೊಂಡಿರಲಿಲ್ಲ. ಲೆನಿನ್ ಭಾವಿಸಿದ್ದುದ ಕ್ಕಿಂತಲೂ ಹೆಚ್ಚುಹೆಚ್ಚಾಗಿ ಎಡಕ್ಕೆ ವಾಲಬೇಕಾಗಿ ಬಂದುದು ಒಂದು ಚಾರಿತ್ರಿಕ ವಿಶೇಷ. ಅಧಿಕಾರಕ್ಕೆ ಬಂದ ತರುವಾಯದಲ್ಲಿ ಯಾರೋ ಕೇಳಿದರು : ''ವಿರೋಧಿಗಳ ತೀವ್ರಗಾಮಿ ಪತ್ರಿಕೆಗಳಿವೆಯಲ್ಲ, ಸದಾ ಅವು ನಮ್ಮ ಮೇಲೆ ಬೀಳುತ್ತಿವೆ, ಅವನ್ನೇಕೆ ಸುಮ್ಮನೆ ಮುಚ್ಚಿಸಿಬಿಡಬಾರದು ?'' ಎಂದು. ''ಹಾಗೆ ಮಾಡಿಬಿಟ್ಟರೆ ಅವರೆಲ್ಲಾ ನಮ್ಮ ಬಗ್ಗೆ ಹೇಗೆ ಯೋಚಿಸುತ್ತಿದ್ದಾರೆಂದು ತಿಳಿಯಲು ಬರುವುದಿಲ್ಲವಲ್ಲ!'' ಎಂದು ಲೆನಿನ್ ನಕ್ಕರಂತೆ. ಸ್ವಲ್ಪ ಸಮಯದ ನಂತರ ಸಾಮಾಜಿಕ ಕ್ರಾಂತಿಕಾರಿ ಪಕ್ಷವು ಸ್ಪಿರಿದಿನೋವ ಎಂಬಾಕೆಯ ನೇತೃತ್ವದಲ್ಲಿ ಬೋಲ್ಶೆವಿಕರ ವಿರುದ್ಧ ತೀವ್ರ ಸಂಘರ್ಷಕ್ಕೆ ಇಳಿದು ಸಂವಿಧಾನದ ಅಂಗೀಕಾರಕ್ಕೆ ತಡೆಯೊಡ್ಡಿತು. ಮುಂದೊಂದು ದಿನ ಆ ಪಕ್ಷದ ಕಾರ್ಯಕರ್ತನೊಬ್ಬ ಲೆನಿನ್‌ಗೆ ಗುಂಡು ಹೊಡೆದ. ಲೆನಿನ್ ಸಾಯಲಿಲ್ಲ, ನಿಜ; ಆದರೆ ಅವರ ಮುಕ್ತ ಪ್ರಜಾಪ್ರಭುತ್ವವಾದಿ ಕ್ರಮಕ್ಕೆ ಬಲವಾದ ಪೆಟ್ಟುಬಿದ್ದಿತು. ಲೆನಿನ್ ಒಮ್ಮೆ ಪ್ರಶ್ನೆ ಹಾಕಿದ್ದರಂತೆ : ''ಹಿಂದೆಂದೂ ಇಲ್ಲದಷ್ಟು ಭಯಂಕರ ವಾತಾವರಣ ನಿರ್ಮಾಣವಾಗಿದೆಯಲ್ಲ, ಅದರೊಡನೆ ಸಂಘರ್ಷವು ಎಷ್ಟು ಮಾನವೀಯವಾಗಿರಬಲ್ಲದು ?''

ಬೆಲೆ ಏರಿಕೆ ಬಿಸಿ

'ಎಸಿ' ರೂಂನಲ್ಲಿ ಕುಳಿತಿರುವ ನಮಗೆ ಯಾವ ಬಿಸಿಯ ಅನುಭವವೂ ಆಗಿಲ್ಲ ಬಿಡಿ... ...ಸಾರ್!?

ಯುದ್ಧಗಳಲ್ಲಿ ಅನೇಕರು ಸಾವನ್ನಪ್ಪುತ್ತಾರೆ. ಭಯೋತ್ಪಾದಕರ ಆಕ್ರಮಣದಿಂದಲೂ ಜನ ಸಾಯುತ್ತಾರೆ. ಇದರಲ್ಲಿ ಯಾವುದನ್ನು ಸಮರ್ಥಿಸಲು ಶಕ್ಯ ? ಭಯೋತ್ಪಾದನೆಯಿಂದಾಗಿ ಸತ್ತವರು ಯಾವುದೋ ವ್ಯವಸ್ಥೆಯ ಬದಲಾವಣೆಗಾಗಿ ಸತ್ತಿದ್ದಾರೆ, ಯುದ್ಧದಲ್ಲಿ ಸತ್ತವರು ನಿರರ್ಥಕವಾಗಿ ಸತ್ತಿದ್ದಾರೆ, ಎನ್ನಲು ಬರುತ್ತದೆಯೆ ? ಅಥವಾ, ಇತಿಹಾಸದಲ್ಲಿ ಕ್ರೌರ್ಯವಿದೆ, ಅದು ಪ್ರತೀಕಾರಕ್ಕೆ ಹೊರಟಾಗ ಏನನ್ನೂ ಅದು ಲೆಕ್ಕಿಸುವುದಿಲ್ಲ, ಎಂದು ಸಮಾಧಾನ ತಾಳಬೇಕೆ ? ಈ ಸಂಬಂಧದಲ್ಲಿ ಲೆನಿನ್ ಒಮ್ಮೆ ಗಾರ್ಕಿಗೆ ಹೇಳಿದ್ದು : ''ನಮ್ಮ ಮಕ್ಕಳ ಜೀವನ ನಮ್ಮ ಜೀವನಕ್ಕಿಂತಲೂ ಹಸನಾಗಿರುತ್ತದೆ. ನಾವು ಅನುಭವಿಸಿದ ಎಷ್ಟೋ ಪಾತಕಗಳು ಅವರ ಪಾಲಿಗಿರುವುದಿಲ್ಲ. ಅವರ ಜೀವನದಲ್ಲಿ ಇಷ್ಟೊಂದು ಕ್ರೌರ್ಯವಿರುವುದಿಲ್ಲ. ಆದಾಗ್ಯೂ, ನಾವವರ ಬಗ್ಗೆ ಹೊಟ್ಟೆಕಿಚ್ಚನ್ನೇನೂ ಇಟ್ಟುಕೊಳ್ಳಲಾರೆ. ಇತಿಹಾಸದಲ್ಲಿ ಅದ್ಭುತವಾದೊಂದು ಹೆಗ್ಗಳಿಕೆ ನಮ್ಮ ಪೀಳಿಗೆಯವರದ್ದಾಗಿದೆ. ನಮ್ಮ ಜೀವನ ಸಂದರ್ಭದಲ್ಲಿ ಎಷ್ಟೋ ಕ್ರೌರ್ಯ ಪ್ರದರ್ಶಿಸಲ್ಪಟ್ಟಿದೆ. ನಮ್ಮ ಜೀವನ ಅದನ್ನು ಅವಶ್ಯಕವಾಗಿಸಿತ್ತೋ ಏನೋ! ಮುಂದೊಂದು ದಿನ ಅದನ್ನು ಜನ ಸರಿಯಾಗಿ ಅರ್ಥೈಸಿಕೊಂಡು ನಮ್ಮನ್ನು ಸಮರ್ಥಿಸಬಹುದು.''

ರಷ್ಯದ ಪೂರ್ಣಾಧಿಕಾರಿಯಾಗಿ ಸಮಸ್ಯೆಗಳನ್ನೆದುರಿಸುವಾಗ ಲೆನಿನ್‌ಗೆ ಯಾವ ಭ್ರಮೆಗಳೂ ಇರಲಿಲ್ಲ. ಅವರೊಬ್ಬ ಕಟ್ಟಾ ವಾಸ್ತವತಾವಾದಿ. ಕೃಷಿ ಪರಿಣತರನ್ನು ಕುರಿತು ಒಂದು ವಾಕ್ಯದ ಮಾತೊಂದನ್ನು ಹೇಳುತ್ತಿದ್ದನಂತೆ : ''ಇವರಿದ್ದಾರಲ್ಲ, ಇವರಲ್ಲಿ ಒಬ್ಬರಿಗೂ ಒಂದು ಆಲೂಗಡ್ಡೆ ಸಸಿ ಬೆಳೆಸಲು ಬರುವುದಿಲ್ಲ,'' ಎಂದು. ಇನ್ನೊಮ್ಮೆ ಹೇಳಿದನಂತೆ, ''ನೂರು ಮಂದಿ ತಥಾಕಥಿತ ಬಾಲ್ಶೆವಿಕರಿದ್ದಾರೆನ್ನಿ; ಅವರಲ್ಲಿ ಒಬ್ಬ ನೈಜ ಬಾಲ್ಶೆವಿಕ್ ಆಗಿರುತ್ತಾನೆ, ಅವನ ಹಿಂದೆ ಮೂವತ್ತೊಂಭತ್ತು ಅಪರಾಧಿಗಳು, ಅರವತ್ತು ಮೂರ್ಖರು ಇರುತ್ತಾರೆ'' ಎಂದು. ಕಾರ್ಖಾನೆಗಳನ್ನೋ ಕೃಷಿವಲಯವನ್ನೋ ಮುನ್ನಡೆಸುವಾಗ ಮನ್ನಿಸಲಾಗದ ತಪ್ಪುಗಳು ಕಾಣಬರಲು ಸಾಧ್ಯವಿದೆ. ಇರುವ ಕಿಂಚಿತ್ ಸಂಪನ್ಮೂಲವನ್ನು ದುರ್ಬಳಕೆ ಮಾಡಿಕೊಳ್ಳಬಹುದು. ಇದರಿಂದ ಲೆನಿನ್ ಕಂಗೆಡುತ್ತಿದ್ದರು. ೧೯೨೧ರ ಚಳಿಗಾಲದ ಒಂದು ರಾತ್ರಿ ಹನ್ನೆರಡರ ನಂತರ ಯಾರೋ ಒಬ್ಬ ಕ್ರೆಮ್ಲಿನ್‌ಗೆ ಹಿಂದಿರುಗುತ್ತಿದ್ದನಂತೆ. ಒಂದು ಮೂಲೆಯಿಂದ ಒಬ್ಬ ವ್ಯಕ್ತಿ ಆಗಮಿಸಿದ. ಉದ್ದನೆಯ ಕೋಟು ಮತ್ತು ಟೋಪಿ ಧರಿಸಿದ್ದ. ಅವನು ಲೆನಿನ್. ಇವನಿಗೆ ಲೆನಿನ್ ಹೇಳಿದನಂತೆ : ''ನನಗೆ ನಿದ್ದೆ ಬಾರದು. ಹವೆ ಸೇವಿಸೋಣವೆಂದು ಹೊರಬಂದೆ.'' ಆಮೇಲೆ ಇಬ್ಬರೂ ಒಟ್ಟಿಗೆ ಹೆಜ್ಜೆ ಹಾಕಿದರು. ಒಂದು ಗಂಟೆಯ ಕಾಲ ಹಾಗೇ ಅಡ್ಡಾಡುತ್ತಿದ್ದರು. ಗಡಿಯಾರದ ಗಂಟೆ ಶಬ್ದ ಬಿಟ್ಟರೆ ಎಲ್ಲಾ ನೀರವ. ಲೆನಿನ್ ಆಗಾಗ್ಗೆ ಸಣ್ಣ ದನಿಯಲ್ಲಿ ಹೇಳಿಕೊಳ್ಳುತ್ತಿದ್ದನಂತೆ : ''ಇಲ್ಲ, ಅವರು ಅಶಕ್ತರಾಗುತ್ತಿದ್ದಾರೆ, ಅಶಕ್ತರಾಗುತ್ತಿದ್ದಾರೆ'' ಎಂದು.

ಒಂದೊಂದು ದಿನವೂ ಆತನ ಕಾರ್ಯಕ್ರಮ ಬಿಡುವಿಲ್ಲದೆ ಸಾಗುತ್ತಿತ್ತು. ಒಂದು ಉದಾಹರಣೆ ನೋಡಿ. ೧೯೨೧ರ ಫೆಬ್ರವರಿ ೨೬. ಅಂದಿನ ಕಾರ್ಯಕ್ರಮಗಳ ಸಂಕ್ಷಿಪ್ತ ವಿವರ ಹೀಗಿದೆ : ಮಧ್ಯಾಹ್ನ ೧೨ರಿಂದ ೧.೩೦ರವರೆಗೆ ಮೂರು ಗುಂಪುಗಳೊಡನೆ ಚರ್ಚೆ. ಸಹಕಾರಿ ಕ್ಷೇತ್ರದ ಮುಖ್ಯಸ್ಥರು, ಕೃಷಿ ಸಚಿವ, ವಿದೇಶಕ್ಕೆ ತೆರಳಲಿರುವ ಒಬ್ಬ ಸ್ನೇಹಿತ. ೧.೩೦ರಿಂದ ೨.೪೫ರವರೆಗೆ ಇಂಜಿನಿಯರುಗಳ ಸಮಾವೇಶದ ಅಧ್ಯಕ್ಷತೆ. ಚರ್ಚಾ ವಿಷಯ : ಕಾರ್ಖಾನೆಗಳಿಗೆ ಕಚ್ಚಾ ಸಾಮಗ್ರಿಗಳ ಸರಬರಾಜು. ೩.೧೫ಕ್ಕೆ ಮಾಸ್ಕೊ ಜಿಲ್ಲೆಯ ರೈತರ ಸಭೆ. ೩.೩೦ಕ್ಕೆ ಟರ್ಕಿಯಿಂದ ಬಂದಿದ್ದ ಒಂದು ನಿಯೋಗದ ಭೇಟಿ. ೪.೧೫ರಿಂದ ಒಂದು ಗಂಟೆ ಕಾಲ ಶಿಕ್ಷಣ ಸಚಿವರೊಂದಿಗೆ ಚರ್ಚೆ. ನಂತರ ಅವಸರದ ಊಟ. ಮತ್ತೆ ೫.೩೦ಕ್ಕೆ ಕಾರ್ಯದರ್ಶಿಗೆ ಟಿಪ್ಪಣಿಯ ಉಕ್ತಲೇಖನ; ವಿಷಯ : ವಿದೇಶದಿಂದ ಕಲ್ಲಿದ್ದಲು ತರಿಸಿಕೊಳ್ಳುವುದು, ಇತ್ಯಾದಿ ನಾಲ್ಕು ಸಂಗತಿಗಳು. ೭.೩೦ಕ್ಕೆ ಕೃಷಿ ಸಚಿವನೊಡನೆ ಚರ್ಚೆ. ನಂತರ ೮ರಿಂದ ೯ರವರೆಗೆ ಕಾಮಿಂಟರ್ನ್‌ನ ಕಾರ್ಯದರ್ಶಿ ಬೇಲಾ ಕುನ್ ಜೊತೆ ಚರ್ಚೆ. ಆಮೇಲೆ ಕಾರ್ಯದರ್ಶಿಯನ್ನು ಬರಮಾಡಿಕೊಂಡು ಒಂದಷ್ಟು ಟೆಲಿಗ್ರಾಂಗಳ ರವಾನೆ. ೧೦ಕ್ಕೆ ಇಬ್ಬರು ರೈಲ್ವೆ ಸಚಿವರೊಡನೆ ಎರಡು ಗಂಟೆಗಳ ಕಾಲ ರೈಲ್ವೆ ಸುಧಾರಣೆ ಬಗ್ಗೆ ಚರ್ಚೆ.

ಪಕ್ಷದ ಸಮಾವೇಶಗಳಲ್ಲಿ ವೈಯಕ್ತಿಕ ವಿವರಗಳನ್ನು ಕೊಡುವ ಅವಶ್ಯಕತೆ ಇರುತ್ತಿತ್ತು. ''ಉದ್ಯೋಗ'' ಎಂಬ ಕಡೆ ಸದಾ ಲೆನಿನ್ ಬರೆಯುತ್ತಿದ್ದುದು ''ಸರ್ಕಾರದ ನೌಕರ'' ಎಂದು. ಪೆಟ್ರೋಗ್ರಾಡಿಗೆ ಲೆನಿನ್‌ಗ್ರಾಡ್ ಎಂಬ ಹೆಸರಿಟ್ಟಾಗ ಲೆನಿನ್ ತೀವ್ರವಾಗಿ ಪ್ರತಿಭಟಿಸಿದನಂತೆ. ಅಲ್ಲಿಯ ಸ್ಮೋಲ್ನಿ ಕ್ರಾಂತಿಯ ಕೇಂದ್ರಸ್ಥಾನ. ಅದರ ಬಗ್ಗೆ ಕೆಲವರಿಗೆ ವ್ಯಾಮೋಹ, ಆದರ. ಅದಕ್ಕೆ ಲೆನಿನ್ ನಕ್ಕು ನುಡಿಯುತ್ತಿದ್ದನಂತೆ : ''ಯೋಚಿಸಬೇಡಿ, ನಾವು ಕ್ರೆಮ್ಲಿನ್‌ಗೆ ಹೋದಾಗ ಅದೂ ಅಷ್ಟೇ ಪವಿತ್ರವಾಗಿರುತ್ತದೆ,'' ಎಂದು. ತನ್ನ ಜೀವನದಲ್ಲಿ ಲೆನಿನ್ ಅತಿ ಹೆಚ್ಚಾಗಿ ಬೆಲೆ ಕೊಡುತ್ತಿದ್ದುದು ತರ್ಕಶುದ್ಧ ಚಿಂತನೆಯ ನೆಲೆಯಲ್ಲಿ ಮೂಡಿದ ಕ್ರಿಯೆಗೆ. ಆ ಕ್ರಿಯೆಯು ತನ್ನ ಅಂತಿಮ ಹಂತದವರೆಗೂ ಸಾಗಬೇಕು. ಹಾದಿಯಲ್ಲಿ ಅಡೆತಡೆ ಬಂದರೆ ಯಾವ ಸಂಕೋಚವೂ ಇಲ್ಲದೆ ಅದನ್ನು ಹಿಮ್ಮೆಟ್ಟಿಸಬೇಕು. ಅದಕ್ಕಾಗಿ ಸ್ವಲ್ಪ ಕಠಿಣವಾದ ಕ್ರಮ ಅಗತ್ಯವಾದರೂ ಸರಿಯೆ, ಅದನ್ನು ಹಿಮ್ಮೆಟ್ಟಿಸಲೇಬೇಕು. ಅಂತಹ ಕ್ರಿಯೆಯಲ್ಲಿ ಭಾವುಕತೆ ಇರಬಾರದು. ಹಾಗಿದ್ದಾಗ ಮಾತ್ರ ಹೊಸ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸಲು ಸಾಧ್ಯ. ಆ ನಿರ್ಮಾಣದಲ್ಲಿ ಕೆಲವೊಮ್ಮೆ ಅಹಿತವಾದ ಕೆಲಸಗಳನ್ನು ಮಾಡಬೇಕಾಗುತ್ತದೋ ಏನೊ! ಆದರೆ ಹೊಸ ಸಮಾಜದ ನಿರ್ಮಾಣವಾಗಲೇಬೇಕಲ್ಲವೆ ?

– ಇದು ಲೆನಿನ್ನರ ವಿಚಾರಧಾರೆಯ ಒಂದು ತುಣುಕು ಎನ್ನಬಹುದು.

(ಲೆನಿನ್ ಜನ್ಮದಿನ : ೨೨.೦೪.೧೮೭೦)



ನಭಾವಲೋಕನ

# ಸಂಜೆಗೆ ಗ್ರಹಗಳ ಪುನರಾಗಮನ

**ಸಂ**ಜೆಯ ಆಕಾಶದಲ್ಲಿ ಮಹಾವ್ಯಾಧದಂತಹ ಪ್ರಕಾಶಮಾನ ಪುಂಜಗಳು ಇದ್ದರೂ ನಕ್ಷತ್ರಗಳ ಸೊಬಗನ್ನು ದೂಳು ಮುಚ್ಚಿಹಾಕುತ್ತದೆ. ಹೊಸ ಸೊಬಗು ಒದಗಿಸಿರುವ ಶುಕ್ರ ಪಶ್ಚಿಮದ ಅಂಚಿನಲ್ಲಿ ಕಂಗೊಳಿಸುತ್ತದೆ. ೧೭ರಂದು ಬಾಲಚಂದ್ರನ ಪಕ್ಕದಲ್ಲಿಯೇ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಕಂಗೊಳಿಸುವ ಗ್ರಹ ಮಂಗಳ ಸುಮಾರು ನೆತ್ತಿಯ ಮೇಲೆಯೇ ಇರುತ್ತದೆ. ತನ್ನ ಹಿನ್ನಡೆಯನ್ನು ಮುಗಿಸಿ ಪುನಃ ಕಟಕದತ್ತ ಹೊರಟಿರುವ ಇದನ್ನು ಈ ತಿಂಗಳು ದುರ್ಬೀನಿನಿಂದ ಗಮನಿಸಿ. ತಿಂಗಳ ಮಧ್ಯದಲ್ಲಿ ಮಂಗಳದ ಪಕ್ಕ ಸುಮಾರು ಒಂದು ಡಿಗ್ರಿ ಅಂತರದಲ್ಲಿ ಹತ್ತಿಯಂತೆ ಕಾಣುತ್ತದೆ. ಅದು ಪ್ರೆಸಿಪಿ ಎಂಬ ನಕ್ಷತ್ರ ಗುಚ್ಛ. ಹಲವು ತಿಂಗಳ ಹಿಂದೆ ಮಂಗಳ ಇದರ ಸಮೀಪವೇ ಹಾದು ಹೋಗಿತ್ತು. ಹಿನ್ನಡೆಯ ಕಾರಣ ಮರಳಿ ಬಂದು ಈಗ ಇನ್ನೂ ಒಂದು ಸಲ ಸಮೀಪಿಸಿದೆ. ದೂರದರ್ಶಕದ ಮೂಲಕ ಚಿತ್ರ ತೆಗೆಯಲು ಒಳ್ಳೆಯ ಅವಕಾಶ. ಇಂದಿನ ಡಿಜಿಟಲ್ ಯುಗದ ಕ್ಯಾಮೆರಾಗಳು ಬಹುಶಃ ಈ ಸಮಾಗಮವನ್ನು ಸೆರೆಹಿಡಿಯಬಲ್ಲುವು. ದುರ್ಬೀನಿನ ಮೂಲಕ ನೋಡಿ ಪತ್ತೆ ಮಾಡುವುದೂ ಸವಾಲೇ ಆಗಬಹುದು. ೨೨ರಂದು ಅರ್ಧ ಚಂದ್ರ ಸಮೀಪದಲ್ಲೇ ಇರುವುದು ಗ್ರಹವನ್ನು ಗುರುತಿಸಲು ಸುಲಭವಾಗುವುದಾದರೂ ಗುಚ್ಛವನ್ನು ನೋಡಲು ಚಂದ್ರನ ಬೆಳಕು ಅಡ್ಡವಾಗಬಹುದು.

ಸಂಜೆ ಪೂರ್ವದಲ್ಲಿ ಕಾಣುವ ಇನ್ನೊಂದು ಪ್ರಕಾಶಮಾನ ಚುಕ್ಕೆಯೇ ಶನಿ. ಇದರ ಉಂಗುರಗಳ ತಲದ ಮೂಲಕ ಭೂಮಿ ಕಳೆದ ವರ್ಷ ಹಾದುಹೋದ ಕಾರಣ ಓರೆ ಕೋನ ಅನುಕೂಲಕರವಾಗಿಲ್ಲ. ಉಂಗುರಗಳು ಸುಂದರವಾಗಿ ಕಾಣುವುದಿಲ್ಲ. ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಕಾಣುತ್ತವೆ.

ತಿಂಗಳ ಮೊದಲರ್ಧದಲ್ಲಿ ಸಂಜೆಯಲ್ಲಿ ಬುಧ ಗ್ರಹವೂ ಕಾಣುತ್ತದೆ. ಗರಿಷ್ಠ ಕೋನೋನ್ನತಿ ೮ರಂದು ಶುಕ್ರದ ಸನಿಹದಲ್ಲೇ ಕಾಣುತ್ತದೆ.

ಇನ್ನೊಂದು ಗ್ರಹ ಗುರು ಬೆಳಗಿನ ಜಾವ ಕಾಣುತ್ತದೆ. ೧೨ರಂದು ಪೂರ್ವ ದಿಕ್ಕಿನಲ್ಲಿ ಬಾಲಚಂದ್ರನ ಪಕ್ಕದಲ್ಲಿ ಕಾಣುತ್ತದೆ.

ಮೊದಲ ದಿನ ಬೆಳಗ್ಗೆ ಚಂದ್ರನನ್ನು ನೋಡಿ; ಅದರ ಪಕ್ಕದಲ್ಲಿ ಕಾಣುವ ಚುಕ್ಕೆಯೇ ಚಿತ್ರಾ; ಹಾಗಾಗಿ ಈ ಹುಣ್ಣಿಮೆ ಚಿತ್ರಾ ಪೌರ್ಣಮಿ ಎಂಬ ಹೆಸರು ಪಡೆಯಿತು. ಈ ತಿಂಗಳಿಗೆ ಚೈತ್ರ ಎಂಬ ಹೆಸರೂ ಸಿಕ್ಕಿತು. ಆದರೆ ಹುಣ್ಣಿಮೆ ಎಂಬ ಘಟನೆ ಮಾರ್ಚ್ ೩೦ಕ್ಕೇ ಆಗಿಹೋಯಿತಲ್ಲವೇ ?




ಈ ತಿಂಗಳಲ್ಲಿ ಎರಡು ಉಲ್ಕಾವೃಷ್ಟಿಗಳ ಚಟುವಟಿಕೆಯನ್ನು ಕಾಣಬಹುದು. ಲೈರಾ ಅಥವಾ ವೀಣಾ ಪುಂಜದಿಂದ ಹೊರ ಬೀಳುವಂತೆ ಕಾಣುವ ಉಲ್ಕೆಗಳ ವೃಷ್ಟಿಗೆ ಲಿರಿಡ್ಸ್ ಎಂದು ಹೆಸರು; ಮೂರನೆಯ ವಾರದಲ್ಲಿ ಇವು ಕಾಣಿಸಿಕೊಳ್ಳುತ್ತವೆ. ೧೯ರಿಂದ ೨೫ರವರೆಗೆ ಎನ್ನಬಹುದು. ಇನ್ನೊಂದು ಕುಂಭರಾಶಿಯಿಂದ ಹೊರಟಂತೆ ಕಾಣುವ ಉಲ್ಕೆಗಳ ವೃಷ್ಟಿ - ಅಕ್ವಾರಿಡ್ಸ್ ಎಂದು ಹೆಸರು. ಇದು ತಿಂಗಳ ಕೊನೆಯಲ್ಲಿ ಆರಂಭವಾಗಿ ಮುಂದಿನ ತಿಂಗಳುದ್ದಕ್ಕೂ ನಡೆಯುತ್ತದೆ.

### ಖಗೋಳ ದಿನಚರಿ

೪ ಚಂದ್ರ ಜ್ಯೇಷ್ಠಾ ಜೋಡಿ*
೬ ಚಾಂದ್ರಮಾಸದ ಕೊನೆಯ ಪಾದ
೮ ಬುಧ ಗ್ರಹದ ಗರಿಷ್ಠ ಕೋನೋನ್ನತಿ
೯ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೧೨ ಗುರು - ಚಂದ್ರ ಜೋಡಿ*
೧೪ ಅಮಾವಾಸ್ಯೆ ೧೭:೫೯ಕ್ಕೆ
೧೫ ಚಂದ್ರ - ಬುಧ ಜೋಡಿ*
೧೬ ಶುಕ್ರ - ಚಂದ್ರ ನಡುವೆ ಕನಿಷ್ಠ ಕೋನ*
೧೭ ಚಂದ್ರ ಕೃತ್ತಿಕಾ ಜೋಡಿ*
೨೧ ಚಾಂದ್ರ ಮಾಸದ ಮೊದಲ ಪಾದ
೨೨ ಮಂಗಳ - ಚಂದ್ರ ಜೋಡಿ*
೨೪ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೨೫ ಲಿರಿಡ್ಸ್ ಉಲ್ಕಾವೃಷ್ಟಿ
ಶನಿ ಚಂದ್ರ ಜೋಡಿ*
೨೮ ಹುಣ್ಣಿಮೆ ೧೭:೪೮ಕ್ಕೆ; ಬುಧ ಗ್ರಹದ ಯುತಿ

(* ಛಾಯಾಗ್ರಹಣಕ್ಕೆ ಸದವಕಾಶ)


ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧




೮ರ ಸಂಜೆ ಪಶ್ಚಿಮದಲ್ಲಿ ಬುಧ ಮತ್ತು ಶುಕ್ರ



## ಬಂಡಾಯದ ಕತೆಗಳು

ಡಾ|| ಬಿ. ಪ್ರಭಾಕರ ಶಿಶಿಲ
ಪುಟ : ೨೨ + ೨೫೧
ಬೆಲೆ : ರೂ. ೧೯೫
ಎಲ್. ಎನ್. ಜಿ. ಪ್ರಕಾಶನ, ನಂ. ೨ಎ, ೨ನೇ ಅಡ್ಡರಸ್ತೆ, ನಾಗಪ್ಪ ಬೀದಿ, ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಳ್ಳಿ, ಬೆಂಗಳೂರು

ಬಂಡಾಯ ಸಾಹಿತ್ಯದ ಧ್ವನಿ ಎಲ್ಲೆಲ್ಲೂ ಕೇಳಿಸುತ್ತಿದ್ದ ಸಂದರ್ಭದಲ್ಲಿ ಬರವಣಿಗೆಗೆ ಪ್ರಾರಂಭಿಸಿದ ಪ್ರಭಾಕರ ಶಿಶಿಲರ ಕಥೆಗಳ ಸಂಕಲನವಿದು. ಸಂಪ್ರದಾಯದ ಚೌಕಟ್ಟಿನೊಳಗೆ ಯಾರದೋ ನಿಯಂತ್ರಣದಿಂದ ಬದುಕುತ್ತಿದ್ದವರು ಎದ್ದು ನಿಂತು ಕ್ರಾಂತಿ ಮಾಡಿ ತಮಗಿಷ್ಟವಾದ ಬದುಕನ್ನು ಬಯಸಿ ಪಡೆದ ಕಾಲಘಟ್ಟವೊಂದು ಇಲ್ಲಿ ನೆನಪಾಗುತ್ತದೆ. ಅಂತರ್ಜಾತೀಯ ವಿವಾಹ, ಸ್ತ್ರೀವಿಮೋಚನೆಗಳಂಥ ಅಬ್ಬರದ ಹೊಸ ಅಲೆಗಳು ಒಂದನ್ನೊಂದು ಮೀರಿಸಿದ್ದವು. ಭಾಷಣ, ಸಾಹಿತ್ಯ ರಚನೆಗೆ ಮಾತ್ರ ಸೀಮಿತವಾಗದೆ ಒಂದು ರೀತಿಯ ಪರಿವರ್ತನೆಗೆ ಒಳಗಾಗಿ ಹಿಂದಣ ವ್ಯವಸ್ಥೆಯೊಂದು ಹಿಂದೆ ಸರಿದಿತ್ತು. ಉಸಿರು ಕಟ್ಟಿಸುವ, ಹೇರಲ್ಪಟ್ಟ ಒತ್ತಾಯದ ಬದುಕನ್ನು ನಿರಾಕರಿಸುವುದೇ ಕಥೆಗಳ ಆಶಯ. ಮುಂದಿನ ತಲೆಮಾರಿಗೆ ಮತ್ತೆ ವ್ಯವಸ್ಥೆಯನ್ನು ಬದಲಿಸುವ ಹಂಬಲ. ಇತ್ತೀಚಿನ ಕಥೆಗಳು ಬಂಡಾಯ - ಪ್ರತಿಭಟನೆಯ ನೆಪದಲ್ಲಿ ಯುವಕರು ಆತಂಕಕಾರಿ - ಕೋಮುವಾದಿ ಹೆಜ್ಜೆಗಳನ್ನಿಡುವ ಅಪಾಯವನ್ನು ಧ್ವನಿಸುತ್ತವೆ.



## ಆರದಿರಲಿ ಅರಿವು

ಸಿ. ಎನ್. ಕೃಷ್ಣಮೂರ್ತಿ
ಪುಟ : ೩೨೦
ಬೆಲೆ : ರೂ. ೧೬೦
ಭಾಗ್ಯಲಕ್ಷ್ಮೀ ಪ್ರಕಾಶನ, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೫೬೦ ೦೮೫

ಇಂದಿನ ದಿನಗಳಲ್ಲಿ ವಿಜ್ಞಾನ-ತಂತ್ರಜ್ಞಾನದ ನೆರವಿನಿಂದ ಮನುಷ್ಯ ಅತೀವ ಸುಖ ಸಂಪತ್ತನ್ನು ಗಳಿಸುತ್ತಿದ್ದಾನೆ. ಇಂತಹ ಲೌಕಿಕ ಸಂಪತ್ತು ಶಾಶ್ವತವಾದುದಲ್ಲ ಎಂಬ ಅರಿವು ಆತನಿಗಿಲ್ಲ, ಅಲ್ಲದೆ, ಆಸ್ತಿ ಅಂತಸ್ತುಗಳಿಗೆ ವಿಪರೀತ ಮಹತ್ವ ನೀಡಿ ಸತ್ಯ-ನೀತಿ-ಸದಾಚಾರಗಳಿಗೆ ವಿದಾಯ ಹೇಳುತ್ತಿದ್ದಾನೆ. ಸಾರ್ವಕಾಲಿಕ ಜೀವನಮೌಲ್ಯಗಳೆಂದು ಪರಿಗಣಿಸಲಾದ ಎಷ್ಟೋ ವಿಚಾರಗಳು ಇಂದಿನ ಮನುಷ್ಯನಿಗೆ ಅಗತ್ಯವಾಗಿ ಬೇಕಾಗಿವೆ. ಬಾಳಿನಲ್ಲಿ ಬೆಳಕನ್ನು ಬೀರಿ, ಸನ್ಮಾರ್ಗದಲ್ಲಿ ನಡೆಸಿ, ವಿವೇಕವಂತ ನನ್ನಾಗಿ ಮಾಡಲು ಕೆಲವೊಂದು ಲೋಕೋಕ್ತಿಗಳು ಹಾಗೂ ಒಳ್ಳೆಯ ಮಾತುಗಳನ್ನು ಈ ಪುಸ್ತಕದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಕಿರು ಪ್ರಬಂಧಗಳಂತೆ ಮೂಡಿಬಂದು ಮನಸ್ಸಿಗೆ ನಾಟುವಂತಹ ನಿಜವನ್ನಷ್ಟೇ ಇವು ಹೇಳುತ್ತಿವೆ. ಯುವಜನರಿಗೆ ಖಂಡಿತವಾಗಿ ಮಾರ್ಗದರ್ಶನ ಮಾಡುವ ಬರಹಗಳಾಗಿವೆ.

## ನಾನು ಪಾಟೀಲ ಪುಟ್ಟಪ್ಪ (ನಾಡೋಜ ಡಾ|| ಪಾಟೀಲ ಪುಟ್ಟಪ್ಪನವರ ಆತ್ಮಕಥೆ)

ನಿರೂಪಣೆ : ಡಾ|| ಸರಜೂ ಕಾಟ್ಕರ್
ಪುಟ : xvi + ೩೦೦ ಬೆಲೆ : ರೂ. ೨೦೦
ಲೋಹಿಯಾ ಪ್ರಕಾಶನ, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

'ಪ್ರಪಂಚ' ಪತ್ರಿಕೆಯ ಪಾಟೀಲ ಪುಟ್ಟಪ್ಪನವರು ಯಾರಿಗೆ ಗೊತ್ತಿಲ್ಲ? ನಾಡೋಜ ಬಿರುದಾಂಕಿತರಾದ ಅವರದ್ದು ನಾಡಿನ ಎಲ್ಲರೊಂದಿಗೂ ಸ್ನೇಹ - ಸಲುಗೆ - ಒಡನಾಟ. ಅವರ ಆತ್ಮಕಥನದ ಹರಹು ಸುಮಾರು ಒಂದು ಶತಮಾನಕ್ಕೆ ಬಲು ಹತ್ತಿರ. ಅವರ ಅನುಭವಗಳನ್ನು ಕೇಳುವುದೇ ಒಂದು ಸೊಗಸು. ಅಲ್ಲದೆ ಇಂದಿನ ಕಾಲದಲ್ಲಿ ಅಂಥ ಅನುಭವಗಳು ದುರ್ಲಭ. ಕರ್ನಾಟಕದ ಏಕೀಕರಣಕ್ಕಾಗಿ ದುಡಿದು, ಹಿರಿಯರಾಗಿ, ಹೋರಾಟಗಾರರಾಗಿ ಪರಿಚಯವಾಗುವ ಪಾಪು ಅವರು ಪತ್ರಕರ್ತರೂ, ಲೇಖಕರೂ ಹೌದು. 'ನನ್ನದು ಈ ಕನ್ನಡನಾಡು' ಎಂಬ ಪುಟ್ಟ ಪುಸ್ತಕದಲ್ಲಿ ಕನ್ನಡ ಭಾಷೆ ಹಾಗೂ ಕರ್ನಾಟಕದ ಬಗ್ಗೆ ಅವರಿಗಿರುವ ಕಾಳಜಿ, ಅಭಿಮಾನ ವ್ಯಕ್ತವಾಗುತ್ತದೆ. ಪಾಪು ತನ್ನ ಬದುಕಿನ ಕಥನವನ್ನು ನೆನಪಿಸಿಕೊಂಡು ಹೇಳುತ್ತ ಹೋದಂತೆ ಅಕ್ಷರ ರೂಪದಲ್ಲಿ ದಾಖಲಿಸಿಕೊಂಡವರು ಶ್ರೀ ಸರಜೂ ಕಾಟ್ಕರ್. ಅದನ್ನೊಂದು ಪುಸ್ತಕರೂಪವಾಗಿ ಚಿರಂತನವಾಗಿಸಿದವರು ಲೋಹಿಯಾ ಪ್ರಕಾಶನದವರು. ಈಗ ಕೊಂಡು ಓದಬೇಕಾದ್ದು ನಮ್ಮ ಸರದಿ. ಅಪರೂಪದ ಹಳೆಯ ಕಪ್ಪು ಬಿಳುಪು ಹಾಗೂ ವರ್ಣದ ಛಾಯಾಚಿತ್ರಗಳಿವೆ.



## ಚಾರ್ವಾಕನಿಂದ ಮಾರ್ಕ್ಸ್‌ವರೆಗೆ

ಪ್ರಭಾಕರ ಸಂಝಗಿರಿ; ಅನುವಾದ : ಚಂದ್ರಕಾಂತ ಪೋಕಳೆ
ಪುಟ : ೧೨೮ + ೪ ಬೆಲೆ : ರೂ. ೭೦
ಕ್ರಿಯಾ ಪ್ರಕಾಶನ ಪ್ರೈವೆಟ್ ಲಿಮಿಟೆಡ್, ನಂ. ೧೨, ೧೮ನೇ ಅಡ್ಡರಸ್ತೆ, ಸಂಪಂಗಿರಾಮನಗರ, ಬೆಂಗಳೂರು - ೫೬೦ ೦೨೭

ಭೌತಿಕವಾದ - ದೇಹಾತ್ಮವಾದ - ಅಧ್ಯಾತ್ಮದ ಬಗ್ಗೆ ಎಲ್ಲ ಕಾಲದಲ್ಲೂ ಪ್ರಪಂಚದೆಲ್ಲೆಡೆ ದಾರ್ಶನಿಕರಲ್ಲಿ ಚಿಂತನ ಮಂಥನ ನಡೆದಿದೆ. ಎಲ್ಲ ಭಾರತೀಯ ದರ್ಶನಗಳಂತೆ ಸ್ವಭಾವವಾದದ ವಿಶಿಷ್ಟತೆಯನ್ನು ಸಹಜತೆಯ ದೃಷ್ಟಿಯಿಂದ ಕಂಡ ಲೋಕಾಯತ ದರ್ಶನವೂ ಪ್ರಸಿದ್ಧಿ ಪಡೆದಿದೆ. ಅನುಭವಸಿದ್ಧ ಅಥವಾ ಪ್ರತ್ಯಕ್ಷ ಪ್ರಮಾಣ ಇವರ ನಿಲುವು. ಚಾರ್ವಾಕನಂತೂ ಅಸಂಬದ್ಧ ಆಚರಣೆಗಳನ್ನು ಖಂಡಿಸುತ್ತ, ವೇದಗಳನ್ನು ಪ್ರಶ್ನಿಸುತ್ತ ನಡೆದ ಧೈರ್ಯಶಾಲಿ. ಲೋಕಾಯತ, ಚಾರ್ವಾಕ ಪಂಥದವರನ್ನು ಅಂದು ಜೀವಂತ ಸುಡಲಾಗುತ್ತಿತ್ತು. ಉಪನಿಷತ್ತುಗಳ ಕಾಲದಲ್ಲಿ ಋಷಿ, ವಿದ್ವಾಂಸರಿಂದ ವಿಧ ವಿಧ ತತ್ವಗಳ ಮಂಡನೆಯಾಗಿ, ಮುಂದೆ ಅಭಿಪ್ರಾಯಭೇದಗಳುಂಟಾಗಿ ತತ್ವಜ್ಞಾನವು ಅನೇಕ ಕವಲುಗಳಾಗಿ ವಿಸ್ತರಿಸಿತು. ವಿಜ್ಞಾನವೂ ನಿಖರ ಮಾಹಿತಿಯೊಂದಿಗೆ ಜೊತೆಜೊತೆಗೇ ನಡೆಯಿತು. ಜ್ಞಾನ-ವಿಜ್ಞಾನ-ತತ್ವಜ್ಞಾನಗಳ ತಿರುಳನ್ನು ವಿವೇಚನೆಯಿಂದ ಬಳಸದೆ ಅಪ್ಪಟ ಕಾಳುಗಳನ್ನೆಸೆದು ಜೊಳ್ಳನ್ನು ಮಾತ್ರ ಉಳಿಸಿಕೊಂಡುದು ಇಂದಿನ ಅರ್ಥಹೀನ ಆಚರಣೆಗಳಿಗೆ, ಅಂಧಶ್ರದ್ಧೆಗೆ ಕಾರಣವಾಯಿತು. ಪ್ರಸ್ತುತ ಈ ಕೃತಿಯು ಪ್ರಾಚೀನ ಭೌತಿಕವಾದದಿಂದ ಪ್ರಾರಂಭಿಸಿ ಇತ್ತೀಚಿನ ಕಾರ್ಲ್ ಮಾರ್ಕ್ಸ್‌ವರೆಗಿನ ಒಂದು ಸುದೀರ್ಘ ವ್ಯಾಖ್ಯಾನವನ್ನು ಮಾಡಿದೆ. ಬಹು ಆಸಕ್ತಿದಾಯಕ ಓದು.



ರೈನರ್ ಮಾರಿಯಾ ರಿಲ್ಕ್

## ಯುವ ಕವಿಗೆ ಬರೆದ ಪತ್ರಗಳು

ಅನು : ಓ. ಎಲ್. ನಾಗಭೂಷಣಸ್ವಾಮಿ
ಪುಟ : ೭೨ ಬೆಲೆ : ರೂ. ೩೫
ಅಭಿನವ, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಇದು ಹತ್ತು ಪತ್ರಗಳನ್ನೊಳಗೊಂಡ ಪತ್ರಸಾಹಿತ್ಯ. ಉದಯೋನ್ಮುಖ ಕವಿಗೆ ರೈನರ್ ಮಾರಿಯಾ ರಿಲ್ಕ್ ಎಂಬ ಇನ್ನೊಬ್ಬ ಹಿರಿಯ ಕವಿ ಪತ್ರಗಳ ಮೂಲಕ ಮಾರ್ಗದರ್ಶನ ನೀಡಿದ್ದಾನೆ. ಸಂಕೋಚದಿಂದಲೇ ತನ್ನ ಕವಿತೆಗಳ ಬಗ್ಗೆ ಪ್ರಶ್ನಿಸಿದಾಗ ರಿಲ್ಕ್‌ನಿಂದ ಬಂದ ಉತ್ತರಗಳೇ ಇಲ್ಲಿ ಪತ್ರಗಳಾಗಿ ದಾಖಲಾಗಿವೆ. ಇವು ಫ್ರಾನ್ಜ್ ಕಾಪ್ಪಸ್‌ನಿಗೆ ರಿಲ್ಕ್‌ನಿಂದ ಬಂದ ಪತ್ರಗಳಾದರೂ ಇಲ್ಲಿನ ಕಿವಿಮಾತುಗಳು ಯುವ ಕವಿಗಳಿಗಷ್ಟೇ ಅಲ್ಲದೆ ಸಾರ್ವತ್ರಿಕವಾಗಿ ಅನ್ವಯಿಸುವುದರಿಂದ ಇವು ಮೊದಲು ಜರ್ಮನ್ ಭಾಷೆಯಲ್ಲಿ ಪ್ರಕಟಗೊಂಡವು. ಪತ್ರಗಳ ಚೌಕಟ್ಟನ್ನು ಮೀರಿ ಬೆಳೆಯುತ್ತಾ ಹೋದ ಅವನ ವಾಕ್ಯಗಳು ಸಂಗ್ರಹಯೋಗ್ಯವೆಂದು ವಿಮರ್ಶಕರು ನುಡಿದಿದ್ದಾರೆ. ಕವಿ ರಿಲ್ಕ್‌ನ ಜೀವನದ ಬಗ್ಗೆ ಆಸಕ್ತಿ ಇರುವವರಿಗೆ ಪುಸ್ತಕದ ಕೊನೆಯಲ್ಲಿ ಅನುಬಂಧದ ರೂಪದಲ್ಲಿ ಸಾಕಷ್ಟು ವಿವರಣೆ ಹಾಗೂ ಆತನ ಕೃತಿಗಳ ಬಗ್ಗೆ ಮಾಹಿತಿಯೂ ಇದೆ.

– ಇಂದಿರಾಕುಮಾರಿ
೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಅಮೆರಿಕಾದ ಆಕ್ರಮಣದಲ್ಲಿ ಇರಾಕ್- ಇನ್ನೆಷ್ಟು ದಿನ ಈ ಬವಣೆ





ಇರಾಕ್‌ನಲ್ಲಿ ಚುನಾವಣೆಗಳು ನಡೆದಿವೆ. ಫಲಿತಾಂಶ ಇನ್ನೂ ಪ್ರಕಟವಾಗಿಲ್ಲ. ಅಮೆರಿಕಾದ ಆಕ್ರಮಣದಲ್ಲಿರುವ ಈ ದೇಶದಲ್ಲಿ ನಡೆಯುತ್ತಿರುವ ಎರಡನೇ ಚುನಾವಣೆಗಳು ಇದು. ಫಲಿತಾಂಶ ಅಮೆರಿಕಾಗೆ ಕಳವಳ ಉಂಟುಮಾಡಿದೆ. ೩೨೫ ಸದಸ್ಯರನ್ನು ಹೊಂದಿರುವ ಪಾರ್ಲಿಮೆಂಟಿನಲ್ಲಿ ಇರಾಕಿ ನ್ಯಾಷನಲ್ ಅಲಯನ್ಸ್ ಪಕ್ಷ ಜಯಗಳಿಸಿ ಅಧಿಕಸ್ಥಾನ ಪಡೆದುಕೊಂಡರೆ ಅಮೆರಿಕಾಗೆ ಇರಸುಮುರಸು. ಆಡಳಿತದಲ್ಲಿರುವ ಆಲ್‌ಮಾಲ್ಕಿ ಪಕ್ಷ ಬಂದರೆ ಕ್ಷೇಮ. ಏಕೆಂದರೆ, ಅಲಯನ್ಸ್ ಪಕ್ಷ ಅಮೆರಿಕಾದ ಸೇನೆ ವಾಪಸ್ಸಾಗಬೇಕೆಂದು ಸ್ಪಷ್ಟ ನಿಲುವು ತಳೆದಿದೆ. ಮಾರ್ಚ್ ೭ರಂದೇ ಚುನಾವಣೆ ಪ್ರಕ್ರಿಯೆ ಮುಗಿದಿದ್ದರೂ ಫಲಿತಾಂಶ ತಡವಾಗಿದೆ. ಈವರೆಗೆ ಬಂದಿರುವ ಸೂಚನೆ ಪ್ರಕಾರ ಆಡಳಿತಾರೂಢ ಪಕ್ಷದವರಿಗೆ  ಬಹುಮತ ಲಭಿಸುವ ಸಾಧ್ಯತೆಗಳಿವೆ. ಅಮೆರಿಕಾದ ಸೈನ್ಯದ ನೆರಳಿನಲ್ಲಿ ಆಡಳಿತ ನಡೆಸುತ್ತಿರುವ ಇರಾಕಿನ ಭ್ರಷ್ಟ ಸರಕಾರದವರು ನಡೆಸಿರುವ ಚುನಾವಣೆಗಳು ಎಷ್ಟು ಮುಕ್ತವಾಗಿರಲು ಸಾಧ್ಯ! ಕೆಲ ತಿಂಗಳ ಹಿಂದೆ ಆಫ್ಘಾನಿಸ್ತಾನದಲ್ಲಿ ನಡೆದ ಚುನಾವಣೆಗಳಲ್ಲಿ ಫಲಿತಾಂಶ ಏನಾಯಿತು ಎಂಬುದು ಎಲ್ಲರಿಗೂ ತಿಳಿದಿದೆ. ಅಮೆರಿಕಾದ ಅಧಿಕಾರಿಗಳು ಇರಾಕಿನಲ್ಲಿ ಹೆಚ್ಚುತ್ತಿರುವ ಇರಾನಿನ ಪ್ರಭಾವದ ಬಗ್ಗೆ ಗಾಬರಿಗೊಂಡಿದ್ದಾರೆ. ಆದರಿಂದಾಗಿಯೆ ಚುನಾವಣೆಗಳಲ್ಲಿ ಭಾಗವಹಿಸದಂತೆ ನಿಷೇಧಮಾಡಿರುವ ಸದ್ದಾಂ ಹುಸೇನ್‌ನ ಬಾಥಿಸ್ಟ್ ಪಾರ್ಟಿಯ ಸುನ್ನಿ ಮುಸ್ಲಿಂ ನಾಯಕರನ್ನು ಒಲಿಸಿಕೊಳ್ಳಲು ಸಂಚುನಡೆಸುತ್ತಿದೆ. ಸುಮಾರು ೫೦೦ ಬಾಥಿಸ್ಟ್ ಪಾರ್ಟಿ ಅಭ್ಯರ್ಥಿಗಳನ್ನು ಚುನಾವಣೆಗಳಲ್ಲಿ ಭಾಗವಹಿಸದಂತೆ ತಡೆಯಲಾಯಿತು. ೨೦೦೫ರಲ್ಲಿ ನಡೆದ ಚುನಾವಣೆಗಳಲ್ಲಿ ಸುನ್ನಿ ಮುಸಲ್ಮಾನರು ಮತ ನೀಡದೆ ಸಾಮೂಹಿಕವಾಗಿ ಬಹಿಷ್ಕರಿಸಿದ್ದರು. ಈ ಚುನಾವಣೆಗಳಲ್ಲಿ ಅಂಥದ್ದೇನೂ ನಡೆಯಲಿಲ್ಲ.

ಅಮೆರಿಕಾ ಇರಾಕನ್ನು ಆಕ್ರಮಿಸಿಕೊಂಡು ಏಳು ವರ್ಷಗಳಾದವು. ದಬ್ಬಾಳಿಕೆಯಿಂದ ಸುನ್ನಿ ಸಮೂಹದ ಪ್ರತಿಭಟನೆಯನ್ನು ಹತ್ತಿಕ್ಕಲಾಗಿದೆ. ಅಧ್ಯಕ್ಷ ಬರಾಕ್ ಒಬಾಮ ಹೇಳಿಕೆಯ ಪ್ರಕಾರ ಇರಾಕಿನಲ್ಲಿರುವ ೧೫೦,೦೦೦ ಸೇನೆಯು ೨೦೧೦ರ ಆಗಸ್ಟ್ ೧೦ರ ವೇಳೆಗೆ ತನ್ನ ಕಾರ್ಯಾಚರಣೆ ನಿಲ್ಲಿಸಿ, ೨೦೧೧ರಲ್ಲಿ ಸ್ವದೇಶಕ್ಕೆ ವಾಪಸ್ಸಾಗಬೇಕು. ಆದರೆ ಅಮೆರಿಕಾದ ಸೇನಾಧಿಕಾರಿಗಳು ಇದಕ್ಕೆ ವಿರೋಧವಿದ್ದಾರೆ. ಇರಾಕಿನಲ್ಲಿರುವ ಅಮೆರಿಕಾದ ಸೈನ್ಯಗಳ ಅಧಿಕಾರಿಗಳು ಚುನಾವಣೆಗಳ ನಂತರ ಸೇನಾವಾಪಸಾತಿಗಾಗಿ ರೂಪಿಸಿರುವ ಯೋಜನೆಯನ್ನು ಮುಂದೆ ಹಾಕಲು ನೋಡುತ್ತಿದ್ದಾರೆ. ಚುನಾವಣೆಗಳ ನಂತರ ಇರಾಕಿನಲ್ಲಿ ಮತ್ತೆ ಅಸ್ಥಿರತೆ ಸಂಭವಿಸುವ ಸಾಧ್ಯತೆಗಳೇ ಹೆಚ್ಚು ಎನ್ನುವುದು ಅವರ ಅಂದಾಜು. ಅಮೆರಿಕಾದ ಚಿಂತಕರ ತಂಡದ ಪ್ರಕಾರ ಒಬಾಮ ಆಡಳಿತ ಇರಾಕಿನಿಂದ ಸೇನೆಯನ್ನು ಹಿಂತೆಗೆದುಕೊಳ್ಳುವ ಯೋಜನೆಯನ್ನು ಕೈಬಿಡಬೇಕು. ಈ ಎಲ್ಲ ಹಿನ್ನೆಲೆಯಲ್ಲಿ ಅಮೆರಿಕಾ ಈಗ ಇರಾಕಿನಲ್ಲಿ ಹೆಚ್ಚುತ್ತಿರುವ ಇರಾನಿನ ಪ್ರಭಾವದ ಬಗ್ಗೆ ಪ್ರಚಾರ ಪ್ರಾರಂಭಿಸಿದೆ. ಇರಾನಿನ ಮೇಲೆ ಗೂಬೆ ಕೂರಿಸಿ, ಸೇನೆಯನ್ನು ಕಾಯಂ ಆಗಿ ಇರಾಕಿನಲ್ಲಿ ನೆಲೆಗೊಳಿಸುವುದು ಉದ್ದೇಶ. ಈ ಮಧ್ಯೆ ಇರಾಕಿನ ರಾಜಧಾನಿ ಬಾಗದಾದ್‌ನಲ್ಲಿ ಅತಿದೊಡ್ಡ ರಾಯಭಾರಿ ಕಚೇರಿಯನ್ನು ನಿರ್ಮಾಣ ಮಾಡುತ್ತಿದೆ. ಅದಲ್ಲದೆ, ಅಮೆರಿಕಾದ ಸೇನಾ ನೆಲೆಯೊಂದನ್ನು ಸ್ಥಾಪಿಸಲು ಯೋಜನೆ ಕೈಗೊಂಡಿದೆ. ಪರಿಸ್ಥಿತಿಯು ಆಫ್ಘಾನಿಸ್ತಾನಕ್ಕಿಂತ ಭಿನ್ನವಾಗಿದ್ದರೂ, ವಿದೇಶೀ ಸೈನ್ಯಗಳ ವಿರುದ್ಧ ಜನ ಸಮೂಹಗಳಲ್ಲಿ ಆಕ್ರೋಶ ಹೆಚ್ಚುತ್ತಿದೆ. ಹಾಗಾಗಿ, ವಿದೇಶೀ ಸೇನೆಗಳು ಇರುವವರೆಗೂ ಶಾಂತಿ, ನೆಮ್ಮದಿಗಳು ದೇಶದಲ್ಲಿ ನೆಲೆಸುವುದು ದುಸ್ಸಾಧ್ಯ.

ಆಫ್ಘಾನಿಸ್ತಾನದ ಅಧ್ಯಕ್ಷ ಹಮೀದ್ ಕರ್ಜೈಯನ್ನು ಕಾಬೂಲಿನಲ್ಲಿ ಭೇಟಿ ಮಾಡಿದಾಗ ಇರಾನಿನ ಅಧ್ಯಕ್ಷ ಅಹ್ಮದಿನೆಜಾದ್ ಇದೇ ಮಾತನ್ನು ಹೇಳಿ ಎಚ್ಚರಿಸಿದ್ದಾರೆ. ಇದುವರೆಗೆ ಅಮೆರಿಕಾದ ಸೇನೆಗಳು ಆಕ್ರಮಿಸಿಕೊಂಡ ದೇಶಗಳಿಂದ ಸೇನೆಯನ್ನು ಹಿಂತೆಗೆದುಕೊಂಡಿರುವುದು ಅಪರೂಪ. ವಿಯೆಟ್ನಾಮ್ ಜನತೆಯ ದಿಟ್ಟ ಹೋರಾಟದಿಂದಾಗಿ ಅಮೆರಿಕಾದ ಸೇನೆ ವಾಪಸ್ಸಾಗ ಬೇಕಾಯಿತು. ಪ್ರಪಂಚದ ವಿವಿಧ ದೇಶಗಳಲ್ಲಿ ಇರುವ ಅಮೆರಿಕಾದ ಸೇನಾ ನೆಲೆಗಳೆ ಇದಕ್ಕೆ ಉದಾಹರಣೆ. ಹಾಗಾಗಿ ವಿದೇಶೀ ಸೇನೆಗಳ ನಿರ್ಗಮನಕ್ಕಾಗಿ ಇರಾಕಿ ಜನತೆ ದಿಟ್ಟ ಹೋರಾಟಕ್ಕೆ ಸಿದ್ಧವಾಗಬೇಕಿದೆ.



ಸೀಯಾರ್ಕೆ

---

# ಕಂಡವರ ಮಕ್ಕಳನ್ನ ಬಾವಿಗೆ ತಳ್ಳಿ...

'ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವವರು' – ಎಂಬ ನಾಣ್ಣುಡಿಯೊಂದಿದೆ. ಇದರ ಅರ್ಥ ಬೇರೆಯವರಿಗೆ ಏನಾದರೂ ಚಿಂತೆ ಇಲ್ಲ ನಾವು, ನಮ್ಮವರೂ ಕ್ಷೇಮವಾಗಿದ್ದರೆ ಸಾಕು ಎನ್ನುವ ಧೋರಣೆ. ವಸಾಹತುಶಾಹಿ ಆಳ್ವಿಕೆಯ ದಿನಗಳಲ್ಲಿ ಸಾಮ್ರಾಜ್ಯಶಾಹಿಗಳು ಸಂಪನ್ಮೂಲಗಳನ್ನು ದೋಚಲು ಇಂಥ ನೀತಿಯನ್ನು ಅಳುಕಿಲ್ಲದೆ ಅನುಸರಿಸುತ್ತಿದ್ದರು. ಈಗ ಅಮೆರಿಕಾ ಯುದ್ಧದಲ್ಲಿ ತೊಡಗಿಕೊಂಡಿರುವ ದೇಶಗಳಲ್ಲಿ ತನ್ನ ಸೈನಿಕರನ್ನು ರಕ್ಷಿಸಿಕೊಳ್ಳಲು, ಎಂದರೆ ಸೈನಿಕರ ಸಾವಿನ ಸಂಖ್ಯೆ ಕಡಿಮೆ ಮಾಡಿಕೊಳ್ಳಲು ಆಧುನಿಕ ತಂತ್ರಜ್ಞಾನದ ಮೊರೆಹೋಗುತ್ತಿದೆ. ಮುಂದಿನ ದಿನಗಳಲ್ಲಿ ಅನ್ಯದೇಶಗಳಲ್ಲಿ ವಿರೋಧವನ್ನು ಎದುರಿಸಲು ಅಮೆರಿಕನ್ ಸೈನಿಕರನ್ನು ಬಳಸುವ ಬದಲು, ಅಗೋಚರ ಯುದ್ಧ ನಡೆಸಲು, ಎಂದರೆ ಮಾನವಚಾಲಕ ರಹಿತ ವಿಮಾನಗಳು ಮತ್ತು ಡ್ರೋನಿಯರ್ ಕ್ಷಿಪಣಿಗಳಂಥ ಆಯುಧಗಳನ್ನು ಬಳಸಲಿದೆ. ಈಗಾಗಲೇ ಆಫ್ಘಾನಿಸ್ತಾನ ಮತ್ತು ಪಾಕಿಸ್ತಾನಗಳಲ್ಲಿ ಅಲ್‌ಖೈದಾ ಮತ್ತು ತಾಲಿಬಾನ್‌ಗಳ ಮೇಲೆ ದಾಳಿ ಮಾಡಲು ಅವನ್ನು ಪ್ರಯೋಗಿಸುತ್ತಿದ್ದಾರೆ. ಇಂಥ ದಾಳಿಗಳಲ್ಲಿ ನಿಜವಾಗಿ ತೊಂದರೆಗೀಡಾಗುತ್ತಿರುವವರು ಮತ್ತು ಸಾವಿಗೀಡಾಗುತ್ತಿರುವವರು ನಾಗರಿಕರೆ. ಉದಾಹರಣೆಗೆ, ೨೦೦೯ ಒಂದೇ ವರ್ಷದಲ್ಲಿ ೧೦೮೩ ಮಂದಿ ನಾಗರಿಕರು, ಹೆಂಗಸರು,

ಮಕ್ಕಳು ಮುದಿಯರು ಎನ್ನಿಸದೆ ಸಾವಿಗೀಡಾಗಿದ್ದಾರೆ. ೨೦೦೧ರಿಂದ ೨೦೦೮ರ ವರ್ಷಗಳಲ್ಲಿ ೭,೦೦೦ಕ್ಕೂ ಹೆಚ್ಚು ಮಂದಿ ನಾಗರಿಕರು ಇಂಥ ದಾಳಿಗಳಿಂದ ಸಾವಿಗೀಡಾಗಿದ್ದಾರೆ. ೨೦೧೦ರಲ್ಲಿ, ಅಂದರೆ ಇತ್ತೀಚೆಗೆ ನಡೆದ ಡ್ರೋನಿಯರ್ ದಾಳಿಯಲ್ಲಿ ಸಾವಿಗೀಡಾದ್ದು ಸರಕಾರಿ ಶಾಲೆಯೊಂದರ ಅಧ್ಯಾಪಕ ಮತ್ತು ಆತನ ೯ ವರ್ಷದ ಮಗ. ಅಮೆರಿಕಾ ಈ ಪ್ರಕರಣದ ಕುರಿತು ಪಶ್ಚಾತ್ತಾಪ ವ್ಯಕ್ತಪಡಿಸಿದೆ. ಆದರೆ ಒಬಾಮ ನಡೆಸುತ್ತಿರುವ ಅಫ್ಘಾನಿಸ್ತಾನದ ಯುದ್ಧದಲ್ಲಿ ಇಂಥ ಸಾವು ನೋವುಗಳು ಆಗಾಗ್ಗೆ ಸಂಭವಿಸುತ್ತಿವೆ.

ಅಮೆರಿಕಾ ನಡೆಸಿರುವ ಈ ಹಿಂದಿನ ಯುದ್ಧಗಳಲ್ಲಿ ನಾಗರಿಕರ ಸಾವಿನ ಸಂಖ್ಯೆ ಬೇಕಾದಷ್ಟಾಗಿದೆ. ಯುದ್ಧದಲ್ಲಿ ಶತ್ರುಸೇನೆಯ ಮೇಲೆ ದಾಳಿ ನಡೆಸುವುದೇ ಗುರಿ ಎಂದು ಹೇಳಿಕೊಳ್ಳುವುದೇ ಹೆಚ್ಚು, ಆದರೆ ಆಗುವುದೇ ಬೇರೆ. ಯುದ್ಧದಲ್ಲಿ ಆಧುನಿಕ ತಂತ್ರಜ್ಞಾನ ಬಳಕೆ ಹೆಚ್ಚಾದ ಎರಡನೇ ಮಹಾಯುದ್ಧದ ಕಾಲದಿಂದ ಸಾರ್ವಜನಿಕರ ಸಾವು ನೋವುಗಳೇ ಹೆಚ್ಚು. ಅಮೆರಿಕಾ ನಡೆಸಿದ ಎಗ್ಗಿಲ್ಲದ ಬಾಂಬುದಾಳಿಯಿಂದ ಶತ್ರುಸೇನೆಯ ಜೊತೆಗೆ ನಾಗರಿಕರ ಸಾವುನೋವುಗಳು ಅಧಿಕಗೊಂಡಿವೆ.

ಎರಡನೇ ಮಹಾಯುದ್ಧ ಕಾಲದಲ್ಲಿ ಜರ್ಮನಿಯ ನಗರಗಳ ಮೇಲೆ ನಡೆಸಿದ 'ಫೈರ್‌ಬಾಂಬಿಂಗ್'ನಲ್ಲಿ ಮಿಲಿಟರಿ ಸ್ಥಾಪನೆಗಳ ಜೊತೆಗೆ ಸಾರ್ವಜನಿಕರ ನಿವಾಸಗಳು, ಆಸ್ಪತ್ರೆಗಳು, ಶಾಲೆಗಳು ಎಲ್ಲ ಸುಟ್ಟು ಬೂದಿಯಾದುವು. ಈ ಬಾಂಬುಗಳನ್ನು ಸುರಿದಾಗ ವಿಶಾಲವಾದ ಪ್ರದೇಶಗಳು ಬೆಂಕಿಗೆ ಆಹುತಿಯಾಗುತ್ತವೆ. ೧೯೪೫ರಲ್ಲಿ ಅಮೆರಿಕಾ ಮತ್ತು ಬ್ರಿಟನ್ ಇವು ಡ್ರೆಸ್ಡೆನ್ ನಗರವೊಂದರ ಮೇಲೆ ದಾಳಿ ನಡೆಸಿದಾಗ ಕನಿಷ್ಠ ೫೫,೦೦೦ದಿಂದ ೨೫೦,೦೦೦ ಜನರು ಹತರಾದರು. ಅದೇ ಯುದ್ಧದಲ್ಲಿ ಯೂರೋಪಿನ 'ಫ್ಲಾರೆನ್ಸ್ ಆನ್‌ದಿ ಯೆಟ್ಟೆ' ನಗರ ಅಮೆರಿಕಾ ಮತ್ತು ಬ್ರಿಟನ್ನಿನ ಬಾಂಬುದಾಳಿಗೆ ನೆಲಸಮವಾಯಿತು. ೧೯೪೫ರ ಫೆಬ್ರವರಿಯಿಂದ ಆಗಸ್ಟ್‌ವರೆಗೆ ಅಮೆರಿಕಾ ಜಪಾನಿನ ನಗರಗಳ ಮೇಲೆ ನಡೆಸಿದ ಬಾಂಬು ದಾಳಿಗಳಲ್ಲಿ ಸಾವಿಗೀಡಾದವರ ಸಂಖ್ಯೆ ೩೦೦,೦೦೦ ನಾಗರಿಕರು. ಇನ್ನು ಹಿರೋಷಿಮಾ, ನಾಗಸಾಕಿ ನಗರಗಳ ಮೇಲೆ ಹಾಕಿದ ಪರಮಾಣು ಬಾಂಬು ದಾಳಿಯಲ್ಲಿ ಸಂಭವಿಸಿದ ಸಾವುನೋವುಗಳ ಸಂಖ್ಯೆ ೨೦೦,೦೦೦ಕ್ಕೂ ಹೆಚ್ಚು. ಆನಂತರದಲ್ಲಿ ರೇಡಿಯೋ ಆ್ಯಕ್ಟಿವ್ ವಿಕಿರಣದಿಂದ ಸಾವಿಗೀಡಾದವರ ಸಂಖ್ಯೆ ೧೫೦,೦೦೦.

ಎರಡು ದಶಕಗಳ ಕಾಲ ವಿಯೆಟ್ನಾಮಿನ ಜನರ ಮೇಲೆ ಅಮೆರಿಕಾ ನಡೆಸಿದ ಯುದ್ಧದ ಕಾಲದಲ್ಲಿ ನಡೆಸಿದ ಬಾಬು ದಾಳಿಗಳಿಗೆ ಲೆಕ್ಕವೇ ಇಲ್ಲ. ಎರಡನೇ ಮಹಾಯುದ್ಧದ ಕಾಲದಲ್ಲಿ ಬಳಸಿದ ಬಾಂಬುಗಳ ಪ್ರಮಾಣಕ್ಕಿಂತ ಎರಡು ಮೂರು ಪಟ್ಟು ಹೆಚ್ಚಾಗಿತ್ತು. ನೆಲಸಮ ಗೊಳಿಸುವ ಬಾಂಬು (ಕಾರ್ಪೆಟ್ ಬಾಂಬಿಂಗ್), ಎಲೆ ಉದುರಿಸಿ ಹಸಿರನ್ನು ತೊಡೆದು ಹಾಕುವ ರಾಸಾಯನಿಕ ಬಾಂಬುಗಳು, ಪೆಲ್ಲೆಟ್ ಬಾಂಬುಗಳು, ಬೆಂಕಿ ಹೊತ್ತು ಉರಿಯುವ ಬಾಂಬುಗಳು, ಮೊದಲಾದವನ್ನು ಬಳಸಲಾಯಿತು. ಅಮೆರಿಕಾ ಪುಟ್ಟ ದೇಶ ಕಾಂಬೋಡಿಯದ ಮೇಲೆ ೨,೭೫೬,೯೪೧ ಟನ್‌ಗಳಷ್ಟು ಬಾಂಬನ್ನು ಸುರಿಯಿತು. ೧೯೬೯ರಿಂದ ೧೯೭೩ರ ಅವಧಿಯಲ್ಲಿ ಇದರಿಂದ ಸಾವಿಗೀಡಾದವರ ಸಂಖ್ಯೆ ಸುಮಾರು ೧೫೦,೦೦೦.

ಎಲ್ಲಕ್ಕಿಂತ ಅಮೆರಿಕಾ ನಡೆಸಿದ ಘೋರವಾದ ಬಾಂಬು ದಾಳಿಯೆಂದರೆ ಕುವೇತ್‌ನಿಂದ ಹಿಂದಿರುಗುತ್ತಿದ್ದ ಇರಾಕಿನ ಸೈನ್ಯದ ಮೇಲೆ ಮಳೆಗರೆದ ಬಾಂಬುಗಳು. ಇದರಲ್ಲಿ ಸಾವಿಗೀಡಾದವರ ಸಂಖ್ಯೆ ಲೆಕ್ಕವಿಲ್ಲದಷ್ಟು. ಸೇನೆ ಹಾಗೂ ನಾಗರಿಕರು ಕುವೇತ್‌ನಿಂದ ವಾಪಸ್ಸಾಗುತ್ತಿದ್ದ ಹೆದ್ದಾರಿಯಲ್ಲಿ ಅತೀವವಾದ ಟ್ರಾಫಿಕ್ ಜಾಮ್. ಸುಮಾರು ಒಂದೂವರೆಯಿಂದ ಎರಡು ಕಿಲೋಮೀಟರು ಉದ್ದದ ರಸ್ತೆಯಲ್ಲಿ ವಾಹನಗಳು ಚಲಿಸದೇ ನಿಂತಿದ್ದವು. ಇರಾಕಿ ಸೇನಾ ಬಲದ ಬೆನ್ನು ಮುರಿಯಲು ಹಂಚಿಕೆ ರೂಪಿಸಿದ್ದ ಅಮೆರಿಕಾದ ಸೇನೆ ಈ ರಸ್ತೆಯ ಮೇಲೆ ಬಾಂಬು ದಾಳಿ ಮಾಡಿತು. ಸುಮಾರು ೨೦೦೦ ವಾಹನಗಳು ಹತ್ತಿಕೊಂಡು ಉರಿದವು. ಹತ್ತಾರು ಸಹಸ್ರಮಂದಿ ಸೈನಿಕರು, ನಾಗರಿಕರು ತಪ್ಪಿಸಿಕೊಳ್ಳಲಾಗದೆ ಸುಟ್ಟು ಕರಕಲಾದರು. ಇದಕ್ಕಿಂತ ಅಮಾನುಷಕೃತ್ಯ ಬೇರೆ ಇದೆಯೇ ? ಮಾನವ ಹಕ್ಕುಗಳನ್ನು ಎತ್ತಿಹಿಡಿಯುವವರು ನಾವು ಎಂದು ಹೇಳಿಕೊಳ್ಳುವ ಅಮೆರಿಕಾದ ಕೃತ್ಯ ಇಂಥದ್ದು. ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇತರ ದೇಶಗಳ ಜನರ ಸಾವುನೋವುಗಳ ಬಗೆಗೆ ಅಮೆರಿಕಾಗೆ ಕಿಂಚಿತ್ತೂ ಚಿಂತೆಯಿಲ್ಲ. ತಮ್ಮ ಅಧಿನಾಯಕತ್ವ ಸ್ಥಾಪಿಸುವ ಗುರಿಯೊಂದೇ ಮುಖ್ಯ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು -೫೬೦ ೦೮೫

# ಪ್ರಭುತ್ವದ ಪತನ – ಅರಿವಿನ ಕಡೆಗೆ ನಡೆ



ಪ್ರೊ|| ಎಸ್. ಜಿ. ಸಿದ್ಧರಾಮಯ್ಯ

ರನ್ನನನ್ನು ಮಹಾಕವಿ ಎಂದು ಕರೆಯಲೊಪ್ಪದ ವಿಮರ್ಶಕರು ಮಹಾಕವಿಯ ಲಕ್ಷಣಗಳನ್ನು ಒಳಗೊಂಡ ಸತ್ಕವಿ ಎಂದು ಕರೆದರು. ಕೆಲವರು ಶಕ್ತಿಕವಿ ರನ್ನ ಎಂದು ಕರೆದರು. ಈ ಶಕ್ತಿಯನ್ನು ಅವನ ಭಾಷಾಪ್ರಯೋಗದಲ್ಲಿ ಪ್ರಧಾನವಾಗಿ ಗುರುತಿಸುವ ಪ್ರಯತ್ನ ಮಾಡಿದರು. ಇನ್ನು ಕೆಲವರು ಅವನ ನಾಟಕೀಯ ಗುಣವನ್ನು ಸಿಂಹಾವಲೋಕನ ತಂತ್ರದಲ್ಲಿ ಮೈತಾಳಿರುವ ಮಹಾಭಾರತದ ಕಥನ ವಿನ್ಯಾಸವನ್ನು ಗಮನಿಸಿ ಆ ಶಕ್ತಿಯ ಮಹತ್ವವನ್ನು ವಿಶ್ಲೇಷಿಸಿದರು. ಆದರೆ ಇವೆಲ್ಲವೂ ಆನೆಯನ್ನು ಮುಟ್ಟಿದ ಕುರುಡರ ಪಾಡಿನ ಪ್ರತಿಕ್ರಿಯೆಗಳೇ ಆಗಿವೆ.

ಪ್ರಭುತ್ವದ ಕುಸಿತವನ್ನು ಹೇಳುವ ಈ ಕಥನ ಯುದ್ಧ ವಿರೋಧೀ ಕಾವ್ಯ. ಜನಸಾಮಾನ್ಯರು ಯುದ್ಧದಿಂದಾಗಿ ಅನುಭವಿಸುವ ಎಲ್ಲ ಬಗೆಯ ಸಂಬಂಧಾತ್ಮಕ ಮೂಲಕ ಒಳನೋವುಗಳನ್ನು ಚಕ್ರವರ್ತಿಯ ವೈಯಕ್ತಿಕ ಬದುಕಿಗೆ ತಂದು ಆತ್ಮಾವಲೋಕನದ ಪರಿಯಲ್ಲಿ ಅವನನ್ನು ಅಪರಾಧೀ ಸ್ಥಾನದಲ್ಲಿ ನಿಲ್ಲಿಸಿ ಮಾತನಾಡಿದ ಕಾವ್ಯವಿದು. ಇಲ್ಲಿಯ ಚಕ್ರವರ್ತಿ ಅರಮನೆಯ ಒಡ್ಡೋಲಗದಲ್ಲಿ ಕಾಣಿಸುವವನಲ್ಲ. ತನ್ನ ಅಹಂಕಾರ, ಅಸೂಯೆ, ಸೇಡು, ದುರಭಿಮಾನ, ಅವಿವೇಕಗಳು ಬೆಳೆದ ಬೆಳಸಾದ ರಣಧರೆಯ ಸಾವು ನೋವಿನ ನರಳಿಕೆಯ ನೆಲದಲ್ಲಿ ಏಕಾಕಿಯಾಗಿ ಸಾವಿಯ ದೇಸಿಗನಾಗಿ ಬರಿಗಾಲಲ್ಲಿ ನಡೆದು ಹೋಗುತ್ತಿರುವವನು.

*ಉಡಿದಿರ್ದ ಕಯ್ದು ನೆತ್ತರ*
*ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾ*
*ಲಿಡ ಲೆಡೆವಡೆಯದೆ ಕುರುಪತಿ*
*ದಡಿಗವೆಣಂಗಳನೆಮೆಟ್ಟಿ ನಡೆಯುತ್ತಿರ್ದಂ*
*ಅಂಧನೃಪಸುತನಯೋ ಜಾ*
*ತಂಧ ನಯೋ ಮೆಟ್ಟದಗಲ್ದು ಪೋಗೆನುತುಂ*

– ಇಲ್ಲಿ ಹುಟ್ಟುವ ಎಲ್ಲ ಪ್ರಶ್ನೆಗಳೂ ಜನಸಾಮಾನ್ಯರ, ಯುದ್ಧ ಸಂತ್ರಸ್ತರ, ನೆಲೆಯಲ್ಲಿ ಮೊಳೆತವು. ಪ್ರಭುತ್ವದ ಕುರುಡುತನಕ್ಕೆ ಬಲಿಯಾದ ನೋವಿನ ನೆಲದಲ್ಲಿ ಸ್ಫೋಟಿಸಿದವು. ಅವುಗಳಿಗೆ ಪ್ರತಿಕ್ರಿಯಿಸುವ ದುರ್ಯೋಧನನ ಒಳಗೆ ಪ್ರಭುತ್ವದ ಅಹಂಕಾರ ಪಾಪಪ್ರಜ್ಞೆಯ ಅಳುಕಿಗೆ ಗುರಿಯಾಗಿದೆ. ಅಹಂಕಾರ ಆರ್ದ್ರತೆಗಳು ಒಟ್ಟೊಟ್ಟಿಗೆ ಸಂಘರ್ಷಕ್ಕೆ ಒಳಗಾಗಿವೆ. ರತ್ನಸಿಂಹಾಸನದಿಂದಿಳಿದು ಬಂದು ಯುದ್ಧದಿಂದ ಸತ್ತವರ, ಸಾಯುತ್ತಿರುವವರ, ತನ್ನವರನ್ನು ಕಳೆದುಕೊಂಡು ಅವರ ಕಳೇಬರವನ್ನು ಹುಡುಕುತ್ತಿರುವವರ, ತಬ್ಬಲಿಗಾಗಿ ಅಳುತ್ತಿರುವವರ ನೋವಿನ ಉರಿತಾಕುವ ನೆಲದಲ್ಲಿ ಬರಿಗಾಲಲ್ಲಿ ನಿಂತ ಸಾರ್ವಭೌಮನ ಈ ಚಿತ್ರಣವೇ ಸರ್ವಾಧಿಕಾರದ ಅತ್ಯಂತಿಕ ಪರಿಣಾಮವನ್ನು ವ್ಯಂಗ್ಯ ಧ್ವನಿಯಲ್ಲಿ ಸ್ಫೋಟಿಸಿದೆ. ಕುರುಕ್ಷೇತ್ರದ ರಣಧರೆಯ ನಡುವೆ ಸಾರ್ವಭೌಮನನ್ನು ತಡೆದು ನಿಲ್ಲಿಸಿ ಪ್ರಶ್ನಿಸುವ ಮರುಳ್ಗಳ ಪ್ರಸಂಗವಂತೂ ಯುದ್ಧದ ಬಗೆಗಿನ ಪ್ರಭುತ್ವದ ಎಲ್ಲ ಬಗೆಯ ನಂಬಿಕೆಗಳನ್ನೂ ಮರುಳುತನವೆಂದು ಅಣಕಿಸಿ ಝಂಕಿಸಿ ಪ್ರಶ್ನಿಸಿದೆ. ಇಲ್ಲಿಯ ನೈತಿಕ ಮೂಲದ ಪ್ರಶ್ನೆ ಬಲಿಯಾದವರ ನೋವಿನ ಸಂಕಟ ಮೂಲದ ಪ್ರಶ್ನೆ. ಪ್ರಭುತ್ವದ ಪುರುಷಾಹಂಕಾರ ಇಂಥ ನೋವಿನ ನೆಲೆಯ ನೈತಿಕ ಪ್ರಶ್ನೆಗಳಿಗೆ ಎಂದೂ ಗಮನ ಹರಿಸಿದ್ದೇ ಇಲ್ಲ. ಜನಸಾಮಾನ್ಯರ ಅಳಲನ್ನು ಎಲ್ಲ ಕಾಲದ ಪ್ರಭುತ್ವವೂ ಅಲಕ್ಷಿಸಿದ್ದೇ ಹೆಚ್ಚು. ಆ ಪ್ರಭುತ್ವದ ಪ್ರತಿನಿಧಿಯಂತೆ ಇಲ್ಲಿ ದುರ್ಯೋಧನ ಪ್ರತಿಕ್ರಿಯಿಸುತ್ತಾನೆ. 'ಮರುಳ ಮಾತಿನೋಳ್ ಪುರುಳೇನ್' – ಎಂದು ಮುಂದೆ ಹೋಗುತ್ತಾನೆ.

*ಬಂಧುಮತ್ಸರದೊಳೆ ವೈರಮಂ ಪುದಿದು*
*ಭೀಮನನ್ ಇನಿತರ್ಕೆ ತಂದ ನೀಂ ಮರುಳನೋ*
*ಭೂತಕೋಟಿ ವರೆಸಿ ಆಹವರಂಗದೊಳಾಡುತ್ತಿರ್ಪ ತಾಂ ಮರುಳನೋ*
*ನೋಟ್ಪಿಂ ಇರ್ವರ ಮರುಳ್ತನಮಂ ಫಣಿರಾಜಕೇತನಾ*

*ಕೋಪಾಂಧರ್ ಜಡಿದರ್ ಪತಿಯ ಕ*
*ಬಂಧಮ ನೆಡಗಲಿಸಿ ಪೋಪದುರ್ಯೋಧನನಂ*

*ಹಲಚಕ್ರಾಂಕುಶ ರೇಖಾ*
*ವಿಲಿಸಿದ ಪದ ತಳಕೆ ಮಾಡೆ ಪುನರುಕ್ತತೆಯಂ*
*ಹಲಚಕ್ರಾಂಕುಶಮಾ ಕುರು*
*ಕುಲಜಂ ಕುಸಿಕುಸಿದು ಮೆಲ್ಲ ಮೆಲ್ಲನೆ ನಡೆದಂ.*

– ಹೀಗೆ ತಾನೇ ಬೆಳೆದ ಸಾವು ನೋವಿನ ನಡುವೆ ನಡೆಯುವಾಗ ಅವನನ್ನು; ಅವನ ಸಾರ್ವಭೌಮತ್ವದ ಕುರುಡು ವರ್ತನೆಯನ್ನು ಪ್ರಶ್ನಿಸುವ ಪ್ರಸಂಗಗಳು ಒಂದರ ಹಿಂದೆ ಒಂದು ಎದುರಾಗುತ್ತವೆ. ಯುದ್ಧದ ಬಗೆಗೆ ಇರುವ ಪ್ರಭುತ್ವದ ನೆಲೆಯ ಎಲ್ಲ ಬಗೆಯ ಕಲ್ಪನೆ ಆದರ್ಶಗಳೂ ಇಲ್ಲಿ ವ್ಯಂಗ್ಯಾತ್ಮಕ ಭಾವದಲ್ಲಿ ವಿವೇಚನೆಗೆ ಒಡ್ಡಿಕೊಳ್ಳುತ್ತವೆ.

*ಮೊನೆಯೊಳ್ ಇದಿರ್ಚಿ ಸತ್ತಭಟನಂ ಗಜ ದೃಷ್ಟಿಯೊಳ್ ಆಣ್ಮ ಸತ್ತ ಬೀ*
*ರನನ್ ಅದಟಿಂ ಸಹಸ್ರಭಟರಂ ರಣದೊಳ್ ಪೊಣರ್ದಿಕ್ಕಿ ಸತ್ತ ಗಂ*
*ಡನನರಸುತ್ತೆ ಬರ್ಪ ಸುರಸುಂದರಿಯರ್ಕಳನೀಕ್ಷಿಸುತ್ತುಂ ಒ*
*ಯ್ಯನೆ ನಡೆದಂ ಪರಾಕ್ರಮ ನಿಕೇತನನಾ ಫಣಿರಾಜಕೇತನಂ*

– ಎಂದು ಪ್ರಭುತ್ವದ ನಡೆಯ ನೈತಿಕ ಮೂಲವನ್ನೇ ಪ್ರಶ್ನಿಸಿದ ಈ ವಿಚಾರ ಪ್ರಭುವಿನ ಆಶ್ರಯದಲ್ಲಿದ್ದೂ ಪ್ರಭುತ್ವದ ಕುರುಡು ವರ್ತನೆಗಳನ್ನು ಝಂಕಿಸಿದ ಕವಿಚಕ್ರವರ್ತಿಯ ಜಾಣ್ಮೆಗೆ, ಜನಪರ ನಿಲುವಿಗೆ, ಹಿಡಿದ ಕನ್ನಡಿಯಂತಿದೆ. ಪ್ರಭುತ್ವದ ಬಲದ ಪ್ರತೀಕವಾದ ಕನಕಲತಾಲಾಂಛಿತ ಗದೋತ್ತುಂಗವನ್ನು ಎತ್ತಿ ಮರುಳಿನ ಮೇಲೆ ಪ್ರಹಾರ ಮಾಡಲು ಚಕ್ರವರ್ತಿ ಹವಣಿಸಿದಾಗ ಅದಕ್ಕೆ ಪ್ರತಿಯಾಗಿ ಒಂದು ಮರುಳಲ್ಲ, ಇಡೀ ಭೂತಕೋಟಿ ಬಡಿಗೆಗಳನ್ನು ಎತ್ತಿಕೊಂಡು ಪ್ರಭುತ್ವದ ವಿರುದ್ಧ ನಿಲ್ಲುತ್ತವೆ. ಪ್ರಭುತ್ವದ ಅಟ್ಟಹಾಸ ವಿವೇಕದ ಗಡಿಗೆರೆಗಳನ್ನು ದಾಟಿದಾಗ ನಡೆಯಬಹುದಾದ 'ಸಿವಿಲ್‌ವಾರ್' ಒಂದನ್ನು ನೆನಪಿಸುವ ಈ ಚಿತ್ರಣ ಏನೆಲ್ಲ ಹೇಳುತ್ತಿದೆ. ಕನಕಲತಾ ಲಾಂಛಿತ ಗದೋತ್ತುಂಗ v/s ಬಡಿಗೆಗಳು, ಸಾಮ್ರಾಜ್ಯಶಾಹಿ v/s ಬಡರಾಷ್ಟ್ರಗಳು, ಶೋಷಕ v/s ಶೋಷಿತರು. ಕವಿ ರನ್ನನ ಮುಂಗಾಣ್ಕೆ ಯುದ್ಧಕ್ಕೆ ಪ್ರತಿಯಾಗಿ ಮತ್ತೊಂದು ಯುದ್ಧವನ್ನು ಆಯೋಜಿಸುವುದಲ್ಲ. ಸೇಡಿಗೆ ಸೇಡು ಉತ್ತರವಲ್ಲ. ಆಯುಧಕ್ಕೆ ಪ್ರತಿಯಾಗಿ ಅರಿವನ್ನೂ, ಆವೇಶಕ್ಕೆ ಪ್ರತಿಯಾಗಿ ವಿವೇಕವನ್ನೂ ಪೊಸೆಯಿಸುವುದೇ ಕವಿಧರ್ಮ. ಈ ಅಂಶವನ್ನು ರನ್ನ ತನ್ನ ಕೃತಿಯಲ್ಲಿ ಸಮರ್ಥವಾಗಿ ನಿರ್ವಹಿಸಿದ್ದಾನೆ.

ಶರಮಂಚದಲ್ಲಿ ಮಲಗಿದ್ದ ಭೀಷ್ಮನನ್ನು ನೋಡಲು ಬಂದಾಗ, ದುರ್ಯೋಧನನನ್ನು ಸಂಧಾನಕ್ಕೆ ಒಪ್ಪಿಸಲು ಭೀಷ್ಮ ಮರಳಿ ಯತ್ನವ ಮಾಡುತ್ತಾನೆ. ಅದೂ ನಿಷ್ಫಲವಾಗುತ್ತದೆ. ಆಗ ಭೀಷ್ಮ ಅಂಧರಾಜನಿಗೆ ಪತ್ರವೊಂದನ್ನು ಬರೆದು

ದುರ್ಯೋಧನನ ಕೈಗೆ ಕೊಟ್ಟು ಅದನ್ನು ಅವನಿಗೆ ತಲುಪಿಸುವಂತೆ ಹೇಳುತ್ತಾನೆ. ಆ ಪ್ರಸಂಗ ರನ್ನನ ಕವಿ ಹೃದಯಕ್ಕೆ ಕನ್ನಡಿ ಹಿಡಿವ ಪ್ರಸಂಗವಾಗಿದೆ.

*ಶರಮೊಂದಂ ತೆಗೆದು ನಿಜೋ*
*ದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಯಂ*
*ತರಿಸಿ ಪತಾಕಾ ಪಟದೊಳ್*
*ಬರೆದಟ್ಟಿದನಂಥ ನೃಪತಿಗಂ ಸಿಂಧುಸುತಂ.*

– ಇಲ್ಲಿ ಯುದ್ಧಕ್ಕಾಗಿ ಬಳಕೆಯಾದ ಎಲ್ಲ ಯುದ್ಧ ಸಾಮಗ್ರಿಗಳನ್ನು ಕವಿ ರನ್ನ ವಿಸ್ತರಣೆಗೆ ಅಗತ್ಯವಾಗುವ, ಅಕ್ಷರದ ಬೆಳಕಿಗೆ ಬಳಕೆಯಾಗುವ ಪರಿಕರಗಳನ್ನಾಗಿಸಿ ಮಾರ್ಪಡಿಸುತ್ತಿದ್ದಾನೆ. ಯುದ್ಧದಲ್ಲಿ ಬಳಕೆಯಾದ ಆ ಎಲ್ಲವೂ ಈಗಾಗಲೇ ಹಿಂಸೆ ಕ್ರೌರ್ಯ ಜೀವಹಾನಿಗೆ ಕಾರಣಗಳಾಗಿ ಮಲಿನಗೊಂಡಿವೆ. ಆವೇಶದ ಅನರ್ಥಕ್ಕೆ ಒದಗಿದವುಗಳನ್ನು ಅರಿವಿನ ವಿಸ್ತರಣೆಗೆ ಬೇಕಾದ ಪರಿಕರಗಳಾಗಿ ಪವಿತ್ರೀಕರಿಸುತ್ತಿದ್ದಾನೆ ಕವಿ. ಪ್ರಾಣ ತೆಗೆಯುವ ಬಾಣವನ್ನು ಪಾಲಿಸುವ ಅರಿವಿನ ಅಕ್ಷರ ಬರೆಯುವ ಪೆನ್ನಾಗಿಸಿದ್ದಾನೆ. ಆನೆಯ ಮದ ಮಸಿಯನ್ನು ಬರಹಕ್ಕೆ ಬೇಕಾದ ಇಂಕಾಗಿಸಿದ್ದಾನೆ. ಪ್ರಭುವಿನ ಕೀರ್ತಿಪತಾಕೆಯ ಸಂಕೇತವಾಗಿದ್ದ ಬಾವುಟದ ಬಟ್ಟೆಯನ್ನು ಪೇಪರಾಗಿಸಿದ್ದಾನೆ. ಪ್ರಭುತ್ವದಲ್ಲಿ ಬಳಕೆಯಾದ ಈ ಮೂರು ಸಾಧನಗಳು ಕೇವಲ ಸಾಧನಗಳು, ಆವೇಶದ ಕೈಯಲ್ಲಿ ಅನರ್ಥಕಾರಿಗಳಾಗುತ್ತವೆ, ವಿವೇಕದ ಕೈಯಲ್ಲಿ ಅರಿವಿನ ವಿಸ್ತರಣೆಗಳಾಗುತ್ತವೆ.

ಇಂದಿನ ವಿಜ್ಞಾನದ ಆವಿಷ್ಕಾರ ವಿನಾಶದ ಅಂಚಿಗೆ ಜಗತ್ತನ್ನು ದೂಡುತ್ತಿರುವಂತೆ ದುರ್ಬಳಕೆಯಾಗುತ್ತಿರುವಾಗ ರನ್ನನ ಈ ಕಾವ್ಯ ಕಟ್ಟಿಕೊಡುವ ಸಂದೇಶ ಜಗತ್ತನ್ನು ಮುನ್ನಡೆಸಬೇಕಾದ ದಿಕ್‌ಸೂಚಿಯಂತಿದೆ. ಆದರೆ ಕವಿಗೆ ಇದೂ ಗೊತ್ತಿದೆ. ಈ ಪತ್ರವನ್ನು ಬರೆಯುತ್ತಿರುವುದು ಒಬ್ಬ ಅಂಧ ನೃಪನಿಗೆ ಎಂದು, ಹೊರಗಣ್ಣು ಕುರುಡಾಗಿದ್ದರೂ ಪರವಾಗಿಲ್ಲ ಒಳಗಣ್ಣು ತೆರೆದು ಅನಾಹುತವನ್ನು ತಪ್ಪಿಸಲಿ ಎಂಬುದು ಕವಿಯ ಆಶಯ. ಇದು ಸಿಂಧುಸುತನ ಆಶಯ. ಹೀಗೆ ಸಾಹಸಭೀಮ ವಿಜಯದ ವ್ಯಂಗ್ಯಾತ್ಮಕ ಕಥನ ಜನರ ನಡುವಿನ ನೋವಿಗೆ ಮಿಡಿದಿದೆ. ಜನರ ಬದುಕಿನ ಒಳಿತಿಗೆ ತುಡಿದಿದೆ. ರಕ್ತಕ್ರಾಂತಿಗಿಂತ ವಿಚಾರಕ್ರಾಂತಿ ಜಗತ್ತನ್ನು ಮುನ್ನಡೆಸುವ ಕಲ್ಯಾಣಶಕ್ತಿ ಎಂಬುದನ್ನು ಮುಂಗಂಡಿದೆ. ವಿಚಾರಕ್ರಾಂತಿಯ ವೈಫಲ್ಯವನ್ನೂ ಅಂಧನೃಪನ ಸೂಚನೆಯಲ್ಲಿ ಮನಗಾಣಿಸಿದೆ. ಇದು ಕವಿ ಕಾಣ್ಕೆ. ವರ್ತಮಾನದ ಒತ್ತಡದಲ್ಲಿ ಭವಿಷ್ಯವನ್ನು ಮುಂಗಂಡ ಪರಿ.

*(ಗೋರೆಗಾಂವ್ ಕರ್ನಾಟಕ ಸಂಘ, ಮುಂಬೈ, ಫೆಬ್ರವರಿ ೭ರಂದು ನಡೆಸಿದ ವಿಚಾರಭಾರತಿ ಸಾಹಿತ್ಯ ಸಮ್ಮೇಳನದಲ್ಲಿ ಮಂಡಿಸಿದ ಅಧ್ಯಕ್ಷ ಭಾಷಣದಿಂದ ಆಯ್ದ ಭಾಗ.)*

**ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ**
ಎಸ್-೧೨೩, 'ದೀಪ್ತಿ ಅಪಾರ್ಟ್‌ಮೆಂಟ್ಸ್', ಎಫ್-೨, ಕಿರ್ಲೋಸ್ಕರ್ ಕಾಲೋನಿ, ೧ನೇ ಅಡ್ಡ ರಸ್ತೆ, ಬಸವೇಶ್ವರ ನಗರ
ಬೆಂಗಳೂರು - ೫೬೦ ೦೭೯

# ಸ್ಫೋಟ



**ಮ**ಕ್ಕಳು ಶಾಲೆಗೆ
ಯಜಮಾನ ದುಡಿಮೆಗೆ
ಹೀಗೆ... ಎಲ್ಲರೂ ಅವರವರ
ಜವಾಬ್ದಾರಿ ನಿಭಾಯಿಸಲು
ಹೋಗಿದ್ದಾರೆ ಹೊರಗೆ

ಈಗ...
ಮನೆ ನಿಶ್ಶಬ್ದ
ಎಷ್ಟೆಂದರೆ ಅವಳ
ಎದೆಯೊಳಗಿನ ಭಯದ
ದಿಗಿಲಿನ ಲಬ್ ಡಬ್
ಹೊಡೆತ ಕೇಳುವಷ್ಟು...

ಆದರೂ...
ಮನೆಯೊಳಗಿನ ಗಡಿಯಾರಕ್ಕೆ
ಇದ್ಯಾವುದರ ಪರಿವೆಯೇ ಇಲ್ಲ
ಅರೆಗಳಿಗೆ ಸಾವರಿಸಿಕೊಳ್ಳದೆ
ಟಿಕ್. ಟಿಕ್ ಶಬ್ದ ಮಾಡುತ್ತಾ
ಎಚ್ಚರಿಸುತ್ತಲೇ ಇದೆ.

ಪಾಪ ! ಗಡಿಯಾರಕ್ಕೆ
ಹೇಗೆ ತಾನೆ ಗೊತ್ತಾಬೇಕು
ಅವಳೊಳಗಿನ ತಳಮಳ ?!
ಮೊನ್ನೆ ಪರವೂರಲ್ಲಿ
ನಿನ್ನೆ ಪಕ್ಕದೂರಲ್ಲಿ
ಯಾರಿಗೆ ಗೊತ್ತು ?!
ಇಂದು ಇಲ್ಲಿಯೂ ಆ...
ಶಬ್ದ ಕೇಳಿಸಿದರೂ ಕೇಳಿಸಬಹುದು.

ಸ್ಫೋಟ ! ಈಗ ಮೊದಲಿನಂತಲ್ಲ
ಪಟಾಕಿಯಷ್ಟೇ ಸಲೀಸು
ಅಥವಾ ಇರಬಹುದು ಜನರೇ...
ಸ್ಫೋಟಕಗಳಿಗಿಂತ ಬಿರುಸು
ಕೆಲಸ ಬೆಟ್ಟದಷ್ಟಿದೆ
ಕನಸು ಕಣ್ಣಿಗೆ
ಕಟ್ಟುವಷ್ಟು ಇದೆ

ಭಯ, ಆತಂಕ
ಉಸಿರುಗಟ್ಟಿಸುವಷ್ಟಿರುವಾಗ
ನಿರಾಳವಾಗಿ ಉಸಿರಾಡಲಾದರೂ
ಮನಸ್ಸೆಲ್ಲಿದೆ ಅವಳಿಗೆ... ?

ಗಡಿಯಾರದ ಮೇಲೂ
ಮುಂಬಾಗಿಲೆಡೆಗೂ ನೆಟ್ಟ
ಅವಳ ನೋಟದಲ್ಲಿ
ಸಂಜೆಗಾಗಿ ಕ್ಷಣಗಣನೆ
ಹೊರಗೆ ಕಾಲಿಟ್ಟವರು
ಒಳಕ್ಕೆ ಅಡಿ ಇಡುವವರೆಗೂ
ಮನಸ್ಸಿಗಿಲ್ಲ ವ್ಯವಧಾನ...?

ದೇವರೇ...
ನಿನ್ನೆ ಮೊನ್ನೆಯಂತೆ
ಇನ್ನೆಲ್ಲೂ ಆ ಶಬ್ದ ಕೇಳಿಸದಿರಲಿ...

ದುರದೃಷ್ಟವಶಾತ್
ಕೇಳಿಸಿತೆಂದರೆ
ಇನ್ನು ಮುಂದೆ
ಅವಳಿರುವ ಮನೆಗಳಲ್ಲಿ
ದೀಪ ಉರಿಯಲಾರದು
ಗಡಿಯಾರ ಶಬ್ದ ಹೊರಡಿಸಲಾರದು
ಮುಂಬಾಗಿಲು ತೆರೆದಿರಲಾರದು...!

**ಸ್ಮಿತಾ ಅಮೃತರಾಜ್ ಸಂಪಾಜೆ, ಸುಳ್ಯ**
ಅಂಚೆ : ಬಾಲಂಬಿ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು - ೫೭೧ ೨೩೪

# ನಾಡಿನ ಜನತೆಯೊಡನೆ ಸಂವಾದ



**ನ**ಮ್ಮ ೬೧ನೆಯ ಗಣರಾಜ್ಯ ಸಮಾರಂಭಕ್ಕೆ ಮುನ್ನ ನಾನೊಂದು ಸಂವಾದ ಆರಂಭಿಸಿದೆ. ಆಗಿನ ಆಶಾಭಾವನೆ ಸ್ವಲ್ಪ ಮುಕ್ಕಾಗಿದೆ ಎನಿಸುತ್ತಿದೆ. ಸರ್ವೋಚ್ಚ ನ್ಯಾಯಾಲಯದ 'ಕೊಲೀಜಿಯಂ' ಸಮಾಜದ ಹಲವು ವಿಭಾಗಗಳ ಟೀಕೆಗೆ ಗುರಿಯಾಗಿದೆ. ಆದರೆ ಸಾರ್ವಜನಿಕ ಅಭಿಪ್ರಾಯವನ್ನು ಮನ್ನಿಸಲು ಕೊಲೀಜಿಯಂ ಮುಂದಾಗಿಲ್ಲ.

ಪ್ರಜಾಪ್ರಭುತ್ವದಲ್ಲಿ ಜನತೆಗೆ ಆದ್ಯತೆ ಇರಬೇಕು. ಆಡಳಿತವು ಸಹ ಜನತೆಗೆ ಲೆಕ್ಕ ಕೊಡುವ ಅಗತ್ಯವಿದೆ. ಇದರಲ್ಲಿ ಅವಜ್ಞೆಗೆ ಅವಕಾಶವಿಲ್ಲ. ಜನತೆಯ ಅಭಿಪ್ರಾಯ, ಆಕಾಂಕ್ಷೆ ಮತ್ತು ಕಷ್ಟನಿಷ್ಠೂರಗಳಿಗೆ ಸ್ಪಂದಿಸುವುದು ಪ್ರಭುತ್ವದ ಕರ್ತವ್ಯ. ನ್ಯಾಯಾಂಗವು ಪ್ರಭುತ್ವದ ಒಂದು ಅಂಗ. ತನ್ನ ರಕ್ಷಕನೆಂದು ಜನತೆ ಅದರತ್ತ ಆದರ ಹೊಂದಿದೆ. ಆ ಆಶಯವನ್ನು ಹುಸಿಯನ್ನಾಗಿಸಬಾರದು.

ಪ್ರಭುತ್ವದ ಒಂದು ಅಂಗವಾಗಿ ನ್ಯಾಯಾಂಗವು ಜನತೆಯ ನಿರೀಕ್ಷೆಯನ್ನು ಅರ್ಥಮಾಡಿಕೊಳ್ಳಬೇಕು. ನ್ಯಾಯಾಂಗದ ಕಾರ್ಯನಿರ್ವಹಣೆ ಆಗುವುದು ನ್ಯಾಯಾಲಯಗಳ ಮುಖಾಂತರ. ಸರ್ವೋಚ್ಚ ನ್ಯಾಯಾಲಯ, ಕೊಲೀಜಿಯಂ, ಇವೆಲ್ಲಾ ಉಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳನ್ನು ನೇಮಕ ಮಾಡುವ ಸ್ಥಾನದಲ್ಲಿದ್ದು, ಅವುಗಳ ತೀರ್ಮಾನವೇ ಬಹುಮಟ್ಟಿಗೆ ಅಂತಿಮವಾದ್ದು. ಆದರೆ ಕೊಲೀಜಿಯಂನ ಕೆಲಸವು ನಿಗೂಢವಾಗಿ ಉಳಿದುಬಿಡುತ್ತದೆ. ಇದು ಆರೋಗ್ಯಕರವಲ್ಲವೆಂದು ಕಾನೂನು ವಲಯಗಳಲ್ಲಿ ಕೂಡ ಭಾವಿಸಲಾಗಿದೆ. ಎಲ್ಲರಿಗೂ ಲಭ್ಯವಾಗಿರಬೇಕಾದ ಮಾಹಿತಿಯನ್ನು ಕೊಲೀಜಿಯಂ ಮುಚ್ಚಿಡ ಹೊರಡುವುದು ಅನೇಕ ಅನುಮಾನಗಳಿಗೆ ಕಾರಣವಾಗಿದೆ. ಏನನ್ನಾದರೂ ಮುಚ್ಚಿಡುವ ಹುನ್ನಾರವಿದೆಯೇ ಎಂಬ ಶಂಕೆ ಸಹ ಆಗಾಗ್ಗೆ ವ್ಯಕ್ತವಾಗಿದೆ. ಮಾಹಿತಿಯು ರಹಸ್ಯವಾದದ್ದೆಂದು ಕೊಲೀಜಿಯಂ ಪರವಾಗಿ ಸಮರ್ಥನೆ ನೀಡಿದರೆ ಸಾರ್ವಜನಿಕರು ಅದನ್ನು ಗುಮಾನಿಯಿಂದ ನೋಡುತ್ತಾರೆ ಮತ್ತು ನ್ಯಾಯಾಂಗದ ಕಾರ್ಯನಿರ್ವಹಣೆಗೆ ಪೂರಕವಾಗುವುದಿಲ್ಲ. ಉದಾಹರಣೆಗೆ, ನ್ಯಾಯಮೂರ್ತಿ ಪಿ. ಡಿ. ದಿನಕರನ್ ಅವರನ್ನು ಕೊಲೀಜಿಯಂ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಸ್ಥಾನಕ್ಕೆ ಶಿಫಾರಸ್ಸು ಮಾಡಿತ್ತು. ಅದನ್ನು ಹೇಗೆ ಮಾಡಲಾಯಿತೆಂಬುದನ್ನು ಈವರೆಗೆ ತಿಳಿಸಿಲ್ಲ. ನ್ಯಾಯಾಂಗ ವ್ಯವಸ್ಥೆಯ ಗೌರವ ರಕ್ಷಣೆಗಾಗಿ ಇಂತಹ ಮಾಹಿತಿಯನ್ನು ಹೊರಗೆಡಹಲಾಗದೆಂದು ಭಾವಿಸುವುದು ಎಷ್ಟರಮಟ್ಟಿಗೆ ಸರಿ ? ಕೆಲವು ನ್ಯಾಯಮೂರ್ತಿಗಳ ಹಿತವನ್ನು ಕಡೆಗಣಿಸಿ ನ್ಯಾಯಾಲಯದ ಘನತೆಯನ್ನು ಎತ್ತಿಹಿಡಿಯುವುದು ಸರಿ; ಆದರೆ ನ್ಯಾಯಾಲಯದ ಹಿತವನ್ನು ಕಡೆಗಣಿಸಿ ನ್ಯಾಯಮೂರ್ತಿಗಳ ಘನತೆಯನ್ನು ಎತ್ತಿಹಿಡಿಯುವುದು ಅಗತ್ಯವೇ ? ಈಗ ಕೊಲೀಜಿಯಂ ಹಾಗೆ ಮಾಡುತ್ತಿದೆಯೆನಿಸುತ್ತದೆ. ನ್ಯಾಯಮೂರ್ತಿಗಳ ನಡೆವಳಿಕೆ, ಕಾರ್ಯಶೈಲಿ ಇತ್ಯಾದಿಗಳ ಬಗೆಗೆ ಮಾಹಿತಿ ನೀಡಲು ನಿರಾಕರಿಸಿರುವ ಕೊಲೀಜಿಯಂ ಅದಕ್ಕೆ ಕೊಡುವ ಕಾರಣವೆಂದರೆ ನ್ಯಾಯಾಲಯದ ಘನತೆಗೆ ಕುಂದು ಉಂಟಾಗುತ್ತದೆ ಎಂಬುದು.

ನ್ಯಾಯಮೂರ್ತಿ
**ಡಿ. ವಿ. ಶೈಲೇಂದ್ರ ಕುಮಾರ್**

ನಿಜಕ್ಕೂ ನೋಡಿದರೆ ಕುಂದು ಉಂಟಾಗುವುದು ಮಾಹಿತಿ ನೀಡದಿದ್ದಾಗ; ಏಕೆಂದರೆ, ಯಾರೋ ನ್ಯಾಯಮೂರ್ತಿಗಳನ್ನು ರಕ್ಷಿಸುವ ಹುನ್ನಾರವಿದೆಂದು ಜನ ಭಾವಿಸಲು ಅವಕಾಶ ಕಲ್ಪಿಸಿದಂತಾಗುತ್ತದೆ. ಕೆಲವು ನ್ಯಾಯಮೂರ್ತಿಗಳ ಘನತೆ ಹಿರಿದೋ ಅಥವಾ ನ್ಯಾಯಾಂಗದ ಘನತೆ ಹಿರಿದೋ ? ಒಬ್ಬ ವ್ಯಕ್ತಿಯ ಘನತೆಯನ್ನು ಆತನ ವೈಯಕ್ತಿಕ ನಡೆವಳಿಕೆಯಿಂದ ತೀರ್ಮಾನಿಸಲಾಗುತ್ತದೆ. ಸಾರ್ವಜನಿಕರು ನ್ಯಾಯಾಂಗ ಸಂಸ್ಥೆಯನ್ನು ಮಾಪನ ಮಾಡುವುದು ಅದರ ಅವಿಭಾಜ್ಯ ಭಾಗಗಳಾದ ವ್ಯಕ್ತಿಗಳ ನಡೆವಳಿಕೆಯ ಆಧಾರದ ಮೇಲೆ. ಸಂವಿಧಾನದಡಿ ನ್ಯಾಯಾಂಗ ಸಂಸ್ಥೆಯು ಸ್ವತಃ ಒಳ್ಳೆಯ ಅಥವಾ ಕೆಟ್ಟ ಸಂಸ್ಥೆಯಲ್ಲ; ಹೆಚ್ಚೆಂದರೆ ಅದೊಂದು ಮೌನ ವೀಕ್ಷಕ. ಆದರೆ ಸಂಸ್ಥೆಯು ಪಡೆದುಕೊಳ್ಳುವ ಆದರವು ಅದರಲ್ಲಿ ಅಂತರ್ಗತವಾಗಿರುವ ವ್ಯಕ್ತಿಗಳ ನಡತೆಯಿಂದ. ಸರ್ವೋಚ್ಚ ನ್ಯಾಯಾಲಯದ ಕೊಲೀಜಿಯಂ ಇದನ್ನು ಈಗಲಾದರೂ ತಿಳಿದುಕೊಳ್ಳಬೇಕು, ನ್ಯಾಯಾಂಗದ ಹಿತವನ್ನು ಕಾಪಾಡಲು ಮುಂದಾಗಬೇಕು. ತಪ್ಪಿತಸ್ಥ ನ್ಯಾಯಮೂರ್ತಿಗಳ ವ್ಯಕ್ತಿತ್ವ ಮತ್ತು ಗೌರವಗಳನ್ನು ಕಾಯುವುದು ಅದರ ಹೊಣೆಯಾಗಬಾರದು.

ಇದೆಲ್ಲವನ್ನು ಕುರಿತಂತೆ ವೈಯ್ಯಕ್ತಿಕವಾಗಿ ನಾನು ಕೆಲವು ಕ್ರಮಗಳನ್ನು ಅನುಸರಿಸಿದ್ದೇನೆ. ಸಾರ್ವಜನಿಕರು ಹಾಗೂ ನನ್ನ ಹಲವು ಸೋದರ-ಸೋದರಿ ನ್ಯಾಯಮೂರ್ತಿಗಳು ಮತ್ತು ಬೇರೆ ರಾಜ್ಯಗಳ ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳು ಅದನ್ನು ಅಸಾಮಾನ್ಯವಾದ ದಿಟ್ಟ ಹೆಜ್ಜೆಯೆಂದು ಬಣ್ಣಿಸಿದ್ದಾರೆ. ಆದರೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಅದನ್ನು ಅಪಥ್ಯವೆಂಬಂತೆ ಕಂಡಿದ್ದಾರೆ. ಅದೇನೇ ಇರಲಿ, ನಾನು ಮಾಡುತ್ತಿರುವುದು ನನ್ನ ಕರ್ತವ್ಯವೆಂದಷ್ಟೇ ಭಾವಿಸಿದ್ದೇನೆ.

ಇದೇ ಸಂಬಂಧದಲ್ಲಿ ೨೦೧೦ರ ಮಾರ್ಚ್ ೮ರಂದು ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಿಗೆ ನಾನೊಂದು ಪತ್ರವನ್ನು ಬರೆದಿದ್ದೆ. ಅದರ ಸಾರಾಂಶವನ್ನು ತಿಳಿಯಲು ಸಾರ್ವಜನಿಕರು ಹಕ್ಕುದಾರರು.



ಮುಖ್ಯ ನ್ಯಾಯಮೂರ್ತಿಗಳನ್ನು ೨೦೦೯ರ ನವಂಬರ್‌ನ ಮೊದಲ ವಾರದಲ್ಲಿ ಸಂಧಿಸಿ ಕೆಲವು ವಿಷಯಗಳನ್ನು ಅವರೊಡನೆ ಚರ್ಚಿಸಿದ್ದೆ. ನನ್ನ ಆಗ್ರಹಗಳು ಮೂರು : (ಅ) ಅವರು ನ್ಯಾಯವಿತರಣೆಯಲ್ಲಿ ಭಾಗವಹಿಸ ಬಾರದು, (ಆ) ರಾಜಿನಾಮೆ ನೀಡಿ ನಿರ್ಗಮಿಸಬೇಕು, ಮತ್ತು (ಇ) ಕಾನೂನುಬದ್ಧವಾಗಿ ತಮ್ಮದಾಗಿಸಿಕೊಂಡಿರುವ ಆಸ್ತಿಯನ್ನು ಮಾತ್ರ ಇಟ್ಟುಕೊಂಡು ಮಿಕ್ಕಿದ್ದನ್ನು ರಾಜ್ಯಕ್ಕೆ ಬಿಟ್ಟುಕೊಡಬೇಕು. ಹಾಗೆ ಅವರು ಬಿಟ್ಟುಕೊಟ್ಟ ಆಸ್ತಿಯನ್ನು ಬಡವರಿಗೆ ಹಂಚಬಹುದು, ತನ್ಮೂಲಕ ಸ್ವತಃ ನ್ಯಾಯಮೂರ್ತಿಗಳಿಗೆ ಪ್ರಿಯವೆನ್ನಲಾದ ಸಾಮಾಜಿಕ ನ್ಯಾಯಕ್ಕೆ ಅನುವಾಗಬಹುದು.

ನಾನಾಗ ಅವರಿಗೆ ನ್ಯಾಯಮೂರ್ತಿ ಡಿ. ಎಂ. ಚಂದ್ರಶೇಖರ್ ಬರೆದ ಬಸವೇಶ್ವರರ ಜೀವನ ಚರಿತ್ರೆ ಹಾಗೂ ರೆನಿ ಜಾರ್ಜ್ ಎಂಬೊಬ್ಬ ಆಜೀವ ಸೆರೆಮನೆ ವಾಸಿಯನ್ನು ಕುರಿತ ಒಂದಷ್ಟು ಮಾಹಿತಿಯನ್ನು ಕೊಟ್ಟಿದ್ದೆ. ಈ ಜಾರ್ಜ್ ಎಂಬಾತ ಮಾದಕದ್ರವ್ಯ ವ್ಯಸನಿಯಾಗಿ ವೃದ್ಧ ದಂಪತಿಗಳನ್ನು ಕೊಂದಿದ್ದ. ಕಾರಾಗೃಹದಲ್ಲಿ ಅವನ ನಡತೆ ಮೊದಲಿನಂತೆಯೇ ಮುಂದುವರಿದಿತ್ತು. ಒಮ್ಮೆ ಪಾದ್ರಿಯೊಬ್ಬನ ಪ್ರವಚನ ಕೇಳಿ ಹಠಾತ್ತನೆ ಸಂಪೂರ್ಣವಾಗಿ ಬದಲಾದ ಮತ್ತು ಕಾರಾಗೃಹದಲ್ಲಿದ್ದುಕೊಂಡು ಹೊರಗಿದ್ದ ತನ್ನ ಕುಟುಂಬಕ್ಕೆ ನೆರವಾಗಲು, ಮಕ್ಕಳಿಗೆ ಶಿಕ್ಷಣ ಕೊಡಿಸಲು, ಸಂಪಾದನೆಯಲ್ಲಿ ತೊಡಗಿದ. ಹೊರಬಂದ ನಂತರ ಅನಾಥ ಮಕ್ಕಳಿಗಾಗಿ ಒಂದು ಆಲಯ ನಿರ್ಮಿಸಿದ ಮತ್ತು ಚರ್ಚಿನ ಪಾದ್ರಿಯಾಗಿ ಹೆಸರುಗಳಿಸಿದ. ಬಸವೇಶ್ವರರ ಹಿನ್ನೆಲೆಯಲ್ಲಿ ನ್ಯಾಯಮೂರ್ತಿ ದಿನಕರನ್ ಅವರು ಜಾರ್ಜ್‌ನಂತಾಗಲೆಂದು ನನ್ನ ಆಶಯವಾಗಿತ್ತು, ಅದನ್ನವರಿಗೆ ತಿಳಿಸಿದ್ದೆ. ಬಸವೇಶ್ವರರು ಜಾತಿ, ವರ್ಣ, ಧರ್ಮಗಳ ಸಂಕೋಲೆಯಿಂದ ಹೊರಬಂದು ಕಾಯಕದಲ್ಲಿ ತೊಡಗಲು ಮನುಕುಲಕ್ಕೆ ಪ್ರೇರಣೆ ನೀಡಿದ್ದ, ಲಿಂಗ ಸಮಾನತೆಯನ್ನು ಪಾಲಿಸಿದ ಆತ ಉನ್ನತಮಟ್ಟದ ಸಮಾಜ ವಾದವನ್ನು ಆಚರಣೆಗೆ ತಂದಿದ್ದ. ಇಂಥವರ ಹಾದಿಯಲ್ಲಿ ಮುನ್ನಡೆದರೆ ನಮ್ಮ ನ್ಯಾಯಾಧೀಶರು ಎರಡನೆ ಜೀಸಸ್ ಕ್ರೈಸ್ಟ್ ಆಗಬಹುದು.

ನನ್ನ ಸಲಹೆಗೆ ನ್ಯಾಯಮೂರ್ತಿ ದಿನಕರನ್ ಅವರ ಪ್ರತಿಕ್ರಿಯೆ ಕೇವಲ ಮೌನ. ಅಂದು ನಮ್ಮೊಂದಿಗಿದ್ದ ಬೇರಿಬ್ಬರು ನ್ಯಾಯಮೂರ್ತಿಗಳ ಪೈಕಿ ಒಬ್ಬರು ಮುಖ್ಯ ನ್ಯಾಯಾಧೀಶರ ರಾಜಿನಾಮೆ ಕೇಳುವುದು ಸರಿಯಲ್ಲವೆಂದು ಹೇಳಿದ್ದರು. ಅದಕ್ಕವರು ಕೊಟ್ಟ ಕಾರಣ, ಸರ್ವೋಚ್ಚ ನ್ಯಾಯಾಲಯವು ಚೆನ್ನೈನ ವಕೀಲರ ಆಪಾದನೆಗಳನ್ನು ಪರಿಶೀಲಿಸಲು ಸಮಿತಿಯೊಂದನ್ನು ರಚಿಸಿದ್ದಿತು ಎಂಬುದಾಗಿತ್ತು. ಸ್ವತಃ ದಿನಕರನ್ ಅವರು ತಮ್ಮ ಅಂತಸ್ಸಾಕ್ಷಿಯು ನಿರ್ಮಲವಾಗಿದೆಯೆಂದು ಹೇಳಿ ತಮ್ಮಲ್ಲಿ ಎಲ್ಲ ದಾಖಲೆಗಳೂ ಇವೆಯೆಂದು ಸಾಧಿಸಿದ್ದರು. ತಮ್ಮ ಆಸ್ತಿಗಳಿಕೆಯು ಸರ್ವಥಾ ನ್ಯಾಯಯುತವಾದುದೆಂಬುದು ಅವರ ಸಮರ್ಥನೆಯಾಗಿತ್ತು. ಅವರ ಮೇಲಿನ ಆಪಾದನೆಗಳ ಸತ್ಯಾಸತ್ಯತೆಯು ನನಗೆ ಆದ್ಯ ವಿಷಯವಾಗಿರಲಿಲ್ಲ. ಕರ್ನಾಟಕ ಉಚ್ಚ ನ್ಯಾಯಾಲಯದ ಘನತೆಯನ್ನು ಎತ್ತಿಹಿಡಿಯುವುದು ನನಗೆ ಮುಖ್ಯವಾಗಿತ್ತು. ಘನತೆಗೆ ಪೆಟ್ಟು ಬಿದ್ದಿತ್ತು, ಇವರ ನಿರ್ಗಮನವು ಅದನ್ನು ಮತ್ತೆ ದೊರಕಿಸಿಕೊಡುವ ಸಾಧ್ಯತೆ ಇತ್ತು. ಆದರೆ ಅವರ ಪ್ರತಿಕ್ರಿಯೆ ಬೇರೆಯದೇ ಇತ್ತು. ತಮ್ಮ ನಡತೆಯಿಂದ ನ್ಯಾಯಾಲಯಕ್ಕೆ ಹಾನಿಯಾಗಿರಲಿಲ್ಲ, ಬದಲಾಗಿ ನಾನು ನ್ಯಾಯಾಂಗದ ವಿಧಾನಗಳನ್ನು ಮೀರಿ ಪತ್ರಿಕೆಗಳಿಗೆ ಹೇಳಿಕೆ ಕೊಟ್ಟಿದ್ದು ಹಾನಿಯನ್ನುಂಟುಮಾಡಿತ್ತು ಎಂಬುದು ಅವರ ಅಭಿಪ್ರಾಯವಾಗಿತ್ತು. ನನ್ನ ಬಗೆಗಿನ ಅವರ ಅಭಿಪ್ರಾಯವು ವೈಯಕ್ತಿಕವಾದುದೆಂದೂ, ಅದನ್ನು ಕುರಿತು ಬಹಿರಂಗ ಚರ್ಚೆಗೆ ಅವಕಾಶವಿದೆಯೆಂದೂ ನಾನು ಪುನರುಚ್ಚರಿಸಿದ್ದೆ. ಅಷ್ಟನ್ನು ಹೇಳಿ ಅವರ ಕೊಠಡಿಯಿಂದ ಹೊರಬಂದು ನ್ಯಾಯಾಲಯದಲ್ಲಿ ನನ್ನ ಕೆಲಸದಲ್ಲಿ ನಿರತನಾದೆ.

ದಿನಾಂಕ ೧೭-೧೨-೨೦೦೯ರಿಂದ ಮಾನ್ಯ ದಿನಕರನ್ ಅವರು ನ್ಯಾಯ ವಿತರಣೆಯ ಕೆಲಸವನ್ನು ನಿಲ್ಲಿಸಿದರು. ಅದು ನನ್ನ ಬೇಡಿಕೆಯ ಫಲವೋ ಸಾರ್ವಜನಿಕ ಒತ್ತಡದ ಪರಿಣಾಮವೋ ನನಗೆ ತಿಳಿಯದು. ಅದಕ್ಕೆ ಬೇರೆಷ್ಟೋ ಕಾರಣಗಳಿದ್ದಿರಲು ಸಾಕು. ಒಂದು ವಿವರಣೆಯನ್ನಂತೂ ನಾನವರಿಗೆ ಕೊಡುವ ಅಗತ್ಯವಿತ್ತು. ನಂತರದ ಕೆಲವು ಬೆಳವಣಿಗೆಗಳಿಗೆ, ವಿಶೇಷತಃ ಅವರು ಮದ್ರಾಸ್ ಉಚ್ಚನ್ಯಾಯಾಲಯದಲ್ಲಿ ನ್ಯಾಯಮೂರ್ತಿಗಳಾಗಿದ್ದಾಗಿನ ಅವರ ತಥಾಕಥಿತ ನಡೆವಳಿಕೆಗಳು ಮಾಧ್ಯಮಗಳಲ್ಲಿ ವರದಿಯಾದುದಕ್ಕೆ, ನಾನು ಸರ್ವಥಾ ಜವಾಬ್ದಾರನಲ್ಲ. ನನಗೆ ಕೂಡ ಅದೆಲ್ಲ ತಿಳಿದದ್ದು ಮಾಧ್ಯಮಗಳ ಮುಖಾಂತರವೇ. ಅದಿರಲಿ, ೨೦೦೯ರ ನವಂಬರ್ ೧೬ರಿಂದ ಗುಲ್ಬರ್ಗಾದಲ್ಲಿ ಸ್ಥಾಪಿಸಲ್ಪಟ್ಟಿರುವ ನ್ಯಾಯಪೀಠದಲ್ಲಿ ಕರ್ತವ್ಯ ನಿರ್ವಹಿಸಲು ನನ್ನನ್ನು ಕಳಿಸಲಾಗಿತ್ತು. ಅಲ್ಲಿ ನಮಗೆ ತಿಳಿದ ವಿಷಯ ಸ್ವಲ್ಪ ಘಾಸಿಯನ್ನುಂಟುಮಾಡಿತು : ಮಾನ್ಯ ದಿನಕರನ್ ಅವರು ನ್ಯಾಯ ವಿತರಣೆಯಲ್ಲಿ ಭಾಗವಹಿಸುತ್ತಿರಲಿಲ್ಲ, ಆದರೆ ಆಡಳಿತಾತ್ಮಕ ಕೆಲಸಗಳನ್ನು ಎಂದಿನಂತೆ ಮುಂದುವರಿಸುತ್ತಿದ್ದರು, ಎಂಬುದು. ಆ ಹಿನ್ನೆಲೆಯಲ್ಲಿ ೨೦೦೯ರ ಡಿಸೆಂಬರ್ ೧೯ರಂದು ಈ ವಿಷಯವನ್ನು ಚರ್ಚಿಸಲು ಬೆಂಗಳೂರಿನಲ್ಲಿ ನನ್ನ ಎಲ್ಲ ಸಹೋದ್ಯೋಗಿಗಳನ್ನು ಕರೆದು ಸಭೆ ನಡೆಸಬೇಕೆಂದು ಅವರಲ್ಲಿ ಬಿನ್ನವಿಸಿಕೊಂಡೆ; ಅದನ್ನವರು ತಳ್ಳಿಹಾಕಿದರು. ನಂತರ ಅದನ್ನು ಅನೌಪಚಾರಿಕವಾಗಿ ಚರ್ಚಿಸುವ ಉದ್ದೇಶದಿಂದ ಸಹೋದ್ಯೋಗಿಗಳಲ್ಲಿ ಮನವಿ ಮಾಡಿಕೊಂಡೆ. ಆದರೆ ಸಭೆಗೆ ಬಂದವರು ಐವರು ಮಾತ್ರ. ನಮ್ಮ 'ಅಧ್ಯಯನ ಕೂಟದ ಸಭೆ'ಗೆ ಇತರರು ಬರಲಾಗಲಿಲ್ಲ. ಆದರೆ ಈವರೆಗೂ ನ್ಯಾಯಮೂರ್ತಿ ದಿನಕರನ್ ಅವರು ಆಡಳಿತಾತ್ಮಕ ತೀರ್ಮಾನಗಳನ್ನು ಕೈಗೊಳ್ಳುತ್ತಲೇ ಇದ್ದಾರೆ. ಇದು ಆತಂಕಕಾರಿ ಬೆಳವಣಿಗೆಯೆಂದೇ ಹೇಳಬೇಕು. ನ್ಯಾಯ ವಿತರಣೆಯಲ್ಲಿ ಕ್ರಿಯಾಹೀನರಾದ ಮುಖ್ಯ ನ್ಯಾಯಾಧೀಶರು ಎಲ್ಲಿಯಾದರೂ ಆಡಳಿತ ಸಂಬಂಧಿ ತೀರ್ಮಾನಗಳನ್ನು ಕೈಗೊಳ್ಳುವ ಪದ್ಧತಿಯುಂಟೆ ? ಜೊತೆಗೆ, ಅವರಿಗೆ ಛೀಮಾರಿ ಹಾಕಬೇಕೆಂಬ ನಿರ್ಣಯವೊಂದು ಈಗ ಪಾರ್ಲಿಮೆಂಟಿನ ಮುಂದಿದೆ. ರಾಜ್ಯಸಭೆಯಲ್ಲಿ ಅದು ಮಂಡನೆಯಾಗಿದೆ. ಕಡೇಪಕ್ಷ ಔಚಿತ್ಯ ಮತ್ತು ಶಿಷ್ಟತೆಯ ಕಾರಣಕ್ಕಾದರೂ ಅವರು ನ್ಯಾಯವಿತರಣೆ ಮತ್ತು ಆಡಳಿತದಲ್ಲಿ ಭಾಗವಹಿಸಬಾರದು. ಔಚಿತ್ಯ ಮತ್ತು ನೈತಿಕತೆಯ ದೃಷ್ಟಿಯಿಂದ ಅವರು ಸಂಬಳ ಪಡೆಯಬೇಕೇ ಬೇಡವೇ ಎಂಬುದನ್ನು ವೈಯಕ್ತಿಕ ನೆಲೆಯಲ್ಲಿ ತೀರ್ಮಾನಿಸಿಕೊಳ್ಳಬೇಕು. ನಮ್ಮಲ್ಲಿ ಸೇವಾನಿಯಮಗಳಿಗೆ ಸಂಬಂಧಿಸಿ ಒಂದು ಮೂಲಭೂತ ತತ್ತ್ವವಿದೆ: ಅಮಾನತ್ತಿನಲ್ಲಿರುವ ನೌಕರನು ತಾನು ನೇಮಕವಾಗಿರುವ ಸ್ಥಾನದಲ್ಲಿ ಕೆಲಸ ನಿರ್ವಹಿಸುವಂತಿಲ್ಲ, ಎಂದು. ಇದು ಸಂವಿಧಾನದತ್ತವಾದ ಸ್ಥಾನದಲ್ಲಿರುವ ಮುಖ್ಯ ನ್ಯಾಯಾಧೀಶರಿಗೆ ಅನ್ವಯವಾಗಬೇಡವೆ ? ಆ ಸ್ಥಾನದ ಬಲದಿಂದಾಗಿ ಅವರು ಬೇರೆಷ್ಟೋ ಅಧಿಕೃತ ಸ್ಥಾನಗಳನ್ನಲಂಕರಿಸಿರುತ್ತಾರೆ; ಉದಾಹರಣೆಗೆ, ಉಚ್ಚ ನ್ಯಾಯಾಲಯದ ಕೊಲೀಜಿಯಂನ ಮುಖ್ಯಸ್ಥನ ಸ್ಥಾನ. ಬೇರೆಯವರನ್ನು ನ್ಯಾಯಮೂರ್ತಿಗಳನ್ನಾಗಿ ನೇಮಕಗೊಳಿಸುವ ಅಧಿಕಾರವಿರುವುದು ಕೊಲೀಜಿಯಂಗೆ. ರಾಜ್ಯದ ನ್ಯಾಯಮೂರ್ತಿಗಳನ್ನು ಬೇರೆಬೇರೆ ಪೀಠಗಳಿಗೆ ನೇಮಿಸುವುದು ಮುಖ್ಯ ನ್ಯಾಯಾಧೀಶರು. ಪ್ರಸ್ತುತ ಸಂದರ್ಭದಲ್ಲಿ ಮಾನ್ಯ ದಿನಕರನ್ ಅವರು ಈ ಯಾವ ಜವಾಬ್ದಾರಿಗಳನ್ನೂ ನಿರ್ವಹಿಸುವಂತಿಲ್ಲವೆಂಬುದು ನನ್ನ ನಿಷ್ಪಕ್ಷಪಾತ ಅಭಿಮತ. ಇದನ್ನೆಲ್ಲಾ ಪ್ರಸ್ತಾಪಿಸಲು ಒಂದು ಪತ್ರಿಕಾ ವರದಿಯು ಹಿನ್ನೆಲೆಯನ್ನೊದಗಿಸಿದೆ. 'ದಿ ಹಿಂದು' ವರದಿಯಂತೆ ಭಾರತ ಸರ್ವೇಕ್ಷಣಾ ಸಂಸ್ಥೆಯ ಮೂರು ಮಂದಿಯ ತಂಡವು ಭಾರತ ಸರ್ಕಾರಕ್ಕೆ ತನ್ನ ವರದಿ ಸಲ್ಲಿಸಿದೆ. ತಮಿಳುನಾಡಿನ ತಿರುವಳ್ಳುವರ್ ಜಿಲ್ಲೆಯ ಕಾವೇರಿರಾಜಪುರಂಗೆ ತೆರಳಿ ನ್ಯಾಯಮೂರ್ತಿ ದಿನಕರನ್ ಹಾಗೂ ಅವರ ಕುಟುಂಬದವರು ಅಕ್ರಮವಾಗಿ ಭೂಮಿಯನ್ನು ವಶಪಡಿಸಿಕೊಂಡಿರುವುದರ ಬಗ್ಗೆ ತನಿಖೆ ನಡೆಸಿ ಈ ವರದಿ ನೀಡಲಾಗಿದೆ. ಎರಡನೆಯದಾಗಿ, ಶ್ರೀ. ದಿನಕರನ್ ಕೇವಲ ಆಡಳಿತಾತ್ಮಕ ಕರ್ತವ್ಯಗಳನ್ನು ನಿರ್ವಹಿಸಿದ್ದಾರೆಂಬ ಮಾಹಿತಿಯನ್ನು ನ್ಯಾಯಾಲಯದ ಕಡತವೊಂದು ತಿಳಿಸಿದೆ. ನಾನು ಯಶಸ್ವಿಯಾಗಲಿ ಬಿಡಲಿ, ತಡೆಯಲು ಸಾಧ್ಯವಾಗಲಿ ಬಿಡಲಿ, ಉಚ್ಚ ನ್ಯಾಯಾಲಯದಲ್ಲಿ ಜರುಗುತ್ತಿರುವ ಕಾನೂನುಬಾಹಿರ ಅಂಶಗಳನ್ನು ದಾಖಲಿಸಿ ಅವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ಅಗತ್ಯವೆಂದು ನನ್ನ ಭಾವನೆ. ಸಹೋದ್ಯೋಗಿಗಳ ಸಹಮತ ಹೇಗೆ ರೂಪುಗೊಳ್ಳುತ್ತದೋ ಹಾಗೆ ನಡೆಯುವುದು ಸಹ ಅಗತ್ಯವೆಂದು ನನ್ನ ಅನಿಸಿಕೆ.

ಇದರಲ್ಲಿ ವೈಯಕ್ತಿಕವಾದದ್ದೇನೂ ಇಲ್ಲ. ಮುಖ್ಯ ನ್ಯಾಯಾಧೀಶರು ನನ್ನ ಸೋದರ ನ್ಯಾಯಮೂರ್ತಿ. ಅವರ ಮಾರ್ಗದರ್ಶನ ಎಂದಿನಂತೆಯೇ ಮುಂದುವರಿಯುತ್ತದೆಂಬ ಆಶಯ ನನ್ನದು. ಅವರೆಲ್ಲೇ ಇದ್ದರೂ ಅವರಿಗೆ ಒಳ್ಳೆಯದಾಗಲಿ, ಉಚ್ಚ ನ್ಯಾಯಾಲಯದ ಹೊರಗೂ ಅವರಿಗೆ ಸಮಾಜಸೇವೆ, ಸಾಮಾಜಿಕ ನ್ಯಾಯ, ಇವುಗಳಿಗಾಗಿ ದುಡಿಯುವುದು ಸಾಧ್ಯವಾಗಲಿ ಎಂದು ಆಶಿಸುತ್ತೇನೆ. ಅವರು ಉಚ್ಚ ನ್ಯಾಯಾಲಯದಿಂದ ನಿರ್ಗಮಿಸಬೇಕೆಂದು ಮತ್ತೆ ಅವರಲ್ಲಿ ನನ್ನ ನಮ್ರ ವಿನಂತಿ.

(ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ. ಡಿ. ವಿ. ಶೈಲೇಂದ್ರ ಕುಮಾರ್ ಅವರು 'ಹೊಸತು' ಪತ್ರಿಕೆಗೆ ಮಾರ್ಚ್ ೯, ೨೦೧೦ರಂದು ಒಂದು ಪತ್ರವನ್ನು ಬರೆದು ಅದರೊಟ್ಟಿಗೆ ಎರಡು ಅಡಕಗಳನ್ನಿರಿಸಿ ಕಳಿಸಿದ್ದಾರೆ, ಅವನ್ನು ಪ್ರಕಟಣೆಗೆ ಸೂಕ್ತವಾಗಿ ಬಳಸಿಕೊಳ್ಳಲು ಅನುಮತಿಯನ್ನು ನೀಡಿದ್ದಾರೆ. ಆ ಎರಡು ಅಡಕಗಳ ಸಂಕ್ಷಿಪ್ತ ಸಾರವನ್ನು ಇಲ್ಲಿ ಪ್ರಕಟಿಸಲಾಗಿದೆ. – ಸಂ.)

# ಪಲಾಯನದ ಹಾದಿಯಲ್ಲಿ ಕಾಶಿಯ ಪುರೋಹಿತರು !

ಶ್ರೀನಿವಾಸ ಜೋಕಟ್ಟೆ

ದೃಶ್ಯ - ೧

ಗಂಗಾ ಸ್ನಾನ, ಗಂಗಾ ಆಚಮನ ಮತ್ತು ಸಾವಿನ ನಂತರ ಎರಡು ತೊಟ್ಟು ಗಂಗಾಜಲ ಇಷ್ಟು ಸಾಕು, ಧಾರ್ಮಿಕ ನಂಬಿಕೆಯುಳ್ಳ ಭಕ್ತರಿಗೆ ! ಗಂಗಾ ತೀರದಲ್ಲಿ ಅರ್ಪಣೆ, ತರ್ಪಣೆ ಮತ್ತು ಸಮರ್ಪಣೆಯ ಅಖಂಡ ಶ್ರದ್ಧೆ, ಭಕ್ತಿ ಉಳ್ಳವರಿಗೆ ಇದೇ ಅಂತಿಮ ಮಾತು.

ಇದು ಕಾಶಿಯ ಗಂಗಾ ದರ್ಶನ. ಗಂಗೆ ಹಿಂದೂ ಸಂಸ್ಕೃತಿಯ ಮನೋಗಂಗೆ, ಮೋಕ್ಷದಾಯಿನಿ. ವಿಶ್ವದ ಪುರಾತನ ನಗರಗಳಲ್ಲಿ ಒಂದೆನಿಸಿದ ಅಂದಿನ ಕಾಶಿ, ಇಂದಿನ ವಾರಾಣಸಿಯಲ್ಲಿ ಹರಿಯುವ ಗಂಗಾನದಿಯ ಸೌಂದರ್ಯವನ್ನು ಇಲ್ಲಿನ ೮೪ ಘಾಟ್‌ಗಳಲ್ಲಿ ನಿಂತು ಸವಿಯಬಹುದು. ಗಂಗಾ ತೀರದಲ್ಲಿ ಭಕ್ತರ ಪಿಂಡ ಪ್ರದಾನ ಕ್ರಿಯೆಗಳನ್ನು ಮಾಡಿಸಲೆಂದೇ ಒಂದು ಕಾಲಕ್ಕೆ ಇಲ್ಲಿನ ೮೪ ಘಾಟ್‌ಗಳಲ್ಲಿ ಪುರೋಹಿತರ (ಪಂಡರ) ಸಂಖ್ಯೆ ಎರಡು ಸಾವಿರಕ್ಕೂ ಅಧಿಕವಿತ್ತು. ಆದರೆ ಈ ಸಮಯ ಇಲ್ಲಿ ನೂರು ನೂರೈವತ್ತಕ್ಕೆ ಈ ಪುರೋಹಿತರ ಸಂಖ್ಯೆ ಕಂಡುಬರುತ್ತಿದೆ.

ಪಿಂಡಪ್ರದಾನ, ಪಿತೃತರ್ಪಣದಲ್ಲಿ ಜನರ ಆಸ್ಥೆ ಕಡಿಮೆಯಾಗುತ್ತಿದೆಯೇ ? 'ಹೌದು' ಎನ್ನುತ್ತಾರೆ ಇಲ್ಲಿನ ಪುರೋಹಿತರು. ಇದರಿಂದಾಗಿ ವಾರಾಣಸಿಯ ಪುರೋಹಿತ ವರ್ಗ (ಪಂಡಾ ಸಮಾಜ) ಚಿಂತೆಗೀಡಾಗಿದೆ. ಮುಂದಿನ ಪೀಳಿಗೆಯನ್ನು ಈ ವೃತ್ತಿಯಿಂದ ದೂರ ಇರಿಸಲು ನೋಡುತ್ತಿದ್ದಾರೆ. 'ಪುರೋಹಿತ ಗಿರಿ' ಇಂದು ಕಾಶಿಯ ಗಂಗಾ ತೀರದಲ್ಲಿ ಲಾಭದ ಧಂಧೆ ಎನಿಸುತ್ತಿಲ್ಲ.

ಈ ಪುರೋಹಿತರೂ ಸಾಮಾನ್ಯರೇನಲ್ಲ. ಗಂಗಾ ತೀರದಲ್ಲೆಲ್ಲ ಇವರು ಸುತ್ತಾಡುತ್ತಾ ಇರುತ್ತಾರೆ. 'ಪಿಂಡಪ್ರದಾನ'ಕ್ಕೆ ಎಷ್ಟು ಖರ್ಚು ಬೀಳುವುದು ಎಂದರೆ ಬಹಳ ಕಡಿಮೆ ಹಣ ಹೇಳಿಬಿಡುತ್ತಾರೆ. ಅನಂತರ ಒಂದೊಂದೇ ಒಂದೊಂದೇ ಹೇಳುತ್ತಾ ಬರುತ್ತಾರೆ. ಎಷ್ಟು ಜನಕ್ಕೆ ಊಟ ಹಾಕುತ್ತೀರಿ, ಎನ್ನುತ್ತಾರೆ. (ಊಟದ ಹಣವೆಲ್ಲ ಅವರ ಬಳಿಯೇ ಕೊಡಬೇಕು. ಅವರು ಊಟ ಕೊಡುತ್ತಾರೋ ಇಲ್ಲವೋ ದೇವರಿಗೂ ಗೊತ್ತಾಗದು !) ಅವರಿಗೆ ಸಮಾಧಾನವಾದ ನಂತರವೇ ಪಿಂಡ ಗಂಗೆಗೆ ಹಾಕಲು ಹೇಳುತ್ತಾರೆ. ಇಂತಹ ಸ್ಥಿತಿಯಲ್ಲಿ ಈ 'ಪಂಡ'ರಲ್ಲಿ ಪಿಂಡಪ್ರದಾನಕ್ಕೆ ಬರುವುದಾದರೂ ಹೇಗೆ ?

ಪ್ರಯಾಗ ಘಾಟ್‌ನ ಪುರೋಹಿತ ಹೇಳುತ್ತಾರೆ – ''ನಾನು ಐದನೆಯ ಪೀಳಿಗೆಯ ಏಕಮಾತ್ರ ವಾರಿಸ್. ಆದರೆ ನನ್ನ ಮಗನನ್ನು ಈ ಪುರೋಹಿತ ವೃತ್ತಿಗೆ ಹಾಕಲಾರೆ. ಪುರೋಹಿತಗಿರಿಗೆ ಇಲ್ಲೀಗ ಮರ್ಯಾದೆ ಇಲ್ಲ, ಜೊತೆಗೆ ಸಂಪಾದನೆಯೂ ಇಲ್ಲ.''

ಇದು ಕಾಶಿಯ ಗಂಗಾತೀರದ ಹೆಚ್ಚಿನ ಪುರೋಹಿತರ ಅಭಿಪ್ರಾಯ ಕೂಡ. ತಮ್ಮ ಮಕ್ಕಳನ್ನು ಇತರ ಉದ್ಯೋಗಗಳಿಗೆ ಹಾಕುತ್ತಿದ್ದಾರೆ. ಅದಕ್ಕೆ ಬೇಕಾದ ಶಾಲೆಗಳಿಗೆ ಕಳುಹಿಸುತ್ತಿದ್ದಾರೆ.

**ಶಿಥಿಲಗೊಳ್ಳುತ್ತಿದೆ ಗೋಡೆ**

ಭಾರತದಲ್ಲಿರುವ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು ಕಾಶಿಯ ಬಾಬಾ ವಿಶ್ವನಾಥ ಮಂದಿರ. ಅಂತರರಾಷ್ಟ್ರೀಯ ಸ್ತರದಲ್ಲಿ ಈ ಮಂದಿರದ ಖ್ಯಾತಿ ಇದೆ. ಮುನ್ನೂರು ವರ್ಷ ಹಳೆಯದಾದ ಈ ಮಂದಿರವು ಶಿಥಿಲಗೊಳ್ಳುತ್ತಿದ್ದು ಸಮಸ್ಯೆ ಗಂಭೀರವಾಗುತ್ತಿದೆ. 'ಬಲುಯೀ ಪತ್ಥರ್'ನಿಂದ ನಿರ್ಮಿಸಲಾದ ಇದರ ಗೋಡೆಗಳಲ್ಲಿ ಬಿರುಕು ಬೀಳುತ್ತಿವೆ. ಇದನ್ನು ಮುಚ್ಚಲು ಪ್ಲಾಸ್ಟಿಕ್ ಪೈಂಟ್ ಬಳಿಯುತ್ತಿದ್ದಾರೆ. ಆದರೆ ಗೋಡೆಗಳ ಒಳಗಡೆ ರಾಸಾಯನಿಕ ಪರಿವರ್ತನೆಯ ಕಾರಣ ಈ ಬಿರುಕುಗಳು ನಿಂತಿಲ್ಲ. ಶ್ರೀ ಕಾಶಿ ವಿಶ್ವನಾಥ ಮಂದಿರ ಟ್ರಸ್ಟ್‌ನ ವತಿಯಿಂದ ಪ್ರಾಪ್ತಿಯಾದ ಮಾಹಿತಿಯಂತೆ ಸುಮಾರು ೨.೯ ಕೋಟಿ ರೂಪಾಯಿ ಇದಕ್ಕೆ ಅಗತ್ಯವಿದೆ. ಸದ್ಯ ಟ್ರಸ್ಟ್‌ನ ಬಳಿ ಇಷ್ಟು ಹಣವಿಲ್ಲ. ಮಹಾರಾಣಿ ಅಹಿಲ್ಯಾಬಾಯಿ ಹೋಳ್ಕರ್ ಕ್ರಿ. ಶ. ೧೭೮೦ರಲ್ಲಿ ಕಾಶಿ ಮಂದಿರವನ್ನು ನೂತನವಾಗಿ ಕಟ್ಟಿದ್ದರು. ಅನಂತರ ರಣಜಿತ್ ಸಿಂಗ್ ೧೮೫೩ರಲ್ಲಿ ಒಂದು ಸಾವಿರ ಕಿಲೋ ಚಿನ್ನದ ತಗಡು ಹೊದಿಸಿದ್ದ. 'ನ್ಯಾಷನಲ್ ರಿಸರ್ಚ್ ಲ್ಯಾಬೋರೇಟರಿ ಫಾರ್ ಕನ್ಸರ್ವೇಶನ್ ಆಫ್ ಕಲ್ಚರ್ ಪ್ರಾಪರ್ಟೀಜ್ ಲಖ್ನೋ' ಸಂಸ್ಥೆಯೂ ಇದನ್ನು ಒಪ್ಪಿಕೊಂಡಿದೆ. ಶ್ರೀ ಕಾಶಿ ವಿಶ್ವನಾಥ ಮಂದಿರ ಟ್ರಸ್ಟ್ ೧೯೮೩ರ ನಿಯಮದಂತೆ ಮಂದಿರದ ಯಾವ ಪ್ರಕಾರದ ಜವಾಬ್ದಾರಿಯೂ ಟ್ರಸ್ಟ್‌ನದ್ದೇ ಆಗಿದೆ. ಆದರೆ ಇಷ್ಟು ಖರ್ಚು ಮಾಡಲು ಹಣವಿಲ್ಲದೆ ಟ್ರಸ್ಟ್ ಒದ್ದಾಡುತ್ತಿದೆ.

ಕಾಶಿ ವಿಶ್ವನಾಥನ ಜ್ಯೋತಿರ್ಲಿಂಗ ದರ್ಶನಕ್ಕೆ ಸಾಲಲ್ಲಿ ನಿಂತು ಗರ್ಭಗುಡಿಗೆ ಹೋಗುವಾಗ ಈ ಪಂಡರ ಕಾಟ ಮತ್ತೆ ಎದುರಾಗುತ್ತದೆ. ನಮ್ಮ ಜೊತೆಗಿದ್ದ ಉಡುಪಿಯ ವಕೀಲರೊಬ್ಬರು ಒಂದು ಸಾವಿರ ರೂಪಾಯಿಯ ನೋಟನ್ನು ದೇವರ ಹುಂಡಿಗೆ ಹಾಕಲು ಕೈಯಲ್ಲಿ ಹಿಡಿದಿದ್ದರು.

ಗರ್ಭಗುಡಿಯಿಂದ ಹೊರಬಂದ 'ಪಂಡ'ರೊಬ್ಬರು ಅದನ್ನು ಕಿತ್ತು ''ಹುಂಡಿಗೆ ಹಾಕಬೇಡಿ, ಒಳಗಡೆ ಹಾಕುವೆ'' ಎಂದು ಒಯ್ದೇಬಿಟ್ಟರು.

ಪಾಪ, ಈ ವಕೀಲರು ಇತರರು ಕಾಣಿಕೆಗೆಂದು ಕೊಟ್ಟ ಹಣವನ್ನೆಲ್ಲ ಒಂದು ಸಾವಿರದ ನೋಟಲ್ಲಿ ಹುಂಡಿಗೆ ಹಾಕಲು ನಿಂತಿದ್ದರು. ಕಾಶಿಯ ಪಂಡರೆಂದರೆ ಹೀಗೆ ! ಉತ್ತರ ಭಾರತದ ಯಾವುದೇ ತೀರ್ಥಕ್ಷೇತ್ರಗಳಿಗೆ ಹೋದರೂ ಈ ಪಂಡರ ಕಾಟದಿಂದ ತಪ್ಪಿಸಲು ಸಾಧ್ಯವಿಲ್ಲ. ಅದರಲ್ಲೂ ಪುರಿ ಜಗನ್ನಾಥ ಟೆಂಪಲ್ ಪರಿಸರದ ಪಂಡರಂತೂ ಭಕ್ತರಿಗೆ ಬಹುದೊಡ್ಡ ತಲೆನೋವು ! ಇವರಿಗೆ ಸಾಕಷ್ಟು ಏಜಂಟರೂ ಇದ್ದಾರೆ.

ಕೋಲ್ಕತ್ತಾದ ಕಾಳಿ ಟೆಂಪಲ್‌ನಲ್ಲೂ ಇಂಥದ್ದೇ ದೃಶ್ಯ. ಇತ್ತೀಚೆಗೆ ಕೋಲ್ಕತ್ತಾಕ್ಕೆ ಹೋಗಿದ್ದಾಗ ನ್ಯಾಷನಲ್ ಲೈಬ್ರರಿಯ ಕನ್ನಡ ವಿಭಾಗದ ಪ್ರಖ್ಯಾತ ಲೇಖಕ ಜಿ. ಕುಮಾರಪ್ಪ ನಮ್ಮ ಜೊತೆಗಿದ್ದರು. ಅವರು ನಮ್ಮ ತಂಡದ ಜೊತೆ ಮಾತನಾಡುವಾಗ ''ಕಾಳಿ ಟೆಂಪಲ್‌ಗೆ ಹೋಗುವಾಗ ಜಾಗ್ರತೆ. ಪಂಡರಿಂದ ಎಚ್ಚರವಾಗಿರಿ. ಅವರು ಪಂಡರೆನ್ನುವುದಕ್ಕಿಂತಲೂ 'ಪುಂಡ'ರ ಹಾಗಿದ್ದಾರೆ'' ಎಂದು ಹಾಸ್ಯವಾಗಿ ಹೇಳಿದ ಮಾತು ನಿಜವೇ ಎನ್ನಿ.

ಹಾಗಿರುವಾಗ 'ಪಂಡ'ರಿಗೆ ಮರ್ಯಾದೆ ನೀಡುವುದಾದರೂ ಹೇಗೆ ? ಇದು ಕಾಶಿಯ ಪಂಡರಿಗೆ ಅರ್ಥವಾಗಿದೆ !

ದೃಶ್ಯ - ೨

**ಹತ್ತು ಲಕ್ಷ ರೂ. ಇದೆಯೇ ? 'ಶಂಕರಾಚಾರ್ಯ'ರಾಗಿರಿ !**

ಧಾರ್ಮಿಕ ನಗರ ವಾರಾಣಸಿಯಲ್ಲಿಂದು ಪುರೋಹಿತರ ಸಂಖ್ಯೆ ಕಡಿಮೆ ಆಗುತ್ತಿರಬಹುದು. ಆದರೆ ಸ್ವಘೋಷಿತ 'ಶಂಕರಾಚಾರ್ಯ'ರ ಸಂಖ್ಯೆ ಏರುತ್ತಿದೆ.

ಆದಿಗುರು ಎನ್ನಲಾಗುವ ಶಂಕರಾಚಾರ್ಯರು ವೈದಿಕ ಧರ್ಮದ ರಕ್ಷಣೆಗಾಗಿ ದೇಶದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪೀಠಗಳನ್ನು ಸ್ಥಾಪನೆ ಮಾಡಿದ್ದರು. ಆದರೆ ಶಂಕರಾಚಾರ್ಯರ ವೈಭವಶಾಲಿ ಜೀವನದಿಂದ ಆಕರ್ಷಿತಗೊಂಡು ಸ್ವಘೋಷಿತ ಶಂಕರಾಚಾರ್ಯರಾಗಲು ಜನ ಪೈಪೋಟಿ ನಡೆಸುತ್ತಿದ್ದಾರೆಂದು ಅಂದು ಆದಿಗುರುವಿಗೆ ತಿಳಿಯಲು ಶಕ್ಯವೇ ಇರಲಿಲ್ಲ.

ಇಂದು ದೇಶದಲ್ಲಿ ೪ ಶಂಕರಾಚಾರ್ಯರ ಬದಲು ೫೯ ಶಂಕರಾಚಾರ್ಯರು ತಿರುಗುತ್ತಿದ್ದಾರೆ ! ಧಾರ್ಮಿಕ ನಗರ ವಾರಾಣಸಿಯಲ್ಲಿ ಸ್ವಘೋಷಿತ ಶಂಕರಾಚಾರ್ಯರ ಆಟವಾಡಲು ಏಳರಿಂದ ಹತ್ತು ಲಕ್ಷ ರೂಪಾಯಿ ಖರ್ಚು ಮಾಡಬೇಕಾಗುತ್ತದೆ. ಇಷ್ಟು ಹಣ ಖರ್ಚು ಮಾಡಿದರೆ ವಿದ್ವತ್ ಪರಿಷದ್‌ನ ವಿದ್ವಾಂಸರು ಮತ್ತು ಕಾಶಿಯ ''ಪ್ರಕಾಂಡ ಪಂಡಿತ ಸಮೂಹ'' ಯಾರನ್ನೂ 'ಶಂಕರಾಚಾರ್ಯ'ರನ್ನಾಗಿಸಿ ಧಾರ್ಮಿಕ ವಿಧಿವಿಧಾನಗಳನ್ನು

ಕಾಶಿಯ (ವಾರಾಣಸಿ) ಗಂಗಾತೀರದಲ್ಲಿರುವ ಹರಿಶ್ಚಂದ್ರ ಘಾಟ್‌ನ ದೃಶ್ಯ. ಇಲ್ಲಿ ಅಂತ್ಯಸಂಸ್ಕಾರ ನಡೆಯುತ್ತಲೇ ಇರುತ್ತದೆ.



*ಗಂಗಾತೀರದಲ್ಲಿನ ದೋಣಿ ಸವಾರಿಯಲ್ಲಿ ಲೇಖಕ ದಂಪತಿ*

ಪೂರೈಸುತ್ತಾರೆ. ಇಂತಹ ವ್ಯಕ್ತಿಗಳ ಹೆಸರಿನ ಮುಂದೆ ಗಿರಿ, ಪುರಿ, ತೀರ್ಥ, ಸರಸ್ವತಿ, ಭಾರತಿ... ಮೊದಲಾದ ಹೆಸರುಗಳನ್ನು ಸೇರಿಸಲಾಗುತ್ತದೆ. ಅದೇ ದಿನ ಯಜ್ಞೋಪವೀತ ಮತ್ತು ಜುಟ್ಟು ಕಟ್ಟಿ ಯಾವನೇ ಗುರು 'ದಂಡ' ಹಿಡಿಯಲು ಕೊಟ್ಟು ಸ್ವಘೋಷಿತ ಶಂಕರಾಚಾರ್ಯರನ್ನಾಗಿ ಮಾಡಲಾಗುತ್ತದೆ.

ಮುಂಬಯಿ ಎ.ಟಿ.ಎಸ್. ಅಧಿಕಾರಿಗಳು ಸ್ಫೋಟದ ಪ್ರಕರಣದಲ್ಲಿ 'ಸ್ವಯಂಭೂ' ಶಂಕರಾಚಾರ್ಯನನ್ನು ಬಂಧಿಸಿರುವುದನ್ನು ಪತ್ರಿಕೆಗಳಲ್ಲಿ ಓದಿದ್ದೇವೆ. ಆತ ಶಂಕರಾಚಾರ್ಯನಾಗಲು ಬಹಳಷ್ಟು ಪ್ರಯತ್ನಗಳನ್ನು ನಡೆಸಿದವ. ಈತನ ಅಸಲಿ ಹೆಸರು ಅಮೃತೇಶ ತಿವಾರಿ ಎಂದು. ಸ್ವಯಂಘೋಷಿತ ಶಂಕರಾಚಾರ್ಯರನ್ನಾಗಿಸುವ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವ ಕಾಶಿಯ ಯುವ ವಿದ್ವತ್ ಪರಿಷದ್‌ನ ಪದಾಧಿಕಾರಿಯೊಬ್ಬರು ಹೇಳುವುದನ್ನು ಒಪ್ಪುವುದಾದರೆ ''ಅಮೃತೇಶ ತಿವಾರಿ ಸ್ವಘೋಷಿತ ಶಂಕರಾಚಾರ್ಯನಾಗಲು ಹದಿನೇಳೂವರೆ ಲಕ್ಷ ರೂ. ನೀಡಿದ್ದಾನೆ. ವಾರಾಣಸಿಯ ನಗರ ನಿಗಮ ಪ್ರೇಕ್ಷಾಗೃಹದಲ್ಲಿ ಈತನನ್ನು ಶಂಕರಾಚಾರ್ಯನನ್ನಾಗಿ ಮಾಡಲಾಗಿತ್ತು.''

'ಶಂಕರಾಚಾರ್ಯ' ಪಟ್ಟ ಕೊಡುವುದು ಬಹಳ ಸರಳ ವಿಧಿ. ಇದಕ್ಕಾಗಿ ಮೂರು ದಿನಗಳ ಕಾಲ ಉಪವಾಸವಿರಬೇಕು. ನೆಲದಲ್ಲಿ ಮಲಗಬೇಕು. ಕೇವಲ ಗಂಗಾಜಲ ಮಾತ್ರ ಸೇವಿಸಬಹುದಾಗಿದೆ. ಮೊದಲ ದಿನ ವಿಭಿನ್ನ ಪ್ರಕಾರದ ಔಷಧಿಗಳ ಮತ್ತು ನವಗ್ರಹಗಳಿಗೆ ಸಂಬಂಧಿಸಿ ಕಟ್ಟಿಗೆಗಳಲ್ಲಿ 'ವಿಜಯಾ ಹೋಮ' ಮಾಡಲಾಗುತ್ತದೆ. ಎರಡನೇ ದಿನ ಶಂಕರಾಚಾರ್ಯನನ್ನಾಗಿ ಮಾಡುವ ವ್ಯಕ್ತಿಗೆ ತನ್ನ ಪಿತೃಗಳಿಗೆ ಶ್ರಾದ್ಧ ಹಾಕಬೇಕಾಗುತ್ತದೆ. ಮೂರನೇ ದಿನ ಆತ ತನ್ನ ಶ್ರಾದ್ಧವನ್ನೂ ಸಹ ಮಾಡುತ್ತಾನೆ. ಅನಂತರ ಗಿರಿ, ಪುರಿ, ತೀರ್ಥ, ಸರಸ್ವತಿ... ಇತ್ಯಾದಿ ಹೆಸರುಗಳನ್ನು ಜೋಡಿಸುತ್ತಾರೆ.

ವಿಶೇಷವೆಂದರೆ 'ಸ್ವಯಂಘೋಷಿತ' ಶಂಕರಾಚಾರ್ಯರನ್ನಾಗಿಸುವ ಈ 'ಆಟ'ದಲ್ಲಿ ಆತ ಬ್ರಹ್ಮಚಾರಿಯೋ ಅಥವಾ ಗೃಹಸ್ಥನೋ ಎಂದೂ ನೋಡುವುದಿಲ್ಲ. ಆದಿಗುರು ಶಂಕರಾಚಾರ್ಯರು ಇದಕ್ಕಾಗಿ ಬ್ರಹ್ಮಚಾರಿಯಾಗುವುದು ಅವಶ್ಯವಿದೆ ಎಂದಿದ್ದರು !

ಕಾಶಿ ವಿದ್ವತ್ ಪರಿಷದ್‌ನ ವಕ್ತಾರ ಪ್ರೊ॥ ಶಿವಾಜಿ ಉಪಾಧ್ಯಾಯ ಹೇಳುವಂತೆ ''ಶಂಕರಾಚಾರ್ಯ ಆಗಬೇಕಾದರೆ 'ಧನ'ದ ಅವಶ್ಯಕತೆ ಇದೆ. ಪ್ರತೀ ಶಂಕರಾಚಾರ್ಯನ ಜೊತೆ ಯಾವುದಾದರೂ ಸೇಠ್, ಸಾಹುಕಾರ ಮತ್ತು ಹಣವಂತರು ಇದ್ದೇ ಇದ್ದಾರೆ. ಹೀಗಾಗಿ ಶಂಕರಾಚಾರ್ಯರಾಗಲು ಪೈಪೋಟಿ ಇದ್ದು ಇಂದು ನಾಲ್ಕರ ಬದಲು ೫೫ ಶಂಕರಾಚಾರ್ಯರು ಇರುವಂತಾಗಿದೆ'' ಎನ್ನುತ್ತಾರೆ.

ಆದಿಗುರು ಶಂಕರಾಚಾರ್ಯರು ಬರೆದ ಮಠಮಾನ್ಯ ಅನುಶಾಸನಂ ಇದರಲ್ಲಿ ''ಶಂಕರಾಚಾರ್ಯರಿಗೆ ಕಾಶಿ ವಿದ್ವತ್ ಪರಿಷದ್ ಮತ್ತು ಸಂತೆ ಸಮಾಜದ ಒಂಭತ್ತು ಮಹಾಮಂಡಲೇಶ್ವರರ ಒಪ್ಪಿಗೆ ಬೇಕಾಗುತ್ತದೆ. ಹಾಗೂ ಇವರು ಬೇಡವಾದವರನ್ನು ಪದಚ್ಯುತಗೊಳಿಸಬಹುದಾಗಿದೆ'' ಎಂದಿದೆ.

ಈ ಆಧಾರದಲ್ಲಿ ವಿದ್ವತ್ ಪರಿಷದ್ ತನಗೆ ಶಂಕರಾಚಾರ್ಯರನ್ನಾಗಿಸುವ ಪೂರ್ಣ ಅಧಿಕಾರ ಪ್ರಾಪ್ತಿಯಾಗಿದೆ ಎಂದು ತಿಳಿದಂತಿದೆ ಎನ್ನುತ್ತಾರೆ ಅಖಿಲ ಭಾರತೀಯ ವಿದ್ವತ್ ಪರಿಷದ್‌ನ ಕಾಮೇಶ್ವರ ಉಪಾಧ್ಯಾಯ.

ಕಾಶಿ ವಿದ್ವತ್ ಪರಿಷದ್‌ನ ವಕ್ತಾರ ಶಿವಾಜಿ ಉಪಾಧ್ಯಾಯ ಪ್ರತಿಕ್ರಿಯಿಸುವಂತೆ ''ಇಂದು ೫೫ ಶಂಕರಾಚಾರ್ಯರು ತಿರುಗುತ್ತಿದ್ದಾರೆ. ನಾವು ಇವರನ್ನು ಆ ಪಟ್ಟಕ್ಕೆ ಕೂರಿಸಿಲ್ಲ. ಹಾಗಿರುವಾಗ ನಾವು ಪದಚ್ಯುತಗೊಳಿಸುವುದಕ್ಕೆ ಹೇಗೆ ಸಾಧ್ಯ ?'' ಎನ್ನುವ ಪ್ರಶ್ನೆ ಮುಂದಿಡುತ್ತಾರೆ.

ಕಾಶಿ ವಿದ್ವತ್ ಪರಿಷದ್‌ನ ಕಾರ್ಯ ಚಟುವಟಿಕೆಗಳಿಂದ ಸಿಗುವ ಲಾಭ-ಹಾನಿಯಿಂದ ಬುದ್ಧಿ ಕಲಿತು ವಾರಾಣಸಿಯಲ್ಲಿ 'ಅಖಿಲ ಭಾರತೀಯ ವಿದ್ವತ್ ಪರಿಷದ್' ಮತ್ತು 'ಕಾಶಿ ಯುವ ವಿದ್ವತ್ ಪರಿಷದ್'ನ ಸ್ಥಾಪನೆಯಾಗಿದೆಯಂತೆ.

ಕಾಶಿ ವಿದ್ವತ್ ಪರಿಷದ್‌ನ ಸ್ಥಾಪನೆಗೆ ೪೫೦ ವರ್ಷಗಳೇ ಸಂದುಹೋಗಿವೆ. ಆದರೆ ಇಂದು ಧಾರ್ಮಿಕ ನಗರ ವಾರಾಣಸಿಯಲ್ಲಿ ಹಣವೇ ಪ್ರಧಾನ ಎನಿಸುತ್ತಿದೆ.

**ದೃಶ್ಯ - ೩**

**ಗಂಗಾ ನದಿಯ ದುಃಸ್ಥಿತಿ !**

ವಾರಾಣಸಿ ನಗರದ ಬಲ ಭಾಗದಲ್ಲಿ ಹರಿಯುವ ಗಂಗಾನದಿ ಅತ್ಯಂತ ಪವಿತ್ರ. ಗಂಗಾ ತೀರದಲ್ಲಿರುವ ಆಶ್ರಮಗಳು, ಮಠಗಳು ಮತ್ತು ಘಾಟ್‌ಗಳಲ್ಲಿ ವಿಶ್ವಮಟ್ಟದ ಗಣ್ಯರನ್ನು ಕಾಣಬಹುದಿತ್ತು. ವಾರಾಣಸಿ ಘರಾನಾ ಸಂಗೀತ ಕ್ಷೇತ್ರವಂತೂ ಬಹುಪ್ರಸಿದ್ಧಿ. ಮೇಯರ್ ಹೇಳುತ್ತಾರೆ – ''ನಾನು ಜನತೆಯ ಬಳಿ ಕಾಶಿಯ ಸಂಸ್ಕೃತಿಯನ್ನು ಸಂರಕ್ಷಿಸಿ ಇರಿಸುವಂತೆ ವಿನಂತಿಸುತ್ತಿದ್ದೇನೆ'' ಎಂದು.



*ಕಾಶಿ ಗಂಗಾತೀರದ ಘಾಟ್: ಇಲ್ಲಿ ದನ-ಎಮ್ಮೆಗಳೂ ಬಿದ್ದುಕೊಳ್ಳುತ್ತವೆ*

ಇಲ್ಲಿನ ಗಂಗಾ ನದಿಯನ್ನು ಕಳೆದ ಎರಡೂವರೆ ದಶಕಗಳಲ್ಲಿ ಸ್ವಚ್ಛಗೊಳಿಸುವುದಕ್ಕೆ ೧,೩೦೦ ಕೋಟಿ ರೂಪಾಯಿಗೂ ಅಧಿಕ ಹಣ ಖರ್ಚು ಮಾಡಲಾಗಿದೆ. ಕೇಂದ್ರವು ಗಂಗಾ ನದಿಗೆ 'ರಾಷ್ಟ್ರೀಯ ನದಿ' ಎಂಬ ಮಾನ್ಯತೆ ನೀಡಿದೆ. ಆದರೆ ಕೇವಲ ಕಾಶಿಯಲ್ಲೇ ಪ್ರತೀದಿನ ೩೦ ಕೋಟಿ ಲೀಟರ್ ಮಲಮೂತ್ರ ಮತ್ತು ಔದ್ಯೋಗಿಕ ತ್ಯಾಜ್ಯಗಳು ಬಂದು ಗಂಗಾ ನದಿಯನ್ನು ಸೇರುತ್ತಿವೆ ಎಂದು ಕಳೆದ ವರ್ಷದ ಸಮೀಕ್ಷೆಯು ತಿಳಿಸಿತ್ತು. 'ಗಂಗಾಮೈಯಾ' ಎಂದು ಪೂಜಿಸುವ ಗಂಗಾ ನದಿಯ ಇಂದಿನ ಸ್ಥಿತಿ ಪ್ರತ್ಯಕ್ಷವಾಗಿಯೇ ಕಾಣಬೇಕು. ಪ್ರತೀವರ್ಷ ಸುಡಲ್ಪಟ್ಟ ಅಥವಾ ಅರೆ ಸುಡಲ್ಪಟ್ಟ ೩೩ ಸಾವಿರಕ್ಕೂ ಅಧಿಕ ಶವಗಳನ್ನು ಗಂಗಾ ನದಿಯಲ್ಲಿ ಎಸೆಯಲಾಗುತ್ತದೆ. ಈ ಶವಗಳ ದಹನ ಸಂಸ್ಕಾರಕ್ಕೆ ೧೬ ಸಾವಿರ ಟನ್ ಕಟ್ಟಿಗೆ ಬೇಕು. ಇವುಗಳ ಬೂದಿ ಕೂಡ ನದಿಗೆ ಬಂದು ಸೇರುತ್ತದೆ. ಇನ್ನು ಪಶುಗಳು ತೇಲುವುದು ಬೇರೆಯೇ ಅಂಕಿಅಂಶವಿದೆ. ಘಾಟ್‌ಗಳ ತೀರದಲ್ಲಿ ಒಂದೆಡೆ ಬಟ್ಟೆ ಒಗೆಯುವುದು, ಎಮ್ಮೆಗಳು ಬಿದ್ದುಕೊಳ್ಳುವುದು... ಇವೆಲ್ಲ ದೃಶ್ಯಗಳೂ ಇವೆ. ಹೀಗಿದ್ದೂ ಇದೇ ಗಂಗಾ ನದಿಯಲ್ಲಿ ಪ್ರತೀದಿನ ಒಂದೂವರೆ ಲಕ್ಷ ಜನ ತಮ್ಮ 'ಪಾಪ'ಗಳನ್ನು ಕಳೆಯಲು ಸ್ನಾನ ಮಾಡಿ ಪುಣ್ಯ ಸಂಪಾದಿಸುತ್ತಿದ್ದಾರೆ !

ಶ್ರೀನಿವಾಸ ಜೋಕಟ್ಟೆ
ಪತ್ರಕರ್ತರು, ಎವರ್‌ಶೈನ್ ತುಲಿಪ್, ಬಿಲ್ಡಿಂಗ್ ನಂ. ೧೭೧, ಫ್ಲಾಟ್ ನಂ. ೩೦೨
ಅವೆನ್ಯೂ ಫೇಸ್ - ೨, ಸೆಕ್ಟರ್-೬, ಎವರ್‌ಶೈನ್ ಸಿಟಿ, ವಸಾಯಿ (ಪೂರ್ವ)
ಥಾಣೆ ಜಿಲ್ಲೆ (ಮಹಾರಾಷ್ಟ್ರ) ಪಿನ್ - ೪೦೧ ೨೦೮




# 'ಬದುಕು ನಮ್ಮದು' ದಲಿತ ಭಾರತ ಕಥನ ಪೂರ್ವಪೀಠಿಕೆ




ಬೆಲೆ : ರೂ. ೫೫ ಪುಟ : ೯೬
ಮರಾಠಿ ಮೂಲ : **ಬೇಬಿತಾಯಿ ಕಾಂಬಳೆ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
ಪ್ರಕಾಶನ : **ನವಕರ್ನಾಟಕ ಪ್ರಕಾಶನ**

ಈ ಭೂಲೋಕದಲ್ಲಿ ದಲಿತರ ಬದುಕು ಕರಕಷ್ಟ; ಅದರಲ್ಲಿ ದಲಿತ ಮಹಿಳೆಯ ಬದುಕು ಮತ್ತೂ ಕರಕಷ್ಟ; ಜಗತ್ತಿನ ಎಲ್ಲಾ ಕೇಡು, ಕೆಡುಕು, ಕ್ರೌರ್ಯಗಳ ಹರ್ಕ್ಯುಲಿಸ್ ಭಾರ ಅವಳ ಎದೆ ಮೇಲೆ ಬಿದ್ದಿರುತ್ತದೆ. ಹುಟ್ಟುವಾಗಲೇ ಅವಳು ಸತ್ತು ಬದುಕಿ ಹುಟ್ಟುತ್ತಾಳೆ; ಬದುಕಿದರೂ ಸತ್ತಬಾಳು ಬಾಳುತ್ತಾಳೆ; ಕಡೆಗೊಂದು ದಿನ ಸತ್ತು ಮಣ್ಣುಗೂಡುತ್ತಾಳೆ. ಅವಳಿಗೆ ಸ್ವರ್ಗದ ಕಲ್ಪನೆ ಇಲ್ಲ; ನರಕದ ಭೀತಿ ಇಲ್ಲ. ದೇವನೂರ ಮಹಾದೇವರ ಸಾಕವ್ವನ ಅನುಭವವನ್ನು ಕೇಳುವುದಾದರೆ ''ಅಯ್... ನರಲೋಕದಲಿ ನಾನು ಪಟ್ಟಂಥ ಕಷ್ಟಕ ಆ (ನರಕ) ಸೀಕ್ಸ ಎಲ್ಲಾದ್ದುತಗಾ... ಅವ್ನ (ಯಮನ) ಜೊತೇಲೂ ಅದ್ನೆ ಅಂತೀನಿ ಕನಾ...'' (ಒಡಲಾಳ, ಪುಟ-೨೦). ಸಾಕವ್ವನ ಅನುಭವವೇ ಸಾರ್ವತ್ರಿಕವಾಗಿ ಎಲ್ಲ ದಲಿತ ಹೆಣ್ಣುಮಕ್ಕಳ ಅನುಭವ ಆಗಿರುತ್ತದೆಯಷ್ಟೆ. ಪ್ರಸ್ತುತ ಬೇಬಿತಾಯಿ ಕಾಂಬಳೆಯವರ 'ಬದುಕು ನಮ್ಮದು' ಎಂಬ ಮರಾಠಿ ಆತ್ಮಕಥೆಯೂ ಇದನ್ನೇ ಅನಾವರಣಗೊಳಿಸುತ್ತದೆ. ೧೯೫೦ರ ದಶಕದಲ್ಲಿಯೇ ರಚಿತವಾದ ಈ ಪುಸ್ತಕವನ್ನು ಪ್ರೊ|| ಚಂದ್ರಕಾಂತ ಪೋಕಳೆಯವರು ಕನ್ನಡಕ್ಕೆ (೨೦೦೯) ತರ್ಜುಮೆ ಮಾಡಿದ್ದಾರೆ. ಅದು ನವಕರ್ನಾಟಕ ಪ್ರಕಾಶನದಿಂದ ಹೊರಬಂದಿದೆ.

ಮಹಾರಾಷ್ಟ್ರದ ಸತಾರ ಜಿಲ್ಲೆಯ ಫಲಟಣದಲ್ಲಿ ವಾಸಿಸುತ್ತಿರುವ ಬೇಬಿತಾಯಿ ಸದ್ಯ ಕೆಳವರ್ಗದ ದುಃಖಾರ್ತರ ಸಾಮಾಜಿಕ ಸೇವೆಯಲ್ಲಿ ತೊಡಗಿಸಿ ಕೊಂಡಿದ್ದಾರೆ. ಮಹಾರಾಷ್ಟ್ರ ಸರಕಾರ ಹಲವಾರು ಪ್ರಶಸ್ತಿಗಳನ್ನು ನೀಡಿ (ಶ್ರೀಮತಿ ಕಾಂಬಳೆಯವರನ್ನು) ಸನ್ಮಾನಿಸಿದೆ. ೧೯೨೯ರಲ್ಲಿ ಜನಿಸಿದ ಬೇಬಿತಾಯಿ ಓದಿದ್ದು ಕೇವಲ ಐದನೇ ತರಗತಿವರೆಗೆ ಮಾತ್ರ. ಆದರೆ ಅವರು ತನ್ನ ಸುತ್ತಲಿನ, ತನ್ನ ಬದುಕಿನ ಅನುಭವದಿಂದ ಕಲಿತದ್ದೇ ಹೆಚ್ಚು. ಡಾ|| ಬಾಬಾಸಾಹೇಬ ಅಂಬೇಡ್ಕರ್ ಇವರ ಬದುಕಿನ ಮೇಲೆ ಅಪಾರ ಪ್ರಭಾವ ಬೀರಿದ್ದಾರೆ. 'ಬದುಕು ನಮ್ಮದು' ಎಂಬ ತನ್ನ ಆತ್ಮಕಥೆಯನ್ನು ತನ್ನ ಇಪ್ಪತ್ತನೇ ವಯಸ್ಸಿಗೇ ಬರೆದರು. ಈ ಕೃತಿ ಮಹಾರಾಷ್ಟ್ರದ ಜನತೆಯ ಮೇಲೆ ಬಹಳ ಪರಿಣಾಮ ಬೀರಿತು. ಇಲ್ಲಿ ಅವರ ಸಮುದಾಯದ ನೋವು ನಲಿವುಗಳನ್ನು, ಅವರ ಸಾಮಾಜಿಕ-ಆರ್ಥಿಕ ಮಟ್ಟವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಪುಸ್ತಕ ತನ್ನ ನೆಲವನ್ನು ದಾಟಿ ದೇಶ-ವಿದೇಶಗಳ ಜನಮನವನ್ನು ತಟ್ಟಿದೆ. ಸಮಾಜ ವಿಜ್ಞಾನಿಗಳಿಗೆ ಆಕರಗ್ರಂಥವಾಗಿದೆ. ಜಗತ್ತಿನ ಹಲವಾರು ಭಾಷೆಗಳಿಗೆ ಅನುವಾದಗೊಂಡಿದೆ. ಉಚಲ್ಯಾ, ಉಪರಾ, ಅಕ್ರಮ ಸಂತಾನ, ವಾಲ್ಮೀಕಿ ಮುಂತಾದ ಮರಾಠಿ ಭಾಷೆಯಲ್ಲಿನ ಶ್ರೇಷ್ಠ ಆತ್ಮಕತೆಗಳ ಸಾಲಿಗೆ ಸೇರುವ 'ಬದುಕು ನಮ್ಮದು' ಒಂದು ವಿಭಿನ್ನ ಮಾದರಿಯದು. ಹಾಗಾದರೆ ಇದರ ವಿಶೇಷತೆ ಏನು ?

ಬೇಬಿತಾಯಿಯವರ ಈ ಕೃತಿಯು ಈಗ್ಗೆ ೫೦-೬೦ ವರ್ಷಗಳ ಹಿಂದಿನ ಮಹರ್ ಜಾತಿ ದಲಿತರ ಬದುಕಿನ ಯಥಾವತ್ ಚಿತ್ರಣ ನೀಡುತ್ತದೆ. ಹಾಗೇ ದಲಿತರಿಗೆಲ್ಲಾ ಸಾರ್ವತ್ರಿಕವಾಗಿ ಇದು ಅನ್ವಯವಾಗುತ್ತದೆ. ದಲಿತರ ಬದುಕಿನ ಬಗ್ಗೆ ನಾಡಾಡಿ ಅಲ್ಲಮಪ್ರಭುವಿನ ನುಡಿಗಟ್ಟಿನಲ್ಲಿ ಹೇಳಬಹುದಾದರೆ, ''ಅಕ್ಷರಶಃ ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ಕಂಡಯ್ಯಾ'' ಎನ್ನುವಂತೆ. ಅಂಥ ದುಃಖಸಾಗರದಲ್ಲಿ ಮುಳುಗಿ ಏಳುವ ವಾಸ್ತವಾನುಭವ ಇಲ್ಲಿ ಮಡುಗಟ್ಟುತ್ತದೆ. ಅದನ್ನು ಬೇಬಿತಾಯಿ ನಿರ್ಲಿಪ್ತತೆ ಯಿಂದಲೂ 'ಬದುಕು ನಮ್ಮದು' ಎಂಬ ಆಪ್ತತೆಯಿಂದಲೂ ಚಿತ್ರಿಸುತ್ತಾ ಹೋಗುತ್ತಾರೆ. ಪ್ರಸ್ತಾವನೆಯಲ್ಲಿ ಡಾ|| ಮೆಕ್ಸಿನ್ ಬರ್ನ್‌ಸನ್ ಹೇಳಿರುವಂತೆ, ''ಈ ಪುಸ್ತಕದ ಅತ್ಯಂತ ಮಹತ್ವದ ಭಾಗವೆಂದರೆ ಆ ಕಾಲದ ಹೊಲೆಯ ಮಹಿಳೆಯರ ಜೀವನ, ಏಳೆಂಟು ವರುಷದ ಪೋರಿಯ ಲಗ್ನ, ಅತ್ತೆ ಮನೆಯ ಕಿರುಕುಳ, ಚಿತ್ರಹಿಂಸೆ, ಸೊಸೆಯನ್ನು ದೂರಮಾಡುವ ಹಿಕ್ಮತ್ತು, ಓಡಿಹೋದ ಸೊಸೆಯನ್ನು (ಉಪಾಯವಾಗಿ) ಹಿಡಿದು ತಂದು ಕಾಲಿಗೆ ಸಂಕೋಲೆ ಹಾಕುವ, ಮೂಗು ಕತ್ತರಿಸುವ ಪ್ರಸಂಗಗಳು – ಇಂಥ ಅಮಾನುಷ ಪ್ರಕಾರಗಳನ್ನು ಬೇಬಿತಾಯಿ ಕಾಂಬಳೆ ಯವರು ತಪಶೀಲವಾಗಿ ಬಣ್ಣಿಸುವ ರೀತಿ ಭಾರತೀಯ ಸ್ತ್ರೀ ಜೀವನ ಮತ್ತು ಸಮಾಜದ ಮೇಲೆ ಬೆಳಕು ಚೆಲ್ಲುತ್ತದೆ.''

ಹೊಸದಾಗಿ ಬಂದ ಹೊಸ ಸೊಸೆಗೆ ಅತ್ತೆ ಮನೆ ಎಂಬುದು ಕಸಾಯಿಖಾನೆಯೇ. ಅಲ್ಲಿನ ಕಿರುಕುಳ ತಾಳಲಾರದೆ ತವರಿಗೆ ಓಡಿಹೋದರೂ ಪ್ರಯೋಜನವಿಲ್ಲ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂದು ತವರಿನವರು ಮತ್ತೆ ಅತ್ತೆಮನೆಗೆ ಕಳುಹಿಸುತ್ತಾರೆ. ಹಾಗೆ ಬಂದವಳ ಗತಿ ಏನೆಂಬುದನ್ನು ಬೇಬಿತಾಯಿಯವರ ಬರವಣಿಗೆ ಯಲ್ಲಿಯೇ ನೋಡಬಹುದು :

''ಗಂಡನ ಮನೆ ಸೇರಿದ ಆಕೆಯ ಮೇಲೆ ಮತ್ತೊಂದು ಅಸ್ತ್ರವನ್ನು ಪ್ರಯೋಗಿಸಲಾಗುತ್ತದೆ. ಐದು ಕಿಲೋ ಭಾರದ ಚೌಕೋನಾಕಾರದ ಮರದ ತುಂಡಿನ ನಡುವೆ ತೂತು ಕೊರೆಯಲಾಗುತ್ತದೆ. ಆ ತೂತಿನೊಳಗೆ ಕಾಲು ಸಿಕ್ಕಿಸಲು ಬರುವಂತಿರಬೇಕು. ಅದರ ನಡುವೆ ಒಂದು ಸಲಾಕೆ ಹಾಕಿರುತ್ತಾರೆ. ಆ ಮರದ ತುಂಡನ್ನು ಸೊಸೆಯ ಬಲಗಾಲಿಗೆ ಸಿಕ್ಕಿಸುತ್ತಾರೆ. ಈ ಬಗೆಯ ಶಿಕ್ಷೆಗೊಳಗಾಗುವ ಸೊಸೆಯರ ಪ್ರಮಾಣ ಐವತ್ತಕ್ಕೊಬ್ಬ ರಷ್ಟಿದೆ. ಮರದ ತುಂಡಿನಲ್ಲಿ ಆಕೆಯ ಕಾಲು ಸಿಕ್ಕಿಸಲಾಗುವುದು. ಭಾರವಾದ ಮರದ ಸಂಕೋಲೆ ತುಂಡು ಹೊತ್ತು (ಎಳೆದು)ಕೊಂಡೇ ಅವಳು ಓಡಾಡಬೇಕು. ಮರದ ತುಂಡು ನಡೆಯುವಾಗ ತರಚಿ, ಗಾಯವಾಗಿ ರಕ್ತ ಸೋರುತ್ತಿರುತ್ತದೆ. ಸೊಸೆ ಎಂದರೆ ಅವಳು ಸಹ ಭಾವನಾರಹಿತ ಮರದ ಕೊರಡಿದ್ದಂತೆ. ಚಲಿಸುವ ಕೊರಡು ಅಷ್ಟೆ'' (ಪುಟ-೭).

ತೊಂಡು ಮೇಯುವ ದನಗಳಿಗೆ ಹಾಕುವ ಕುಂಟೆ ತುಂಡಿನ ಹಾಗೆ ಐದು ಕಿಲೋ ಗಾತ್ರದ ಮರದ ಕೊರಡನ್ನು ಕಾಲಿಗೆ ಸಿಕ್ಕಿಸಿ ದೈಹಿಕ ನೋವು ಕೊಡುವುದರ ಜೊತೆಗೆ, ಸೊಸೆ ಇನ್ನಷ್ಟು ಘಾಸಿಗೊಳ್ಳುವ ಹಾಗೆ ಅತ್ತೆ ಮಾವಂದಿರ ಬೈಗಳು, ಗಂಡನ ಬಾರುಕೋಲು ಏಟುಗಳು ಬೇರೆ! ಹೀಗೆ ಒಂದೇ ಎರಡೇ! ಈ ಚಿತ್ರಹಿಂಸೆಯಿಂದ ಆ ಎಳೆಯ ಸೊಸೆ ಜರ್ಜರಿತಳಾಗುತ್ತಾಳೆ... ಕೆಲವೊಮ್ಮೆ ಗತ್ಯಂತರವಿಲ್ಲದೆ ಕಾಲಿಗೆ ಹಾಕಿದ ಮರದ ಕೊರಡಿನ ಸಂಕೋಲೆ ಸಹಿತ ಆಕೆ ಓಡಿಹೋಗುತ್ತಾಳೆ... ಆ ಕೊರಡು ಕಾಲಿಗೆ ತಿಕ್ಕಿ ತಿಕ್ಕಿ ರಕ್ತಸಿಕ್ತವಾಗಿರುತ್ತದೆ. ಆದರೂ ಉಪಾಯಾಂತರದಿಂದ ಅವಳನ್ನು ಹುಡುಕಿ ಎಳೆತರುತ್ತಾರೆ. ತನ್ನ ತಂದೆ ತಾಯಂದಿರ ಚಾಡಿಮಾತಿನ ತಾಳಕ್ಕೆ ಕುಣಿಯುವ ಅವಳ ಗಂಡನೆಂಬ ಗಂಡಸು, ಅವರ ಮಾತಿಗೆ ವಿಧೇಯನಾಗಿ ತನ್ನ ಹೆಂಡತಿ ಮಲಗಿಕೊಂಡಾಗ ಅವಳ ಎದೆಯಮೇಲೆ ಕೂತು ಮೂಗು ಕತ್ತರಿಸುತ್ತಾನೆ. ಕೊಯ್ದ ಮೂಗಿನಿಂದ ರಕ್ತ ಸೋರುತ್ತಿರುತ್ತದೆ. ಅಂಥ ಸ್ಥಿತಿಯಲ್ಲಿ ಆಕೆಯನ್ನು ಹೊರಗೆ ದಬ್ಬುತ್ತಾರೆ – ಕಟುಕ ಕೋಳಿ ಕತ್ತರಿಸಿ ಆಚೆ ಎಸೆದಂತೆ (ಪುಟ-೫೪)

**ಪ್ರೊ|| ಶಿವರಾಮಯ್ಯ**

# ಒಡೆದ ಗುಮ್ಮಟದ ತುಂಬಾ...




೧

ನೀಲಿಯಾಕಾಶದ ತುಂಬ
ಕಪ್ಪನೆಯ ಮೋಡಗಳು
ಕೊರೆಯುವ ಛಳಿಯಲ್ಲಿ
ಸುರಿವ ಮಳೆ !

೨

ಒಂದು ಕಾಲವಿತ್ತು,
ಈ ನೆಲದ ಮೇಲೆ
ಆ ದೇವನ ಪ್ರೀತಿ
ಹನಿ ಹನಿಯಾಗಿ
ಜಿನುಗಿತ್ತು.

ಆಗಿನ್ನು ಅವನಿಗೆ ಹೆಸರಿರಲಿಲ್ಲ!

ಅದೊಂದು ಬದುಕಾಗಿತ್ತು
ಮಾತಿನಲ್ಲಿ
ಮೌನದಲಿ
ಮನಸು ಕನ್ನಡಿಯಾಗಿತ್ತು
ಕಣ್ಮುಚ್ಚಿದರೂ ಚಿತ್ರ ಸ್ಪಷ್ಟವಿತ್ತು.
ಒಲವ ಬೆಸುಗೆ ಬಲವಾಗಿತ್ತು!

೩

ನೆನ್ನೆ ಕತ್ತಲಾಗಿತ್ತು,
ಒಡೆದ ಗುಮ್ಮಟದ ತುಂಬಾ
'ರಾಮಾ' ರಗುತ ಕೆಂಪೋ ಕೆಂಪು
ಹೆಜ್ಜೆ ಇಟ್ಟಲ್ಲೆಲ್ಲಾ ಕಾಣದ
ಕಪ್ಪು ಗುರುತು !

ಬೆಳಕು ಹರಿಯುವ ಮೊದಲೇ
ಸಿಡಿದ ಸೂರ್ಯ ಬಿಕ್ಕಿ ಬಿಕ್ಕಿ
ಅತ್ತದ್ದು ಯಾರ ಮಡಿಲಿನಲ್ಲಿ ?

೪

ತಬ್ಬಲಿ ಕಂದನ
ಅಳುವ ಕಣ್ಣಹನಿ ಕೇಳಿತು –
ಆದರೇನಂತೆ ಹೆಸರು 'ಹಿಂದು - ಮುಂದು'
ಅರಿಯದಿದ್ದರೆ ಮನಸುಗಳು
ಒಂದನೊಂದು !

'ಇಲ್ಲಿ' ಹುಟ್ಟಿದ ನಾನು
ಹುಟ್ಟಿದ್ದರೆ 'ಅಲ್ಲಿ'...
ಕೂಗುತಿರಲಿಲ್ಲವೆ ನೀವೂ 'ಬಾ ಬಾ'
ಬಾರೋ ಎಂದು !

ಮನವನರಿತ ಪ್ರೀತಿಯ
ಮಾನವತೆಯ ಮುಂದೆ
ಒಂದೆಯಲ್ಲವೆ 'ನಾಮ' –
ವೆಲ್ಲವು ಅಂದು – ಇಂದು –
ಎಂದೆಂದೂ –

**ಎ. ಹರಿನಾಥ ಬಾಬು**
ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧

ಈ ರೀತಿ ಬಡಪಾಯಿ ಹುಡುಗಿಯರ ಬಲಿದಾನ ನಲವತ್ತು ವರುಷಗಳವರೆಗೆ ಮುಂದುವರಿಯುತ್ತಿರುತ್ತದೆ. ಕೆಳವರ್ಗದ ಹೆಂಗಸರ ಜೀವನವು ತಿಳುವಳಿಕೆ ಬಂದಾಗಿನಿಂದ ಸಂಕಟದ ಗಣಿಯಲ್ಲಿ ನಿರ್ಮಾಣ ಗೊಳ್ಳುತ್ತದೆ. ಈ ಮೇಲೆ ಉಲ್ಲೇಖಿಸಿದ 'ಒಡಲಾಳ'ದ ಸಾಕವ್ವನ ಮಾತೇ ಇದಕ್ಕೆ ಭಾಷ್ಯ ನುಡಿಯುತ್ತದೆ. ಇದಕ್ಕಿಂತ ನರಕ ಬೇರೆ ಎಲ್ಲಾದರೂ ಉಂಟೆ? ಈ ಬರ್ಬರ ನಡತೆಗೆ ಬೇಬಿತಾಯಿ ಕೊಡುವ ಸಮರ್ಥನೆಯಂತೂ ತುಂಬ ಮಾರ್ಮಿಕವಾಗಿದೆ. ''ಜಗತ್ತು ಗುಲಾಮಗಿರಿಯ ಸಂಕೋಲೆಯನ್ನು ನಮ್ಮ (ದಲಿತರ) ಕೈಗೆ ತೊಡಿಸಿತು. ಕೊನೆಗೆ ನಾವೂ ಮನುಷ್ಯರೇ ಅಲ್ಲವೆ? ನಮಗೂ ಬೇರೆಯವರನ್ನು ಆಳಬೇಕೆಂದು ಅನಿಸುವುದಿಲ್ಲವೆ? ಆದರೆ ನಮ್ಮಿಂದ ಆಳಿಸಿಕೊಳ್ಳುವವರು ಯಾರು? ಹೀಗಾಗಿ ನಾವು ನಮ್ಮವರನ್ನೇ ಆಳುವ ವ್ಯವಸ್ಥೆ ಮಾಡಿಕೊಂಡೆವು. ನಾವು ನಮ್ಮ ಸೊಸೆಯಂದಿರ ಕೊರಳಿಗೆ ಸಂಕೋಲೆಯನ್ನು ಬಿಗಿದೆವು'' (ಪುಟ-೬೮). ಬೇಬಿತಾಯಿ ಕೊಡುವ ಸೊಸೆಯ ಅಮಾನುಷ ದೀನಚಿತ್ರ ಜಗತ್ತಿನಲ್ಲಿ ಇನ್ನಾವ ಕಡೆಯೂ ಸಿಗಲಾರದು. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ; ಕಾಲಚಕ್ರ ಉರುಳುವುದು. (ನೋಡಿ : ಬದುಕು ನಮ್ಮದು ೮ ಮತ್ತು ೯ನೆಯ ಭಾಗ)

'ಬದುಕು ನಮ್ಮದು' ಪುಸ್ತಕದಲ್ಲಿ ಚಿತ್ರತವಾಗಿರುವ ಹೊಲೆಯರ ಬದುಕಿನ ಮಾದರಿಗಳು ಇನ್ನೂ ಅನೇಕ ಬಗೆಯವು. ಇದರಲ್ಲಿ ಬೇಬಿತಾಯಿಯ ಸತ್ಯನಿಷ್ಠುರ, ನೇರ ಗಂಭೀರ ಹಾಸ್ಯ, ವಿನೋದಗಳ ಶೈಲಿ ಓದುಗರನ್ನು ಸೆರೆಹಿಡಿಯುವಂತಿದೆ. ಉದಾಹರಣೆಗೆ, ಆಷಾಢಮಾಸದ ದೇವರ ಜಪ-ತಪ, ಪೂಜೆ, ಆಚರಣೆ; ದೇವರು ಮೈಮೇಲೆ ಬರುವುದು; ಜೋಪಡಿಗಳನ್ನು ಶುದ್ಧಿ ಗೊಳಿಸುವುದು; ಮಕ್ಕಳ ಮೈತೊಳೆಯುವುದು; ಹೆಣ್ಣುಮಕ್ಕಳು ಮೀಯುವುದು; ಮಾರಿಹಬ್ಬದಲ್ಲಿ ಕೋಣ ಕಡಿಯುವುದು; ಸತ್ತ ದನಗಳ ಪಾಲು ಮಾಡುವುದು; ಹೊಟ್ಟೆಗಿಲ್ಲದ ಮಕ್ಕಳು ಪಾಪಾಸುಕಳ್ಳಿ ಹಣ್ಣು ಕಿತ್ತು ತಿನ್ನುವುದು; ಮಕ್ಕಳು ಹುಟ್ಟುವುದು, ಸಟೆಯವ್ವ ಅದರ ಜಮಾತಿ ಬರೆಯುವುದು; ಪೋತ ರಾಜನ ಜೀವನಕ್ರಮ; ಸದಾ ಹಸಿರು ಸಿಂಬಳ ಸುರಿಸುವ ಬೆತ್ತಲೆ ಮಕ್ಕಳು; ಬಟ್ಟೆ-ಬರೆ, ಸೀರೆ, ಕುಪ್ಪಸ, ತಲೆಗಳಲ್ಲಿರುವ ಹೇನು-ಕೂರೆಗಳನ್ನು ಕುಕ್ಕಿ ಕೊಲ್ಲುವುದು; ತಿರುಕ ರಾಜನಂತೆ ಕಿತ್ತು ತಿನ್ನುವ ಬಡತನದಲ್ಲೂ ತಮ್ಮನ್ನು ರಾಜ-ರಾಣಿ ಎಂದುಕೊಂಡು ಕನಸುಕಟ್ಟಿ ಕರೆದು ಕೊಳ್ಳುವುದು; ಹರಿಶ್ಚಂದ್ರ ಕತೆಯ ವೀರಬಾಹುವಿನಂತೆ ಹೊಲೆಯರ ಯಜಮಾನ ದರ್ಬಾರು ಮಾಡುವುದು; ಬಾಲ್ಯವಿವಾಹಗಳು, ಹೆಣ್ಣು ಕೇಳುವುದು, ನಿಶ್ಚಯ ಮಾಡಿಕೊಳ್ಳುವುದು; ವಧುದಕ್ಷಿಣೆ, ಎಂಟೆಂಟು ದಿನಗಳ ಲಗ್ನಗಳು, ಅಡಿಕೆ ಕಾರ್ಯಕ್ರಮ – ಈ ಬಗೆಯ ಕತ್ತಲು ಜಗತ್ತಿನ ಹೊಲೆಯರ ಬದುಕಿನ ಟ್ಯಾಬ್ಲೋ ಚಿತ್ರಸರಣಿಗಳು ಈ ಪುಸ್ತಕದ ತುಂಬ ಸಾಲುಗಟ್ಟಿ ಸಾಗುತ್ತವೆ. ಬೇಬಿತಾಯಿಯವರ ಸಮಾಜದ ಸ್ವಾನುಭವದ ಈ ಅಥೆಂಟಿಕ್ ಚಿತ್ರಗಳು ನಮ್ಮ ಮನಂಬುಗುವಂತಿವೆ. ಪಾರದರ್ಶಕವೂ ಪರಮಾಪ್ತವೂ ಆದ ಅವರ ಶೈಲಿ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದೆ. ಹೀಗೆ

ಲೋಕದ ಎದುರು ಮುಚ್ಚುಮರೆಯಿಲ್ಲದೆ, ಕೀಳರಿಮೆಗೆ ಎಲ್ಲೂ ಆಸ್ಪದವಿಲ್ಲದೆ ಆತ್ಮವಿಶ್ವಾಸದಿಂದ, ಆತ್ಮಪ್ರತ್ಯಯದಿಂದ ತನ್ನ ಸಮುದಾಯದ ಬದುಕನ್ನು ಲೋಕದ ಎದುರು ಎತ್ತಿ ತೋರಿಸುತ್ತಾರೆ ಬೇಬಿತಾಯಿ. ಇದು ಸಾಧ್ಯವಾದುದು ಅಂಬೇಡ್ಕರ್ ಅವರ ಪ್ರಭಾವಕ್ಕೆ ಸಿಲುಕಿದುದರಿಂದ; ಹಾಗೂ ಬುದ್ಧ ಬೆಳಕಿನ ಕಡೆಗೆ ನಡೆದುದರಿಂದ. ಶ್ರೀಮತಿ ಕಾಂಬಳೆಯವರ ವೈಯಕ್ತಿಕ ಜೀವನ ಹಾಗೂ ಅವರ ಸಮುದಾಯದ ಮೇಲೆ ಅಂಬೇಡ್ಕರ್ ಹೊರೆಸಿದ ಜವಾಬ್ದಾರಿ ಮತ್ತು ಋಣ ಬಹಳ ದೊಡ್ಡದು.




ಯಾವ ಪುರೋಹಿತ ಧರ್ಮ ಸಂವಿಧಾನ ಯಾವತ್ತು ಮಾನವ ಜಾತಿಯನ್ನೆಲ್ಲಾ ನಾಲ್ಕು ವರ್ಣಗಳನ್ನಾಗಿ ವಿಂಗಡಿಸಿ, ಅದರಲ್ಲೂ ಉಳಿದ ಶೇಷ್ಠನ್ನು ಪಂಚಮರು, ಅನಾಮಿಕರು, ಎಂದು ಹಂಗಿಸಿ, ಹೆಸರಿಸಿ, ಊರಿನಿಂದ ದಕ್ಷಿಣಕ್ಕೆ ಬಹುದೂರ ಹೊರಗುಳಿಸಿ, ಅವರ ನೆರಳೂ ಬೀಳದಂತೆ ಕಟ್ಟು ಮಾಡಿ, ಅಕ್ಷರ ವಿದ್ಯೆಯಿಂದ ವಂಚಿಸಿ, ನಾಯಿ, ನರಿ, ಕತ್ತೆಕಿರುಬಗಳ ಜೊತೆ ಬದುಕಲು ಅಟ್ಟಿಬಿಟ್ಟಿತೋ ಅಲ್ಲಿಂದ ಇಲ್ಲಿಯತನಕ ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚುಕಾಲ ದಲಿತ ಸೂರ್ಯನೆಂಬ ಅಭಿಧಾನಕ್ಕೆ ಪಾತ್ರನಾದ ಅಂಬೇಡ್ಕರ್ ಉದಯಿಸಿ ಬರುವವರೆಗೆ, ದಲಿತರು ಆ ವಿಪರೀತದ ಕತ್ತಲೆಯ ಕೂಪದಲ್ಲಿ ಗುಹಾಂತರ ಜೀವಿಗಳಾಗಿ, ಅಸ್ಪೃಶ್ಯರಾಗಿ ತಡಕಾಡುತ್ತಿದ್ದರಷ್ಟೆ. ಕಡೆಗೆ ಸಂವಿಧಾನ ಶಿಲ್ಪಿಗಳಲ್ಲೊಬ್ಬರಾದ ಅಂಬೇಡ್ಕರ್‌ರವರ ಭವಿಷ್ಯದ್ದರ್ಶನದಿಂದಾಗಿ ಮೀಸಲಾತಿ ಸೌಲಭ್ಯಗಳು ದೊರೆತು ದಲಿತ ಸಮುದಾಯ ಸ್ವಲ್ಪಮಟ್ಟಿನ ಸ್ವಾವಲಂಬನೆ ಜೀವನ ನಡೆಸುವಂತಾಗಿದೆ. ಇದಕ್ಕೆ ಕಾರಣಪುರುಷರು ಅಂಬೇಡ್ಕರ್ ಎಂಬುದನ್ನು ಈ ಪುಸ್ತಕದ ೧೦, ೧೧ನೆಯ ಭಾಗದಲ್ಲಿ ಸಾಕಷ್ಟು ಕೊಂಡಾಡಿದ್ದಾರೆ ಬೇಬಿತಾಯಿ. ಅದುದರಿಂದಲೇ ಆತ್ಮಪ್ರತ್ಯಯವುಳ್ಳ ಲೇಖಕಿಯರು ಹೊಲೆಯ ಎಂಬ ಶಬ್ದವನ್ನು ಕೀಳರಿಮೆಗೆ ಎಡೆಕೊಡದೆ ಬಳಸುತ್ತಾರೆ. ಇಷ್ಟಕ್ಕೂ ಆ ಶಬ್ದದಲ್ಲಿ ನಾಚಿಕೆಪಟ್ಟುಕೊಳ್ಳುವುದಾದರೂ – ಏನಿದೆ, ಎಂದು ಕೇಳುತ್ತಾರೆ. ನಿಜ, ಅವರೆಂದಂತೆ ಯಾರು ಇನ್ನೂ ಅಸ್ಪೃಶ್ಯತೆಯನ್ನು ಆಚರಿಸುತ್ತಿರುವರೋ ಅವರು ಮಾತ್ರ ನಾಚಿಕೆಪಟ್ಟುಕೊಳ್ಳಬೇಕಷ್ಟೆ.

ಹೊಲೆಯರೆಂದರೆ ಯಾರು ? (ಮಹಾರಾಷ್ಟ್ರದಲ್ಲಿ ಮಹಾರರು) ಇವರೆ ನಿಜವಾದ ನೆಲದ ಮಕ್ಕಳು. ಮಹಾರಾಷ್ಟ್ರಕ್ಕೆ ಮಹಾರರಿಂದ ಮಹಾರಾಷ್ಟ್ರ ಎಂಬ ಅನ್ವರ್ಥನಾಮ ಬಂದಿದೆ. ಇದು ಹೆಮ್ಮೆಯ ವಿಷಯ. ಹಾಗೆ ನೋಡಿದರೆ ಭಾರತದ ಮೂಲ ಪುರುಷರು ಹೊಲೆಮಾದಿಗರೆಂದು ಕರೆಯಲ್ಪಟ್ಟ ದ್ರಾವಿಡರೇ ತಾನೆ ? ತಮ್ಮ ಮುಂದಿನ ಪೀಳಿಗೆಯವರು ಅಂಬೇಡ್ಕರ್ ಬಗ್ಗೆ ತಿಳಿದಿರಬೇಕು; ಅವರು ಇಲ್ಲದಿದ್ದರೆ ದಲಿತ ಸಮುದಾಯಗಳು ಇನ್ನೂ ಎಷ್ಟೋ ಕಾಲ ಸವರ್ಣೀಯರು 'ನೂಕಿದಾ ಕಡೆ ಬಿದ್ದು' ಬಾಳು ಸಾಗಿಸಬೇಕಿತ್ತು, ಆದ್ದರಿಂದ ದಲಿತ ಸಮುದಾಯ ಆ ಮಹಾ ಪುರುಷನನ್ನು ಯಾವತ್ತೂ ಮರೆಯಬಾರದು ಎಂಬುದು ಬೇಬಿತಾಯಿ ಅವರ ಈ ಪುಸ್ತಕದ ಮೂಲ ಉದ್ದೇಶವಾಗಿದೆ.

ಕಡೆಯದಾಗಿ ಒಂದು ಮಾತು : ಈಗಲಾದರೂ ದಲಿತರು ತಮ್ಮ ಸಂಕೋಲೆಯಿಂದ ಪೂರ್ಣ ಬಿಡುಗಡೆ ಹೊಂದಿದ್ದಾರೆಯೆ, ಅವರಿಗೆ ಸಮಾನತೆ, ಸ್ವಾತಂತ್ರ್ಯ, ಸ್ವಾವಲಂಬನೆಯ ಬದುಕು ಸಾಧ್ಯವಾಗಿದೆಯೇ, ಸ್ವತಂತ್ರ ಭಾರತದಲ್ಲಾದರೂ ಅವರ ಹೆಗಲ ನೊಗಭಾರ ಇಳಿದಿದೆಯೇ ? ಅವರ ಮೇಲಿನ ದೌರ್ಜನ್ಯಗಳು ನಿಂತಿವೆಯೇ, ಎಂದು ಕೇಳಿದರೆ ಒಂದೇ ಉತ್ತರ; ಇಲ್ಲ. ಇವತ್ತಿಗೂ ಅವರ ಮೇಲಿನ ಬಹಿಷ್ಕಾರ, ದಮನ, ದೌರ್ಜನ್ಯ, ಹತ್ಯಾಕಾಂಡಗಳು ಅವ್ಯಾಹತವಾಗಿ ಜರುಗುತ್ತಲೇ ಇವೆ. ಉದಾಹರಣೆಗೆ, ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು :

ಕಿಲ್ವೇನ್ಮಣಿ (ತಮಿಳುನಾಡು-೧೯೬೮) ಬೆಲ್ಚಿ (ಬಿಹಾರ-೧೯೭೭) ಝೂನ್ಸಿ (ಉತ್ತರ ಪ್ರದೇಶ-೧೯೭೮) ಕರಂಚೇಡು (ಆಂಧ್ರ-೧೯೮೫) ಮೆಲವಲಾವು (ತಮಿಳುನಾಡು-೧೯೯೭) ಕಂಬಾಲಪಲ್ಲಿ (ಕರ್ನಾಟಕ-೨೦೦೦) ಜಜಾರ್ (ಹರಿಯಾಣ-೨೦೦೩) ಖೈರ್ಲಾಂಜಿ (ಮಹಾರಾಷ್ಟ್ರ-೨೦೦೬). ಈ ಮುಂತಾದೆಡೆ ಸವರ್ಣೀಯರಿಂದ ದಲಿತರ ಕೊಲೆ, ಸುಲಿಗೆ, ಹತ್ಯಾಕಾಂಡಗಳು ಜರುಗಿವೆ. ಇವತ್ತಿಗೂ ಈ ಅಪರಾಧಿಗಳಿಗೆ ಸೂಕ್ತ ಶಿಕ್ಷೆ ನೀಡಲಾಗಿಲ್ಲ, ಯಾಕೆಂದರೆ ಶೂದ್ರ ಸಮುದಾಯಗಳ ರಾಜಕೀಯ ಪ್ರಾಬಲ್ಯದಿಂದಾಗಿ ಸೂಕ್ತ ಸಾಕ್ಷಿಗಳಿಲ್ಲದೆ ನ್ಯಾಯದೇವತೆಯ ಕೈ ಕಟ್ಟಿದೆ. ಹಾಗಾಗಿ ಒಂದು ಅಂಕಿ-ಅಂಶದ ಪ್ರಕಾರ, ಸರಾಸರಿ ಪ್ರತಿ ಹದಿನೆಂಟು ನಿಮಿಷಗಳಿಗೆ ದಲಿತರ ಮೇಲೆ ದೌರ್ಜನ್ಯ ಜರುಗುತ್ತಿದೆ; ಪ್ರತಿದಿನವೂ ಇಬ್ಬರ ಹತ್ಯೆ ನಡೆಯುತ್ತಿದೆ, ಎಂದರೆ ವಸ್ತುಸ್ಥಿತಿಯ ಕರಾಳ ಸ್ವರೂಪ ಎಷ್ಟೆಂಬುದು ತಿಳಿದುಬರುತ್ತದೆ. ಈ ಬಗ್ಗೆ ಹೆಚ್ಚಿನ ವಿವರ - ಅರಿವು ಬೇಕಾದರೆ ನೋಡಿ 'ಖೈರ್ಲಾಂಜಿ' : ಡಾ|| ಆನಂದ್ ತೇಲ್‌ತುಂಬ್ಡೆ; ಅನುವಾದ : ಸಂ. ಶಿವಸುಂದರ್. ಲಂಕೇಶ್ ಪ್ರಕಾಶನ-೨೦೦೯). ಖೈರ್ಲಾಂಜಿಯಲ್ಲಿ ಚಿತ್ರಿತವಾಗಿರುವ ದಲಿತರ ಮೇಲೆ ಜರುಗುವ ದೌರ್ಜನ್ಯ ಚಿತ್ರಗಳು ನಮ್ಮ ಇಂದಿನ ಸಮಗ್ರ ದಲಿತ ಭಾರತ ಕಥನವಾಗಿದೆ. ದಲಿತೋದ್ಧಾರಕ್ಕೆಂದು ಸಂವಿಧಾನ ಸೂಚಿಸಿರುವ ಅನೇಕ ಕಾಯಿದೆ-ಕಾನೂನುಗಳು ಇಂದು ಆಚರಣೆಗೆ ಬಾರದೆ ಅಪ್ರಸ್ತುತವಾಗುತ್ತಿರುವುದನ್ನು ಈ ಪುಸ್ತಕ ಅಂಕಿ-ಸಂಕಿಗಳ ಮೂಲಕ ಸಾಬೀತುಪಡಿಸುತ್ತದೆ. ಪ್ರಾಚೀನ ವರ್ಣವ್ಯವಸ್ಥೆಯಲ್ಲಾದರೂ ಬ್ರಾಹ್ಮಣರು ಬಹುಸಂಖ್ಯಾತ ದುಡಿವ ಶೂದ್ರವರ್ಗವನ್ನು ತಮ್ಮ ಧರ್ಮಾಧಿಕಾರದಿಂದ ಶೋಷಣೆಗೆ ಗುರಿಪಡಿಸುತ್ತಿದ್ದರು. ಆದರೀಗ ನವ ಬ್ರಾಹ್ಮಣರಂತೆ ವರ್ತಿಸುವ ಶೂದ್ರರು ಹಣ, ಅಧಿಕಾರ ಹಾಗೂ ಓಟಿನ ಬಲದಿಂದ ದಲಿತರನ್ನು ಮೂಲೆಗೆ ತಳ್ಳಲು ಹವಣಿಸುತ್ತಿದ್ದಾರೆ. ಬುದ್ಧ ಬೆಳಕಿನೆಡೆಗೆ ನಡೆವ ದಲಿತ ಸಮುದಾಯಗಳು ಇತ್ತೀಚೆಗೆ ಸ್ವಾಭಿಮಾನದ, ಸ್ವಾವಲಂಬನೆಯ ಬದುಕನ್ನೇ ತಮ್ಮ ಪಾಡಿಗೆ ತಾವು ಬಾಳುತ್ತಿರುವುದೇ ಇವರ ಸೈರಣೆ ಕೆಡಿಸುತ್ತದೆ. ಆದ್ದರಿಂದ ಸಾಮಾಜಿಕ ನ್ಯಾಯವನ್ನು ಗಾಳಿಗೆ ತೂರಿದ ಇವರು ದಲಿತರ ಹತ್ಯಾಕಾಂಡಗಳಿಗೆ ಮುಂದಾಗುತ್ತಿದ್ದಾರೆ. ಹಿಂದೆ ಬ್ರಾಹ್ಮಣರು ಶೂದ್ರರ ಮೇಲೆ ಹೊರಿಸಿದ ಅಪರಾಧಿ ಧೋರಣೆಯನ್ನೇ ಇತ್ತೀಚೆಗೆ ಇವರು ದಲಿತರ ಮೇಲೆ ತೋರಿಸುತ್ತಿದ್ದಾರೆ. ಭೂಮಿ ಮತ್ತು ಸಂಪತ್ತಿನಲ್ಲಿ ಪಾಲುಗಾರಿಕೆಗೆ ಹೊರಟ ದಲಿತರ ಮೇಲೆ ಹತ್ಯಾಕಾಂಡಗಳು ಜರುಗುತ್ತಿವೆ. ಹಸಿರು ಕ್ರಾಂತಿಯ ಸಂದರ್ಭದಲ್ಲಿ ಹಿಂದುಳಿದ ವರ್ಗಗಳಿಗೆ ಭೂ ಒಡೆತನ ಹಾಗೂ ಅಧಿಕಾರ ಹಸ್ತಾಂತರವೂ, ಶೂದ್ರ ಜಾತಿಗಳ ಹೊಸ ಧ್ರುವೀಕರಣವೂ ಆಗಿ ಅವರಲ್ಲಿ ಸಂಪತ್ತು ಮತ್ತು ಅಧಿಕಾರ ಕೂಡಿಬಂದವು. ಆದ್ದರಿಂದ ಗ್ರಾಮೀಣ ಭಾರತದಲ್ಲಿ ದಲಿತರ ಮೇಲಿನ ದೌರ್ಜನ್ಯಗಳಿಗೆ ಸೂಕ್ತ ಶಿಕ್ಷೆಯೇ ಇಲ್ಲದಂತಾಯಿತು. ಜೊತೆಗೆ ಕೋಮುವಾದಿ ರಾಜಕಾರಣದಿಂದ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವವರಿಗೆ ಭಯೋತ್ಪಾದಕರು, ಇಲ್ಲವೇ ನಕ್ಸಲ್ ವಾದಿಗಳೆಂದು ಹಣೆಪಟ್ಟಿ ಕಟ್ಟಲಾಯಿತು. ಜೊತೆಗೆ, ಜಾಗತೀಕರಣ ಜಾರಿಗೆ ತಂದು ಆರ್ಥಿಕಾಭಿವೃದ್ಧಿ ನೀತಿಗಳು ಶೂದ್ರರನ್ನು ಉನ್ನತಿಗೂ ದಲಿತರನ್ನು ಅವನತಿಗೂ ನೂಕಲು ಕಾರಣವಾದವು.

ಒಟ್ಟಾರೆ, ಬೇಬಿತಾಯಿ ಕಾಂಬಳೆಯವರು ಆಶಿಸುವಂತೆ, ಅಂಬೇಡ್ಕರ್ ಪ್ರಣೀತ ಭಾರತ ಸಂವಿಧಾನದ ಅಡಿಯಲ್ಲಿಯೇ ಇಂದು ದಲಿತರ ಶೋಷಣೆ ಆಗುತ್ತಿದೆ; ಅವರ ಮೇಲಿನ ದೌರ್ಜನ್ಯಗಳಿಗೆ ಬೇರೆ ಬೇರೆ ರೂಪ - ಸ್ವರೂಪ ಬರುತ್ತಿದೆ. ಪ್ರಜೆಗಳಿಗೆ ನಿಜವಾದ ಅಧಿಕಾರವಿಲ್ಲದೆ ಕಾಂಚಾಣ ಉಳ್ಳವರು ಕಾಲಿಗೆ ಬಿದ್ದವರನ್ನು ತುಳಿಯುತ್ತಲಿದ್ದಾರೆ. ಸರ್ಕಾರ, ನ್ಯಾಯಾಂಗ, ಪತ್ರಿಕಾರಂಗ ಎಲ್ಲವೂ ಮೂಕಪ್ರೇಕ್ಷಕವಾಗಿವೆ. ಕಡೆಗೆ ವಿಸ್ಮೃತಿಗೆ ತುತ್ತಾದ ದಲಿತರೂ ತಮ್ಮ ಸಮುದಾಯಗಳನ್ನು ಮರೆತು ಅಧಿಕಾರಶಾಹಿ ಸವರ್ಣೀಯರಿಗೆ ಒತ್ತೆಯಾಳುಗಳಾಗಿ ಪರಿವರ್ತಿತರಾಗುತ್ತಿದ್ದಾರೆ. ಹಾಗೆ ನೋಡಿದರೆ, ಬೇಬಿತಾಯಿ ಕಾಂಬಳೆಯವರ 'ಬದುಕು ನಮ್ಮದು' ಕೃತಿ ಡಾ|| ತೇಲ್‌ತುಂಬ್ಡೆಯವರ 'ಖೈರ್ಲಾಂಜಿ' ದಲಿತ ಕಥನದ ಪೂರ್ವಪೀಠಿಕೆ ಎಂಬಂತಿದೆ. ಒಟ್ಟಾರೆ ಇಂದಿನ ತಮ್ಮ ಮೇಲಿನ ಪ್ರಜ್ಞಾಪೂರ್ವಕ ದೌರ್ಜನ್ಯಗಳ ಎದುರು ದಲಿತರು ಒಗ್ಗಟ್ಟಾಗಿ ಹೋರಾಡದಿದ್ದರೆ ಅವರ ಭವಿಷ್ಯ ಬಿಸಿಲುಗುದುರೆ, ಅಷ್ಟೆ.

**ಪ್ರೊ|| ಶಿವರಾಮಯ್ಯ**
ನಂ. ೧೭೨, ಹೊಂಗೆ ಸಾಲುಮನೆ, ಐಸೆಕ್ ರಸ್ತೆ, ನಾಗರಬಾವಿ ಗ್ರಾಮ
ಬೆಂಗಳೂರು - ೫೬೦ ೦೭೨



# ಚೆಲುವ ಕನ್ನಡನಾಡು: ಆರು ದಶಕಗಳಲ್ಲಿ ಎಲ್ಲಿಂದ ಎಲ್ಲಿಗೆ ?

ನಮ್ಮ ದೇಶಕ್ಕೊಂದು ಸಂವಿಧಾನವಿದೆ. ಆಡಳಿತೆಗೆ ಸಂವಿಧಾನದಲ್ಲಿ ಮಾರ್ಗದರ್ಶಕ ಸೂತ್ರಗಳವೆ. ಗಣತಂತ್ರ ವ್ಯವಸ್ಥೆ ಸ್ಥಾಪಿತವಾದ ಬಳಿಕ ಎಷ್ಟೇ ಕುಂದುಕೊರತೆಗಳಿದ್ದರೂ ಒಟ್ಟಿನಲ್ಲಿ ಯಶಸ್ವಿಯಾಗಿ ನಡೆಯುತ್ತಿರುವ ಆಡಳಿತ ವ್ಯವಸ್ಥೆ ಇದೆ. ಅವುಗಳ ಓರೆಕೋರೆಗಳನ್ನು ಸರಿಪಡಿಸಿಕೊಂಡು ವರ್ಷದಿಂದ ವರ್ಷಕ್ಕೆ ಉತ್ತಮಗೊಳಿಸುತ್ತಾ ಮುಂದೆ ಸಾಗುವುದು ಇಂದಿನ ಅಗತ್ಯವಾಗಿದೆ. ಆದರೆ ಎಲ್ಲ ಒಡಕು ಹುಟ್ಟಿಸಲು, ಎಲ್ಲ ಒಳ ಜಗಳ ಸೃಷ್ಟಿಸಿ ಅರಾಜಕತೆ ಉಂಟುಮಾಡಲು, ಎಲ್ಲ ಯಾರ ಆಹಾರದ ಸ್ವಾತಂತ್ರ್ಯವನ್ನೇ ಒಂದು ಧರ್ಮದ ಅಪ್ಪಣೆಗನುಗುಣವಾಗಿ ನಿರ್ಬಂಧಿಸಲು ಸಾಧ್ಯವಾಗುತ್ತದೆ, ಅಂತಹವುಗಳನ್ನೇ ತಮ್ಮ ಗೊತ್ತುಗುರಿಗಳನ್ನಾಗಿ ಇಟ್ಟು ಕೊಂಡಿರುವವರ ಆಡಳಿತವು ಇಂದು ನಮ್ಮ ದೇಶದಲ್ಲ ಕೆಲವೆಡೆ ಅಟ್ಟಹಾಸಗೈಯುತ್ತಿದೆ.

ಬಿ. ವಿ. ಕಕ್ಕಿಲ್ಲಾಯ

ಕರ್ನಾಟಕದ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ೧೯೪೭ರಲ್ಲಿ ತೆಂಕನಾಡು ಕಾಸರಗೋಡಿನಲ್ಲಿ ಅನೇಕ ನಿರೀಕ್ಷೆಗಳ ಮತ್ತು ಹೋರಾಟದ ಕೆಚ್ಚಿನ ನಡುವೆ ಜರುಗಿತ್ತು. ಕಾಸರಗೋಡು ಈ ಬರಹಗಾರನ ಹುಟ್ಟೂರು. ಅಂದಿನ ಸಮ್ಮೇಳನದಲ್ಲಿ ನಾಡಿನ ಹಿರಿಯ ಸಾಹಿತಿಗಳ ಸ್ವಾಗತದ ವ್ಯವಸ್ಥೆ ನಡೆಸಿದ್ದ ಸ್ವಯಂಸೇವಕ ತಂಡದಲ್ಲಿ ಓರ್ವ ಕಾರ್ಯ ನಿರ್ವಾಹಕನಾಗಿ ಈತ ಆ ಸಮ್ಮೇಳನದಲ್ಲಿ ಭಾಗಿಯಾಗಿದ್ದ. ''ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು, ಬದುಕು ಬಲುಹಿನ ಬೀಡು, ಸದಭಿಮಾನದ ಗೂಡು'' ಎಂಬುದು ಅಂದಿನ ಸಾಹಿತ್ಯ ಪರಿಷತ್ತಿನಲ್ಲಿ ಮೊಳಗಿದ್ದ ಕನ್ನಡ ನಾಡಗೀತೆಯಾಗಿತ್ತು. ಅದಾಗಿ ೬೩ ವರ್ಷಗಳೇ ಸಂದುಹೋಗಿವೆ. ಈ ಅವಧಿಯಲ್ಲಿ ಪರ್ಯಾಯವಾಗಿ ಭೂ ಸ್ವಾಮಿಗಳ, ಬಂಡವಾಳಗಾರರ, ಅರಸೊತ್ತಿಗೆಗಳ ಪ್ರತಿನಿಧಿಗಳನ್ನೊಳಗೊಂಡ ಎಲ್ಲ ರಾಜಕೀಯ ಪಕ್ಷಗಳು ಸಹ ಕರ್ನಾಟಕವನ್ನು ಆಳಿವೆ. ಕರ್ನಾಟಕ ಏಕೀಕರಣವಾಗಿ ೫೩ ವರ್ಷಗಳೇ ಆಗಿಹೋಗಿವೆ. ಜಾತ್ಯತೀತ ಜನತಾದಳ ಮತ್ತು ಹಿಂದುತ್ವವಾದಿ ಭಾಜಪ ಸಮ್ಮಿಳಿತವಾಗಿ ೨೦ ತಿಂಗಳುಗಳ ಕಾಲ ಸರಸವಾಡುತ್ತಾ ಈ ನಾಡನ್ನು ಇತ್ತೀಚೆಗೆ ಆಳಿವೆ. ಕೊನೆಗೀಗ ಕಮಲ ಶಸ್ತ್ರಚಿಕಿತ್ಸೆ ಹಾಗೂ ಕುದುರೆಗಳ ಸಗಟು ಮತ್ತು ಚಿಲ್ಲರೆ ವ್ಯಾಪಾರದ ಮೂಲಕ ಹಿಂದುತ್ವವಾದಿಗಳ ಎದುರಿಲ್ಲದ ಆದರೆ ಒಳಜಗಳ ಮುಗಿಯದ ಆಡಳಿತ ನಡೆಯುತ್ತಿದೆ. ಈ ಅವಧಿಯಲ್ಲಿ ಮೊನ್ನೆ ಗದುಗಿನ ಕುಮಾರವ್ಯಾಸನ ನಾಡಿನಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಮತ್ತೊಮ್ಮೆ ಜರುಗಿದ್ದನ್ನು ನಾವು ಗಮನಿಸಿದ್ದೇವೆ. ಈ ಕಾಲಾವಧಿಯ ನಡುವೆ ಉದಯವಾದ ಕನ್ನಡನಾಡು ಎಲ್ಲಿಂದ ಎಲ್ಲಿಗೆ ತಲುಪಿದೆ ಎಂದು ನೋಡುವಾಗ ಜನರ ಬವಣೆಗಳ ನಡುವೆ ಆಳುವವರ ದುಂದುಗಾರಿಕೆಯ ಚಿತ್ರಣ ಕಣ್ಣ ಮುಂದೆ ಕುಣಿಯುತ್ತಿದೆ. ಸಮ್ಮೇಳನದ ಅಧ್ಯಕ್ಷೆ ನಾಡೋಜ ಪ್ರಶಸ್ತಿ ವಿಜೇತೆ ಡಾ|| ಗೀತಾ ನಾಗಭೂಷಣ ಅವರು ನಮ್ಮ ಕನಸೆಲ್ಲಿ ನುಚ್ಚುನೂರಾಗಿದೆ ಎಂಬ ಅಳಲನ್ನು ತೋಡಿ ಕೊಂಡರು. ಕರ್ನಾಟಕದ ನಾಡು ನುಡಿ ಜನಜೀವನ ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಸಲುವಾಗಿ ಸಾಹಿತಿಗಳು ಹೋರಾಟಕ್ಕೆ ಇಳಿಯಬೇಕು. ಜನರು ಜಾತಿ, ಮತ, ಲಿಂಗ, ಪ್ರಾದೇಶಿಕ ಭೇದ-ಭಾವಗಳನ್ನು ಬದಿಗಿಟ್ಟು ಭವ್ಯ ಕನ್ನಡ ನಾಡನ್ನು ಕಟ್ಟುವ ಹೋರಾಟಕ್ಕೆ ಸನ್ನದ್ಧರಾಗಬೇಕು ಎಂದು ಕರೆಕೊಟ್ಟಿದ್ದಾರೆ. ಕಾಸರಗೋಡಿನಿಂದ ಗದಗಿಗೆ ಕನ್ನಡದ ತೇರು ಸಾಗಿ ಬಂದಾಗ ಮುಂದಿನ ಹಾದಿ ಎಷ್ಟು ಕಠಿಣವಾದದ್ದು ಮತ್ತು ದೀರ್ಘವಾದದ್ದು ಎಂಬ ಚಿಂತೆ ನಮ್ಮನ್ನು ಕಾಡುತ್ತದೆ. ಆದರೆ ಅದೇ ಸಮಯದಲ್ಲಿ ಸಮ್ಮೇಳನದ ಅಧ್ಯಕ್ಷೆಯವರ ಮಾತಿಗೆ ಧ್ವನಿಕೂಡಿಸುವ ಸಾಹಿತಿಗಳ ಭಾಷಣಗಳು ನಮ್ಮಲ್ಲಿ ಭರವಸೆಯನ್ನು ಮೂಡಿಸುತ್ತವೆ.

ಕಾಸರಗೋಡನ್ನು ಕನ್ನಡನಾಡು ಕಳೆದುಕೊಂಡಿದೆ. ಆದರೆ ಕನ್ನಡ ಅಲ್ಲಿ ಜೀವಂತವಿದೆ. ತುಳು, ಕನ್ನಡ, ಮಲಯಾಳ ಮತ್ತು ಅವುಗಳ ಉಪಭಾಷೆಗಳು ಅಲ್ಲಿ ಸೌಹಾರ್ದತೆಯ ನೆಲೆಯಲ್ಲಿ ಸಮನ್ವಯತೆಯ ತಳಹದಿಯ ಮೇಲೆ ಜನಜೀವನವನ್ನು ಉತ್ತಮಗೊಳಿಸುವ ಪ್ರಯತ್ನದಲ್ಲಿ ನಿರತವಾಗಿವೆ ಎಂದರೆ ಕೇವಲ ಉಪಚಾರದ ಮಾತಲ್ಲ. ಕನ್ನಡ ಜನರ ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಮುದಾಯಿಕ ಜೀವಂತಿಕೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಅಲ್ಲಿ ಮುಂದುವರಿದಿದೆ. ವಿದ್ವೇಷಗಳಿಗೆ ಎಡೆಕೊಡದೆ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಜೀವನದ ದಿಗ್ಗಜಗಳು ಅಲ್ಲಿ ನೆಲೆಸಿದ್ದಾರೆ ಮತ್ತು ಚಟುವಟಿಕೆಯಲ್ಲಿದ್ದಾರೆ ಎನ್ನುವುದು ಸಂತೋಷದ ಸಂಗತಿ.

ಆದರೆ ಗಂಡುಮೆಟ್ಟಿನ ಕನ್ನಡ ನೆಲ ಎಂದುಕೊಳ್ಳುವ ಉತ್ತರ ಕರ್ನಾಟಕದಲ್ಲಿ ಕನ್ನಡನಾಡನ್ನು ಒಡೆಯುವ ಪ್ರಯತ್ನಗಳು ನಡೆಯುತ್ತಿರುವುದು ಹಾಗೂ ಕನ್ನಡದ ಸಂರಕ್ಷಣೆಯ ಹೆಸರಿನಲ್ಲಿ ಕರ್ನಾಟಕವನ್ನು ಹೋಳು ಹೋಳುಗಳಾಗಿಸುವ ಚಳುವಳಿಗಳು ನಡೆಯುತ್ತಿರುವುದು ಆತಂಕದ ವಿಷಯವಾಗಿದೆ. ನಮಗೊಂದು ಉಚ್ಚ ನ್ಯಾಯಾಲಯದ ಪೀಠ ಬೇಕು, ಗಡಿಗಳ ಪುನರ್ರಚನೆ ಈಗಿಂದೀಗಲೆ ನಡೆಯಬೇಕು ಇತ್ಯಾದಿ ಬೇಡಿಕೆಗಳು ಕರ್ನಾಟಕ ವಿಭಜನೆಗೊಳ್ಳಬೇಕೆಂಬ ರೂಪಕ್ಕೆ ಆಗಾಗ ತಿರುಗುತ್ತಿರುವುದು ಅಪಾಯದ ಸಂಕೇತವಾಗಿದೆ. ದೇಶದಲ್ಲಿ ಸಹಜವಾಗಿ ಇರುವಂತಹ ವೈವಿಧ್ಯತೆಗಳೆಲ್ಲವನ್ನೂ ವೈರುಧ್ಯಗಳಾಗಿ ಹರಿತಗೊಳಿಸಿ ದೇಶವನ್ನೇ ಅಪಾಯಕ್ಕೆ ಗುರಿಪಡಿಸುವ ಪ್ರವೃತ್ತಿಗಳು ಕನ್ನಡ ನಾಡಿನಲ್ಲಿಯೂ ತೀವ್ರವಾಗಿಯೇ ಇವೆ. ಸಮ್ಮೇಳನದ ಅಧ್ಯಕ್ಷರು ಈ ಅಪಾಯವನ್ನು ಕುರಿತು ನೀಡಿರುವ ಎಚ್ಚರಿಕೆಯ ಮಾತನ್ನು ನಾಡಿನ ಮತ್ತು ದೇಶದ ಏಕತೆ, ದೃಢತೆ ಮತ್ತು ಪ್ರಗತಿಯನ್ನು ಅಪೇಕ್ಷಿಸುವ ನಾವೆಲ್ಲರೂ ಸಹ ಬೆಂಬಲಿಸುತ್ತೇವೆ ಎಂದು ಹೇಳುವ ಅಗತ್ಯ ಇದೆ.

ನಮ್ಮ ಚೆಲುವ ಕನ್ನಡ ನಾಡಿನ ಇಂದಿನ ದುರವಸ್ಥೆಯ ಚಿತ್ರಣವನ್ನೊಮ್ಮೆ ಪಕ್ಷಿನೋಟದಂತೆ ಗಮನಿಸೋಣ. ಹುಯಿಲಗೋಳ ನಾರಾಯಣರಾಯರು ರಚಿಸಿದ್ದ ಹಾಗೂ ಬೆಳಗಾವಿಯಲ್ಲಿ ಗಾಂಧಿಯವರ ಅಧ್ಯಕ್ಷತೆಯಲ್ಲಿ ಜರುಗಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ವಿದುಷಿ ಗಂಗೂಬಾಯಿ ಹಾನಗಲ್ ಅವರು ಹಾಡಿದ್ದ ಚೆಲುವ ಕನ್ನಡ ನಾಡಿನ ಗೀತೆ ಇಂದು ಎಲ್ಲರಿಗೂ ಮರೆತುಹೋದಂತೆ ಕಾಣುತ್ತದೆ. ಇಂದಿನ ಆಡಳಿತಗಾರರು ಶತಮಾನಗಳಷ್ಟು ಹಿಂದಿನ ಕಾಲದ ಅರಸುಗಳ ಕಾಲ್ಪನಿಕ ವೈಭವದ ಉತ್ಸವ ಒಂದರ ಹೆಸರಲ್ಲಿ ೧೩ ಕೋಟಿ ರೂ.ಗಳನ್ನು ವೆಚ್ಚ ಮಾಡಲು ಒಪ್ಪಿಕೊಂಡು ನಿಜವಾಗಿ ೭೫ ಕೋಟಿಗಳಷ್ಟು ಹಣವನ್ನು ಸಾರ್ವಜನಿಕ ಬೊಕ್ಕಸದಿಂದ ಖರ್ಚು ಮಾಡಿರುವ ವಾರ್ತೆ ಗದಗ ಸಮ್ಮೇಳನದ ಸಮಯದಲ್ಲೇ ಪ್ರಕಟವಾಗಿದೆ. ಅದಕ್ಕೆ ಪೂರ್ವಭಾವಿಯಾಗಿ ಉಜಿರೆಯಿಂದ ಹಂಪಿಯವರೆಗೆ ನಡೆದ ನಿತ್ಯೋತ್ಸವಗಳಿಗೆ ಸರಕಾರದ ಬೊಕ್ಕಸದಿಂದ ಕಡಿಮೆ ಎಂದರೆ ೧೦೦ ಕೋಟಿ ರೂ.ಗಳಾದರೂ ವ್ಯಯವಾಗಿದೆ. ಸರಕಾರದ ಬೊಕ್ಕಸದ ಹಣವು ತಮ್ಮ ಮತ್ತು ತಮ್ಮ ಪಕ್ಷದ ಖಾಸಗಿ ಸೊತ್ತೆಂದು ಪರಿಗಣಿಸಿ ಬೇಕಾಬಿಟ್ಟಿಯಾಗಿ ದೋಚಿ ಎಲ್ಲಿಗೋ ತಲುಪಿಸುವ ದುರ್ವ್ಯವಹಾರವು ಕರ್ನಾಟಕದಲ್ಲಿಂದು ರಾಜಾರೋಷವಾಗಿ ನಡೆಯುತ್ತಿದೆ. ೨೦೦೯-೧೦ನೆಯ ವರ್ಷದ ಮುಂಗಡಪತ್ರದಲ್ಲಿ ವಿಧಾನ ಮಂಡಳದ ಅನುಮತಿ ಪಡೆಯದೆ ಖರ್ಚು ಮಾಡಿ ಮುಂದಿನ ವರ್ಷ ಅದಕ್ಕೆ ಅಸ್ತು ಎನಿಸುವ ಕ್ರಮ ಇಂದು ಮಿತಿಮೀರಿ ಹೋಗಿದೆ. ಈ ಹಣ ಎಲ್ಲಿಗೆ ಹೋಗುತ್ತದೆ, ಯಾರ ಬೊಕ್ಕಸಕ್ಕೆ ಹಾಗೂ ಯಾವುದಕ್ಕಾಗಿ ವಿನಿಯೋಗವಾಗುತ್ತದೆ ಎಂದು ತಿಳಿಯಬೇಕಾಗಿದೆ.

ಇದು ರೊಕ್ಕದ ವಿಚಾರವಾಯ್ತು. ಕನ್ನಡ ನಾಡಿನ ಫಲವತ್ತಾದ ಭೂಮಿ ಅದರೊಳಗಿನ ಖನಿಜ ಸಂಪತ್ತು, ಅರಣ್ಯ ಸಂಪತ್ತು, ಮಾನವ ಸಂಪನ್ಮೂಲ ಇವೆಲ್ಲವೂ ಸಹ ಇಂದು ಅಧಿಕಾರದಲ್ಲಿರುವವರ ಗುಳುಂಕಾರಕ್ಕೆ ಗುರಿಯಾಗುತ್ತಿದೆ ಎಂಬ ಚಿತ್ರಣ ಎಲ್ಲೆಲ್ಲೂ ಕಂಡು ಬರುತ್ತದೆ. ಹೆಚ್ಚು ಕಡಿಮೆ ೧೦ ಲಕ್ಷ ಕೋಟಿ ರೂ.ಗಳ ಬೆಲೆ ಬಾಳುವ ಸರಕಾರಿ ಜಮೀನು ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಸಹ ಕಳೆದ ಅನೇಕ ವರ್ಷಗಳಲ್ಲಿ ಖಾಸಗಿಯವರ ಕಬಳಿಕೆಗೆ ಒಳಗಾಗಿದೆ ಎಂದು ಪತ್ರಿಕೆಗಳು ವರದಿ ಮಾಡಿವೆ. ರಾಜ್ಯದಾದ್ಯಂತ ಕಡಿಮೆ ಎಂದರೆ ೬ ಲಕ್ಷ ಎಕರೆ ಭೂಮಿಯನ್ನು ಹೀಗೆ ಕಬಳಿಸಲಾಗಿದೆ ಎಂದು ಹೇಳಲಾಗಿದೆ. ಸರಕಾರಕ್ಕೆ ತಿಳಿಯದೆ ಇದು ನಡೆಯಿತೇ ? ಅಥವಾ ತಿಳಿದೂ ಸದ್ದಿಲ್ಲದೆ ನಡೆಯಿತೇ ಎನುವಂತಹ ನಿಜಾಂಶ ತಿಳಿಯಬೇಕಿದೆ. ಉನ್ನತ ಮಟ್ಟದ ಅಧಿಕಾರಿಗಳ ಸಮಿತಿಯೊಂದನ್ನು ತನಿಖೆಗೆ ನೇಮಿಸಿ ಕೈ ತೊಳೆದರೆ ರಾಜ್ಯಕ್ಕಾದ ನಷ್ಟವನ್ನು ಭರ್ತಿಮಾಡಿದಂತಾಗುವುದಿಲ್ಲ.

ಅಭಿವೃದ್ಧಿ ಕಾರ್ಯಗಳಿಗೆ ದೇಶವನ್ನು ಅಡವಿಟ್ಟು ಸಾಲ ತಂದು ಒದಗಿಸಿದರೆ ಆ ಹಣದ ಸದುಪಯೋಗವಾದರೂ ಆಗದೆ ರಸ್ತೆ ಅಪಘಾತಗಳು, ರೋಗ ರುಜಿನಗಳು, ಬೀದಿನಾಯಿಗಳ ಕಾಟ, ಮುಚ್ಚದ ಕೊಳವೆ ಬಾವಿಗಳೊಳಗೆ ಬಿದ್ದು ಮರಿಮಕ್ಕಳ ಸಾವು ಇತ್ಯಾದಿ ದಿನನಿತ್ಯ ನಡೆಯುತ್ತಿರುವಾಗ ನಮ್ಮ ಮಂತ್ರಿ ಮಹಾಶಯರು ಒಣ ಭರವಸೆಗಳನ್ನು ನೀಡುವ ನಿತ್ಯೋತ್ಸವಗಳಲ್ಲಿ ನಿರತರಾಗಿರುತ್ತಾರೆ. ಇದು ಎಲ್ಲರಿಗೂ ತಿಳಿದಿರುವ ವಿಚಾರ. ಎಲ್ಲ ಕಡೆ ಇಂತಹವುಗಳ ವಿರುದ್ಧ ಪ್ರತಿಭಟನೆಗಳು ನಡೆಯುತ್ತಿರುವ ವಿಚಾರಗಳು, ಸುದ್ದಿಗಳು ಮಾಧ್ಯಮಗಳಲ್ಲಿ ಪ್ರಕಟವಾಗುತ್ತಿರುವಾಗಲೇ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸೇರಿದ್ದ ಜಮೀನಿನಲ್ಲಿ ೮೦ ಎಕರೆ ಜಮೀನನ್ನು ಯಾವುದೋ ಮಂದಿರವೋ, ಮಠವೋ, ಸ್ಮಾರಕವೋ ಕಟ್ಟುವ ಯೋಜನೆ ಇಟ್ಟುಕೊಂಡಿರುವ ಒಂದು ಖಾಸಗಿ ಪ್ರತಿಷ್ಠಾನಕ್ಕೆ ಸದ್ದಿಲ್ಲದೆ ಕೊಟ್ಟಿದ್ದ ಸುದ್ದಿ ಪ್ರಕಟವಾಗಿತ್ತು. ಸಾಹಿತ್ಯ ಸಮ್ಮೇಳನವು ಇದರ ಬಗ್ಗೆಯೂ ಸಾರ್ವಜನಿಕ ಗಮನ ಸೆಳೆದಿದೆ.

ನಮ್ಮ ದೇಶಕ್ಕೊಂದು ಸಂವಿಧಾನವಿದೆ. ಆಡಳಿತೆಗೆ ಸಂವಿಧಾನದಲ್ಲಿ ಮಾರ್ಗದರ್ಶಕ ಸೂತ್ರಗಳಿವೆ. ಗಣತಂತ್ರ ವ್ಯವಸ್ಥೆ ಸ್ಥಾಪಿತವಾದ ಬಳಿಕ ಎಷ್ಟೇ ಕುಂದುಕೊರತೆಗಳಿದ್ದರೂ ಒಟ್ಟಿನಲ್ಲಿ ಯಶಸ್ವಿಯಾಗಿ ನಡೆಯುತ್ತಿರುವ ಆಡಳಿತ ವ್ಯವಸ್ಥೆ ಇದೆ. ಅವುಗಳ ಓರೆಕೋರೆಗಳನ್ನು ಸರಿಪಡಿಸಿಕೊಂಡು ವರ್ಷದಿಂದ ವರ್ಷಕ್ಕೆ ಉತ್ತಮಗೊಳಿಸುತ್ತಾ ಮುಂದೆ ಸಾಗುವುದು ಇಂದಿನ ಅಗತ್ಯವಾಗಿದೆ. ಆದರೆ ಎಲ್ಲಿ ಒಡಕು ಹುಟ್ಟಿಸಲು, ಎಲ್ಲಿ ಒಳ ಜಗಳ ಸೃಷ್ಟಿಸಿ ಅರಾಜಕತೆ ಉಂಟುಮಾಡಲು, ಎಲ್ಲಿ ಯಾರ ಆಹಾರದ ಸ್ವಾತಂತ್ರ್ಯವನ್ನೇ ಒಂದು ಧರ್ಮದ ಅಪ್ಪಣೆಗನುಗುಣವಾಗಿ ನಿರ್ಬಂಧಿಸಲು ಸಾಧ್ಯವಾಗುತ್ತದೆ, ಅಂತಹವುಗಳನ್ನೇ ತಮ್ಮ ಗೊತ್ತುಗುರಿಗಳನ್ನಾಗಿ ಇಟ್ಟುಕೊಂಡಿರುವವರ ಆಡಳಿತವು ಇಂದು ನಮ್ಮ ದೇಶದಲ್ಲಿ ಕೆಲವೆಡೆ ಅಟ್ಟಹಾಸಗೈಯುತ್ತಿದೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಪರಿಷತ್ತಿನ ವೇದಿಕೆಯಲ್ಲಿ ಪ್ರಕಟವಾಗಿರುವ ನಮ್ಮ ಸಾಂಸ್ಕೃತಿಕ ಪರಂಪರೆಯ ಉದಾತ್ತ ಧ್ಯೇಯಗಳನ್ನು ಆಧಾರವಾಗಿ ಇಟ್ಟುಕೊಂಡು ಸಾಹಿತಿಗಳು, ಕವಿಗಳು, ಸಾಂಸ್ಕೃತಿಕ ರಂಗದ ಪ್ರಮುಖರು ಜಾತಿ, ಮತ, ಪ್ರದೇಶ ಹಾಗೂ ಇನ್ನಿತರ ಸಂಕುಚಿತ ವಿಚಾರಗಳನ್ನೆಲ್ಲಾ ಬದಿಗಿಟ್ಟು ಒಕ್ಕೊರಲಿನಿಂದ ಕರ್ನಾಟಕದ ಮತ್ತು ದೇಶದ ಏಕತೆ ಮತ್ತು ಅಭಿವೃದ್ಧಿಯನ್ನು ಸಾಧಿಸುವತ್ತ ಗಮನ ಹರಿಸಬೇಕಿದೆ. ರಾಷ್ಟ್ರಕವಿ ಕುವೆಂಪುರವರ ಭಾರತ ಮಾತೆಯ ತನುಜಾತೆ, ಕರ್ನಾಟಕಮಾತೆ ಎಂಬ ಪರಿಕಲ್ಪನೆಯನ್ನು ಪ್ರತಿಯೊಂದು ಹೆಜ್ಜೆಯಲ್ಲೂ ನೆನಪಿಸಿಕೊಂಡು ಅವರ ಹಾಗೂ ಅವರ ಜೊತೆಯವರಾದ ಕನ್ನಡ ನಾಡಿನ ರಾಷ್ಟ್ರಕವಿಗಳ ಧ್ವನಿಯೊಂದಿಗೆ ಧ್ವನಿಗೂಡಿಸಿ ವಿಶ್ವಮಾನವ ಧರ್ಮವನ್ನು ದೃಢಪಡಿಸುವ ಪಣವನ್ನು ಈ ಸಂದರ್ಭದಲ್ಲಿ ನಾವೆಲ್ಲರೂ ಕೈಗೊಳ್ಳಬೇಕಿದೆ. ಕರ್ನಾಟಕದಲ್ಲೊಂದು ಸವಿಸ್ತಾರವಾದ ಧರ್ಮ, ಜಾತಿ, ಮತ, ಲಿಂಗ, ಪ್ರಾದೇಶಿಕ ಹಿತದ ಪ್ರಾಮುಖ್ಯತೆ ಮೊದಲಾದವುಗಳಿಗೆ ಪ್ರತಿಯಾಗಿ ನಾಡು ನುಡಿ ಜನಗಳ ಸರ್ವತೋಮುಖ ಪ್ರಗತಿ ಮತ್ತು ಕ್ಷೇಮ ಸಾಧಿಸುವತ್ತ ನಮ್ಮ ಪಾಲಿನ ಕರ್ತವ್ಯವನ್ನು ನೆರವೇರಿಸಲು ನಾವು ಸಿದ್ಧರಾಗೋಣ.

ಬಿ. ವಿ. ಕಕ್ಕಿಲ್ಲಾಯ
ನಂ.೩-೧೭/೪, 'ಗಂಗಾ', ಸೈಮನ್ ರಸ್ತೆ, ಕಂಕನಾಡಿ,
ಮಂಗಳೂರು-೫೭೫೦೦೨

## ಸಾದರ ಸ್ವೀಕಾರ

**ಬಿಳಿಗೆರೆಯ ಹಾಡುಗಳು** — ಕೃಷ್ಣಮೂರ್ತಿ ಬಿಳಿಗೆರೆ
**ಪುಟ :** ೯೬ **ಬೆಲೆ :** ರೂ. ೩೦
**ನಮ್ಮ ಪ್ರಕಾಶನ**, ಬಿಳಿಗೆರೆ, ತಿಪಟೂರು - ೫೭೨ ೧೧೪

**ಚುಟುಕ ಪದ್ಯ** — ಶಿ. ಕುಮಾರಸ್ವಾಮಿ
**ಪುಟ :** ೪೮ **ಬೆಲೆ :** ರೂ. ೧೦
**ಕನ್ನಡ ವೇದಿಕೆ : ಸುವರ್ಣ ಕರ್ನಾಟಕ ಸಂಘ**, ಸರ್ಕಾರಿ ಸಂಯುಕ್ತ ಪದವಿಪೂರ್ವ ಕಾಲೇಜು, ಮೇಗರವಳ್ಳಿ, ಆಗುಂಬೆ ಹೋಬಳಿ, ತೀರ್ಥಹಳ್ಳಿ ತಾಲ್ಲೂಕು.

**ನಿನ್ನ ರಾಗವ ಹುಡುಕು** (ಕವನ ಸಂಕಲನ) — ಡಾ|| ಸಂತೋಷ ಚೊಕ್ಕಾಡಿ
**ಪುಟ :** ೬೪ **ಬೆಲೆ :** ರೂ. ೪೦
**ನಿರಂತರ**, ೩೯/೨ ಮತ್ತು ೩, ಮೊದಲನೇ ಮಹಡಿ, ರೆಮ್ಕೊ ಲೇಔಟ್, ವಿಜಯನಗರ, ಬೆಂಗಳೂರು - ೪೦

**ಕನ್ನಡದಲ್ಲಿ ಇಂಗ್ಲಿಷ್ ಸಂಕ್ಷಿಪ್ತ ವ್ಯಾಕರಣ** — ಡಾ|| ಆರ್. ವಿ. ಭಂಡಾರಿ
**ಪುಟ :** ೭೪ **ಬೆಲೆ :** ರೂ. ೨೫

**ಹದಿಹರೆಯದ ಕನಸುಗಳೊಂದಿಗೆ** — ಸುಧಾ ಹೆಗಡೆ
**ಪುಟ :** ೩೬ **ಬೆಲೆ :** ರೂ. ೨೫

**ಭಾವನಾ ಸಮನ್ವಯ** (ಹೊಸಗನ್ನಡ ಸಾಹಿತ್ಯವನ್ನು ಅನುಲಕ್ಷಿಸಿ) — ಪ್ರೊ|| ಬಿ.ಎಚ್. ಶ್ರೀಧರ
**ಪುಟ :** ೧೨೦ **ಬೆಲೆ :** ರೂ. ೬೫

**ಋತು ಗೀತೆಗಳು** (ಮಕ್ಕಳಿಗಾಗಿ ಪದ್ಯಗಳು) — ಆರ್. ವಿ. ಭಂಡಾರಿ
**ಪುಟ :** ೫೧ **ಬೆಲೆ :** ರೂ. ೨೫

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಬಂಡಾಯ ಪ್ರಕಾಶನ**, ಅರೆಅಂಗಡಿ, ಹೊನ್ನಾವರ - ೫೮೧ ೪೩೦, ಉತ್ತರ ಕನ್ನಡ.

**ಸಂಕ್ಷಿಪ್ತ ಚುಟುಕು ಸಾಹಿತ್ಯ ಚರಿತ್ರೆ** — ಡಿ. ವಿ. ಬಡಿಗೇರ
**ಪುಟ :** ೭೬ **ಬೆಲೆ :** ರೂ. ೫೦
**ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತು**, ಗದಗ, ವಿರೂಪಾಕ್ಷ ನಿಲಯ, ತೆಗ್ಗಿನಪೇಟೆ, ಗದಗ - ಬೆಟಗೇರಿ - ೫೮೨ ೧೦೨

**ಸೀಳುದಾರಿ** (ಕವಿತೆಗಳು) — ಸುನಂದಾ ಪ್ರಕಾಶ ಕಡಮೆ
**ಪುಟ :** ೬೨ **ಬೆಲೆ :** ರೂ. ೬೦
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲ - ೫೮೧ ೩೧೪

**ಸಾವಯವದ ಹಾದಿ** — ಈರಯ್ಯ ಕಿಲ್ಲೇದಾರ
**ಪುಟ :** ೨೮ **ಬೆಲೆ :** ರೂ. ೨೦
**ಕೃಷಿ ಮಾಧ್ಯಮ ಕೇಂದ್ರ**, ನಂ. ೧೧೯, ೧ನೇ ಮುಖ್ಯರಸ್ತೆ ೪ನೇ ಅಡ್ಡರಸ್ತೆ, ನಾರಾಯಣಪುರ ಧಾರವಾಡ - ೫೮೦ ೦೦೮

**ಹಳ್ಳಿ ಹೈದ** (ಕವನ ಸಂಕಲನ) — ದೊಡ್ಡರಂಗೇಗೌಡ
**ಪುಟ :** ೨೦೦ **ಬೆಲೆ :** ರೂ. ೧೧೦
**ಕನ್ನಡ ಕಣ್ಮಣಿ**, ನಂ. ಎಫ್ - ೧೨೪, ಕೃಷ್ಣ ಬಿಲ್ಡಿಂಗ್ ಅನಿಕೇತನ ರಸ್ತೆ, (ಅವೆನ್ಯೂ ರಸ್ತೆ), ಬೆಂಗಳೂರು - ೨

**ಬದುಕು ಅರಳುವ ಸಮಯ** — ಎ. ಬಿ. ಪಾಟೀಲ
**ಪುಟ :** ೯೬ **ಬೆಲೆ :** ರೂ. ೬೦
**ಆವಿ ಪುಸ್ತಕ ಮನೆ**, ನಂ. ೧೩/೭, ಮೊದಲನೇ ಮುಖ್ಯರಸ್ತೆ, ಒಂಬತ್ತನೇ ತಿರುವು, ಮಲ್ಲೇಶ್ವರ, ಬೆಂಗಳೂರು - ೩

# ಯಕ್ಷಲೋಕದ ಅನರ್ಘ್ಯ ರತ್ನ ಕೆರೆಮನೆ ಮಹಾಬಲ ಹೆಗಡೆ

ವೇಷಭೂಷಣ, ಕುಣಿತ, ಅಭಿನಯ ಮತ್ತು ಮಾತುಗಾರಿಕೆ ಈ ಅಂಶಗಳ ಹದವರಿತ ಮಿಶ್ರಣವೇ ಮಹಾಬಲ ಹೆಗಡೆಯವರ ಪಾತ್ರ ಪರಿಚಯದ ಜೀವಾಳ. ಯಾವ ಅಂಶವೂ ಕಡಿಮೆ ಅಥವಾ ಜಾಸ್ತಿ ಎಂಬುದಿಲ್ಲ, ಅದು ಸ್ವಾದಿಷ್ಟ ನಳಪಾಕ. ಪ್ರೇಕ್ಷಕರು ಅವರ ಪಾತ್ರ ನಿರ್ವಹಣೆಯಲ್ಲಿ ತಲ್ಲೀನರಾಗಿ ಪಾತ್ರದ ಸೊಗಸು, ಸೊಗಡುಗಳು ಮೆಲ್ಲಮೆಲ್ಲನೆ ಮೈಮನವನ್ನಾವರಿಸಿ ಬಹುಕಾಲ ನಿಲ್ಲುವಂತಹ ಪ್ರದರ್ಶನ ನೀಡುತ್ತಿದ್ದವರು ಈ ನಟಶ್ರೇಷ್ಠರು. ಪ್ರೇಕ್ಷಕರು ಅನೇಕಸಲ ಮೂಕವಿಸ್ಮಿತರಾಗಿ ಕೈಚಪ್ಪಾಳೆ ತಟ್ಟುವುದನ್ನೂ ಮರೆತುಬಿಡುತ್ತಿದ್ದರು. ಸಂದರ್ಭೋಚಿತವೂ, ಅರ್ಥಗರ್ಭಿತವೂ ಆಗಿರುತ್ತಿದ್ದ ಅವರ ಮಾತುಗಾರಿಕೆ ಭಾಷಾಪಂಡಿತರೂ ತಲೆದೂಗುವಂತೆ ಮಾಡುತ್ತಿತ್ತು.



ಎ. ಜೆ. ಡಿ'ಸೋಜಾ

ಹಾರಾಡಿ ರಾಮಗಾಣಿಗರು ಬಡಗುತಿಟ್ಟಿನ ಯಕ್ಷಗಾನ ದಿಗಂತದಿಂದ ಆಗ ತಾನೇ ಅಸ್ತಂಗತರಾಗಿದ್ದಾರೆ. ಅವರ ಒಡನಾಡಿಗಳಾದ ಕೃಷ್ಣಗಾಣಿಗರು ಮತ್ತು ನಾರಾಯಣ ಗಾಣಿಗರು ಕಾಲ್ಗೆಜ್ಜೆಗಳನ್ನು ಕಳಚಿಟ್ಟು ನಿವೃತ್ತರಾಗಿದ್ದಾರೆ. ವೀರಭದ್ರ ನಾಯಕ್, ಶಿರಿಯಾರ ಮಂಜು, ಉಡುಪಿ ಬಸವ – ಇವರು ತಮ್ಮ ತಾರುಣ್ಯವನ್ನು ಕಳೆದು ರಂಗಮಂಚದ ಹೊರಗೊಳಗುಗಳ ಕಷ್ಟನಷ್ಟಗಳಿಂದ ಬಸವಳಿದು ನಿವೃತ್ತಿಯ ಅಂಚಿಗೆ ಬಂದಿದ್ದಾರೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಬಡಗುತಿಟ್ಟಿನಲ್ಲಿ ಪ್ರಾರಂಭವಾದುದು ಸಾಲಿಗ್ರಾಮ ಮೇಳ. ೧೯೫೦ರ ಅಂತ್ಯ ಭಾಗದಲ್ಲಿ ವೀರಭದ್ರ ನಾಯಕರು ವ್ಯಾಪಾರೀ ದೃಷ್ಟಿಯಿಂದ ಅಲ್ಪ ಬಂಡವಾಳ ಹಾಕಿ ಪ್ರಾರಂಭಿಸಿದ ಡೇರೆಮೇಳವು ಮುಗ್ಗರಿಸಿ ನಾಯಕರು ಕೈಸುಟ್ಟುಕೊಂಡ ಪ್ರಮೇಯವು ಕಣ್ಣಮುಂದಿರುವಾಗ ಬಡಗುತಿಟ್ಟಿನಲ್ಲಿ ಪ್ರಾರಂಭಗೊಂಡ ಈ ಸಾಲಿಗ್ರಾಮ ಮೇಳವು ಎಷ್ಟು ದಿನ ಮುಂದಕ್ಕೆ ಹೋಗಬಹುದೆಂಬ ಕಾತುರ ಕಲಾಚಿಂತಕರದ್ದು. ಆರ್ಥಿಕ ಹೊರೆ ಒಂದೆಡೆಯಾದರೆ ರಂಗಮಂಚದಲ್ಲಿ ಕಾಯಕವನ್ನು ನಡೆಸಿ ವಿಜೃಂಭಿಸುವ ಬಡಗುತಿಟ್ಟಿನ ಸಮರ್ಥ ಪ್ರತಿನಿಧಿಗಳು ಯಾರು, ಎಂಬ ಪ್ರಶ್ನೆ ಕಾಡಿದುದು ಸಹಜವೇ.

ಮಲ್ಪೆ ಶಂಕರನಾರಾಯಣ ಸಾಮಗರೊಡನೆ ಕಲಾ ವ್ಯವಸಾಯವನ್ನು ನಡೆಸಲು ಮುಂಬಂದವರು ಯಕ್ಷಗಾನ ರಂಗದ ರಾಜರಾಣಿಯರೆಂದೆನೆಸಿಕೊಂಡ ಕೆರೆಮನೆ ಮಹಾಬಲ ಹೆಗಡೆಯವರು ಮತ್ತು ಗಜಾನನ ಹೆಗಡೆಯವರು. ಒಂದೆರಡು ವರ್ಷಗಳ ನಂತರ ವೀರಭದ್ರ ನಾಯಕ್, ಶಿರಿಯಾರ ಮಂಜು ಮತ್ತು ಶಂಭು ಹೆಗಡೆಯವರ ಸೇರ್ಪಡೆಯೊಂದಿಗೆ ಸಾಲಿಗ್ರಾಮ ಮೇಳವು ಗಜಮೇಳವೆಂದೆನಿಸಿಕೊಂಡಿತು. ಯಾವುದೋ ಕಾರ್ಯನಿಮಿತ್ತವಾಗಿ ಮಂಗಳೂರಿಗೆ ಹೋಗಿ ಹೋಟೆಲೊಂದರಲ್ಲಿ ಮಧ್ಯಾಹ್ನದ ಊಟ ಸ್ವೀಕರಿಸುತ್ತಿರುವಾಗ ಹತ್ತಿರದಲ್ಲಿದ್ದ ಇಬ್ಬರು ಮಹನೀಯರು ತಮ್ಮತಮ್ಮೊಳಗೆ ಸಾಲಿಗ್ರಾಮ ಮೇಳದ ಕಲಾಪ್ರದರ್ಶನದ ಬಗ್ಗೆ ಮಾತನಾಡುತ್ತಿದ್ದರು. ''ದುಷ್ಟಬುದ್ಧಿ ರಂಗಕ್ಕೆ ಬಂದಾಗ ದುಷ್ಟಬುದ್ಧಿಯ ಅಪ್ಪ ಬಂದಹಾಗೆ ಆಗುತ್ತದೆ'' ಎಂದು ಅವರಲ್ಲೊಬ್ಬರ ಉದ್ಗಾರ. ಸಣ್ಣವನಿರುವಾಗಲೇ ಯಕ್ಷಗಾನದ ಬಗ್ಗೆ ಒಲವನ್ನು ಹೊಂದಿದ್ದ ನನಗೆ ಪ್ರದರ್ಶನ ನೋಡಬೇಕೆಂದು ಆಸೆ. ಮುಂದೆ ಭಾರತೀಯ ಜೀವ ವಿಮಾ ನಿಗಮದಲ್ಲಿ ಉದ್ಯೋಗ ಸಿಕ್ಕಿದ ಮೇಲೆ ಸಾಧ್ಯವಾದಷ್ಟು ಪ್ರದರ್ಶನಗಳನ್ನು ಕಂಡೆ. ಪರಿಣಾಮವಾಗಿ ಈ ಕೆಳಗಿನ ವಿವರಣೆ.

'ಬಹಳ ಸಂತೋಷ' ಎಂದು ವ್ಯಂಗ್ಯ ನಗೆಯನ್ನು ಸೂಸಿ 'ಕ್ರೂರ ನಕ್ರಾಕುಲ ದೊಳಿಡಿರ್ದಿರ್ದ ಪೆರ್ಮಡು ಗಭೀರ ನಿರ್ಮಲ ಜಲದೊಳೆಸೆವಂತೆ' ಇದ್ದ ಮಹಾಬಲ ಹೆಗಡೆಯವರ 'ದುಷ್ಟಬುದ್ಧಿಯ' ಪಾತ್ರವನ್ನು ಕಲಾರಸಿಕರು ಮರೆಯಲು ಹೇಗೆ ಸಾಧ್ಯ ? ಮಗಳು ವಿಧವೆಯಾದರೂ ಸಹ ಚಿಂತಿಲ್ಲ, ತನ್ನ ಪುತ್ರನು ರಾಜನಾಗಬೇಕೆಂದು ಸ್ವಾರ್ಥಸಾಧನೆಯನ್ನು ಬಿಡದ ಕುಟಿಲ ರಾಜಕಾರಣಿಯಾಗಿ ಮೆರೆಯುತ್ತಿದ್ದ ಅವರ 'ದುಷ್ಟಬುದ್ಧಿ' ಪಾತ್ರದ ವೈಖರಿ ಅದ್ವಿತೀಯ, ಅಸಾಧಾರಣ ಮತ್ತು ಅವರ್ಣನೀಯ. ಸುಲಲಿತ ಸುಂದರ ಕುಣಿತದಿಂದ ಮಿಂಚಿನಂತೆ ರಂಗಮಂಚವನ್ನು ಪ್ರವೇಶಿಸಿ, ಅರ್ಜುನನ ಅಬ್ಬರವನ್ನು ಅದುಮಿಹಿಡಿದು ತನ್ನ ಶತ್ರುವಿನ ಕಡೆಯಿಂದ ಬಂದ ಶ್ರೀಕೃಷ್ಣನನ್ನು ಮೆಚ್ಚಿಸುವ ಅವರ ಭಕ್ತ ಸುಧನ್ವ; ಮೊದಲು ವೀರಾಗ್ರಣಿಯಾಗಿದ್ದು, ಸೈರಂಧ್ರಿಯನ್ನು ನೋಡಿದ ಮೇಲೆ ಸಂಪೂರ್ಣ ಹುಚ್ಚೆದ್ದು ತನ್ನ ಬಲಧನಕನಕಗಳನ್ನು ಅವಳ ಪಾದಕಮಲಗಳಿಗೆ ಸುರಿಯಲೂ ಹಿಂಜರಿಯದ ಕಾಮುಕ ಕೀಚಕ; ದುಃಸ್ವಪ್ನವನ್ನು ಕಂಡು ಬೆಚ್ಚಿ ನಡುಗಿ ಪ್ರೇಕ್ಷಕರನ್ನು ದಿಗ್ಭ್ರಮೆಗೊಳಿಸುವ ಅವರ ಬಿಲ್ಲಹಬ್ಬದ ಕಂಸ; ಗಂಧರ್ವನ ನೀರಾಟದ ಲಾಸ್ಯವನ್ನು ಮೆಚ್ಚಿ ಕ್ಷಣಕಾಲ ಅನ್ಯಮನಸ್ಕಳಾದ ರೇಣುಕಾದೇವಿಯನ್ನು ಕಂಡು ಕೋಪೋದ್ರಿಕ್ತನಾಗಿ ರಂಗಸ್ಥಳವನ್ನೇ ನಡುಗಿಸುವ ಅವರ ಜಮದಗ್ನಿ; ಬಿರುಗಾಳಿಯಂತೆ ಕಾಶೀರಾಜನ ಆಸ್ಥಾನವನ್ನು ಪ್ರವೇಶಿಸಿ ಅವನ ಪುತ್ರಿಯರಿಗೆ ತನ್ನ ರಥವನ್ನೇರುವಂತೆ ಆಣತಿಯನ್ನೀಯುವ ಬಿಂಕದ ಗಾಂಗೇಯನು ಒಂದೆಡೆಯಾದರೆ, ತನ್ನ ಕಣ್ಣ ಮುಂದೆಯೇ ಅಂಬೆಯು (ಕೆರೆಮನೆ ಗಜಾನನ ಹೆಗಡೆ) ಅಗ್ನಿಪ್ರವೇಶ ಮಾಡುವಾಗ ತನ್ನ ಅಸಹಾಯಕತೆಯನ್ನು ಪ್ರೇಕ್ಷಕರಿಗೆ ಎತ್ತಿತೋರಿಸುವ ಅವರ ಗಹನಗಂಭೀರ ಭೀಷ್ಮ; ಬ್ರಹ್ಮರ್ಷಿಯಾಗಬೇಕೆಂದು ಘೋರ ತಪಸ್ಸನ್ನಾಚರಿಸುತ್ತಿದ್ದು ಮೇನಕೆಯ ರೂಪಲಾವಣ್ಯಕ್ಕೆ ಮನಸೋತು ಅವಳೊಡನೆ ನರ್ತಿಸುವ ಮುನಿ ವಿಶ್ವಾಮಿತ್ರ; ಉಪ ಪಾಂಡವರನ್ನು ಕಟುಕನಂತೆ ಕೊಲೆಗೈದು ನಾರಾಯಣಾಸ್ತ್ರದ ಮೂಲಕ ಪಾಂಡವರ ಸರ್ವನಾಶ ಮಾಡಹೊರಟ ರುದ್ರಭಯಂಕರ ಗುರುಸೂನುವಿನ ಪಾತ್ರವು ಒಂದು ತೆರನಾದರೆ, ತಾನು ಮಾಡಿದ ಪಾಪಕೃತ್ಯವನ್ನು

ನೆನೆದು ಬೇಗುದಿಗೊಂಡು ತನ್ನ ಆತ್ಮಶೋಧನೆಯಲ್ಲಿ ನಿರತನಾದ ಅವರ ಅಶ್ವತ್ಥಾಮ; ಆತ್ಮಾಕರ್ಷಕ ಪ್ರವೇಶ ಕುಣಿತದಿಂದ ಪ್ರೇಕ್ಷಕರ ಮನಗೆದ್ದ ಕೃಷ್ಣಾರ್ಜುನ ಕಾಳಗದ ಧೀರೋದಾತ್ತ ಅರ್ಜುನ; ವಾಲಿಯಾಗಿ, ರಾಮನನ್ನು ಮೂದಲಿಸುವಾಗ ಪ್ರತಿಪದ್ಯದ ಕೊನೆಗೆ ''ರಾಘವ ನೀ ಬಲು ಜಾಣನಹುದೋ'' ಎಂದು ತಮ್ಮ ಉತ್ತಮ ಕಂಠದಿಂದ ಹೊರಹೊಮ್ಮಿಸುತ್ತಿದ್ದ ಗಾನಲಹರಿ, ಆಂಗ್ಲಸಾಹಿತ್ಯದ ''ಬ್ರೂಟಸ್ ಮಹಾ ಆದರಣೀಯ'' ಎಂಬ ನುಡಿಗಟ್ಟನ್ನು ನೆನಪಿಸುವ ಅವರ ಕಲಾ ಪ್ರೌಢಿಮೆ; ರಾಜ್ಯ, ಕೋಶಗಳನ್ನು ಕಳೆದುಕೊಂಡು ಸ್ಮಶಾನ ಕಾದು ವರಪುತ್ರ ಮಡಿದರೇನಾಯಿತು – ಮಡದಿಯ ಶಿರಚ್ಛೇದ ಮಾಡಿದರೇನಾಯಿತು, ಸತ್ಯವನ್ನು ಬಿಟ್ಟಿಲ್ಲವೆಂದು ಲೋಕ ನುಡಿದರೆ ಸಾಕೆಂದು ತನ್ನ ಕರ್ತವ್ಯದಲ್ಲಿ ಮುಂದುವರಿದು ಪ್ರೇಕ್ಷಕರೆಲ್ಲರೂ ಕಣ್ಣೀರ್ಗರೆಯುವಂತೆಸಗುವ ಅವರ ಸತ್ಯಹರಿಶ್ಚಂದ್ರ; ''ಧರ್ಮದ ಕಡೆ ಪ್ರವೃತ್ತಿಯಿಲ್ಲ, ಅಧರ್ಮದಿಂದ ನಿವೃತ್ತಿಯಿಲ್ಲ, ಇದೋ ಭಕ್ತಿಯೆಂಬ ಪುಷ್ಪವನ್ನು ಹೃದಯವೆಂಬ ಹರಿವಾಣದಲ್ಲಿಟ್ಟು ನಿನಗೆ ಅರ್ಪಿಸುತ್ತಿದ್ದೇನೆ. ಯುದ್ಧಕ್ಕೆ ಅಪ್ಪಣೆ ಕೊಡು'' ಎಂದು ಶ್ರೀಕೃಷ್ಣನಿಗೆ ನಮಿಸುವ ಅವರ ಸಂಧಾನದ ಕೌರವ – ಈ ಪಾತ್ರಗಳು ಕೆರೆಮನೆ ಮಹಾಬಲ ಹೆಗಡೆಯವರಿಗೆ ಗೌರವದ ಸ್ಥಾನವನ್ನು ತಂದಿತ್ತಿವೆ.

ತಾನು ವಹಿಸುವ ಪಾತ್ರಗಳ ಬಗ್ಗೆ ಆಳವಾಗಿ ಅಭ್ಯಾಸ ನಡೆಸಿ ಅದರಂತೆ ಅವುಗಳಿಗೆ ಜೀವ ತುಂಬಲು ಪ್ರಯತ್ನಿಸಿ ಮಹಾಬಲ ಹೆಗಡೆಯವರು ಸಾಕಷ್ಟು ಸಫಲರಾಗಿದ್ದಾರೆಂಬುದಕ್ಕೆ ಅವರು ಸಂಪಾದಿಸಿದ ಅಭಿಮಾನಿ ಸಹಸ್ರರೇ ಸಾಕ್ಷಿ. ದುಷ್ಟಬುದ್ಧಿಯು ಬರೆದ ಪತ್ರವನ್ನು ತಪ್ಪಾಗಿ ಅರ್ಥೈಸಿ ಅವನ ಮಗ ಮದನನು ಚಂದ್ರಹಾಸನಿಗೆ ಅದ್ದೂರಿಯ ಸ್ವಾಗತವನ್ನು ನೀಡುತ್ತಾನೆ. ಪರಿಸ್ಥಿತಿಯ ಅರಿವಾಗಿ ಸಿಡಿಮಿಡಿಗೊಂಡ ದುಷ್ಟಬುದ್ಧಿ ಮದನನನ್ನು ಕರೆಯಿಸಿ ಪತ್ರವನ್ನು ಪುನರಪಿ ಓದಿಸಿ ಅದರಲ್ಲಿರುವ ಶಬ್ದ 'ಸರ್ವಥಾಹಿತಂ' ಎಂಬುದನ್ನು ಸರ್ವಥಾ + ಅಹಿತಂ = ಸರ್ವಥಾಹಿತಂ (ಸವರ್ಣದೀರ್ಘ ಸಂಧಿ) ಎಂದು ಪೆದ್ದ ಮಗನಿಗೆ (ಕೆರೆಮನೆ ಶಂಭು ಹೆಗಡೆ) ತಿಳಿಯಹೇಳಿ ಅವನ ಸಂದುಸಂದುಗಳನ್ನು ಗುದ್ದುವ ರೋಷವನ್ನು ಪ್ರದರ್ಶಿಸುತ್ತಾನೆ. ಕನ್ನಡ ವ್ಯಾಕರಣ ಬಲ್ಲವರು ಮಾತ್ರ ರಂಗದಲ್ಲಿ ಈ ರೀತಿಯಲ್ಲಿ ವ್ಯವಹರಿಸಲು ಸಾಧ್ಯ. ಗದಾಯುದ್ಧ ಮೂಲ ಪ್ರಸಂಗದಲ್ಲಿ ಅಶ್ವತ್ಥಾಮನ ವೃತ್ತಾಂತವಿರಲಿಲ್ಲ. ಈ ದುರಂತ ಕಥೆಗೆ ಉತ್ತಮ ಅಂತ್ಯವನ್ನು ನೀಡುವ ಕುರಿತು ಮಹಾಬಲ ಹೆಗಡೆಯವರು ಚಿಂತನೆ ನಡೆಸಿ ಆಕರ ಗ್ರಂಥಗಳನ್ನು ಅಭ್ಯಸಿಸಿ ಅಶ್ವತ್ಥಾಮನ ಪಾತ್ರವನ್ನು ಈ ಪ್ರಸಂಗದಲ್ಲಿ ತುಂಬುತ್ತಾರೆ. ಕೆರೆಮನೆ ಶಿವರಾಮ ಹೆಗಡೆಯವರಂತಹ ಕೌರವನಿದ್ದರೆ ಈ ಅಶ್ವತ್ಥಾಮನ ಪಾತ್ರವು ಚಿನ್ನದುಂಗುರಕ್ಕೆ ಹರಳನ್ನು ಪೋಣಿಸಿದಂತೆ ಶೋಭಿಸುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ಈ ಕೌರವನ ಪಾತ್ರವು ಪೇಲವವಾದರೆ ಪ್ರಸಂಗದ ನಡೆ ತೀರಾ ಸಪ್ಪೆಯಾಗದಂತೆ ಅಶ್ವತ್ಥಾಮನ ಪಾತ್ರವು ಸಹಕಾರಿಯಾಗಿತ್ತೆಂದು ಸಾಲಿಗ್ರಾಮ ಮೇಳದ ಪ್ರಥಮ ವರ್ಷದ ತಿರುಗಾಟವನ್ನು ಕಂಡ ಕಲಾಭಿಮಾನಿಗಳ ಅನಿಸಿಕೆ.

೩೦-೦೬-೧೯೨೭ರಂದು ಉತ್ತರ ಕನ್ನಡದ ಗುಣವಂತೆಯಲ್ಲಿ ಕೆರೆಮನೆ ಮನೆತನದಲ್ಲಿ ರಾಮಪ್ಪ ಹೆಗಡೆ ದಂಪತಿಗಳ ಸುಪುತ್ರನಾಗಿ ಜನಿಸಿದ ಮಹಾಬಲ ಹೆಗಡೆಯವರು ತನ್ನ ಚಿಕ್ಕಪ್ಪ ಶ್ರೇಷ್ಠ ಕಲಾವಿದ ಕೆರೆಮನೆ ಶಿವರಾಮ ಹೆಗಡೆ ಮತ್ತು ಮೂಡ್ಕಣಿ ನಾರಾಯಣ ಹೆಗಡೆಯವರ ಕಲಾಗರಡಿಯಲ್ಲಿ ಇಡಗುಂಜಿ ಮೇಳದ ಕಲಾವಿದನಾಗಿ ಬೆಳೆದು, ಮುಂದೆ ಡಾ|| ಶಿವರಾಮ ಕಾರಂತರ ಯಕ್ಷಗಾನ 'ಬ್ಯಾಲೆ'ಯಲ್ಲಿ ಭಾಗವಹಿಸಿ ತನ್ನ ಕಲಾಜೀವನವನ್ನು ಬೆಳಗಿಸಿಕೊಂಡರು. ಸೂಕ್ಷ್ಮಗ್ರಾಹಿಯಾದ ಹೆಗಡೆಯವರು ಎಲ್ಲೆಲ್ಲಿ ಉತ್ತಮ ಅಂಶಗಳು ಸಿಗುತ್ತವೆಯೋ ಅವೆಲ್ಲವನ್ನೂ ಆಸ್ವಾದಿಸಿ ದಕ್ಷಿಣೋತ್ತರ ಉಭಯ ಜಿಲ್ಲೆಗಳಲ್ಲಿಯೂ ಸಲ್ಲುವಂತಹ ಪ್ರಗಲ್ಭ ನಟರಾದರು. ''ಹಾರಾಡಿ ಕೃಷ್ಣಗಾಣಿಗರು ರಂಗದಲ್ಲಿ ಅಳವಡಿಸುತ್ತಿದ್ದ 'ಸಲಾಮು ಕುಣಿತ' ಎಷ್ಟು ಚೆನ್ನಾಗಿತ್ತು'' ಎಂದು ಅವರಂದುದನ್ನು ಕೇಳಿ ಬಲ್ಲೆ.

ಭಾಗವತಿಕೆಯಲ್ಲಿಯೂ ಸಾಕಷ್ಟು ಕೈಯಾಡಿಸಿ ಮಹಾಬಲ ಹೆಗಡೆಯವರು ಕಲಾಸಿದ್ಧಿಯನ್ನು ಗಳಿಸಿದ್ದರು. ಉತ್ತರಾದಿ ಸಂಗೀತವನ್ನು ಗುರುಮುಖೇನ ಅಭ್ಯಸಿಸಿ ಭಾಗವತಿಕೆಯ ಮಟ್ಟಕ್ಕೆ ಏರಿಸಿಕೊಂಡವರು. ಅವರಂದಂತೆ ಮೊದಲನೇ ವೇಷಧಾರಿ ಎಂದೆನಿಸಿಕೊಂಡ ಭಾಗವತರೇ ನವರಸಗಳ ಉಗಮಸ್ಥಾನ. ಭಾಗವತರಿಗೆ ಮುಖ್ಯವಾಗಿ ಬೇಕಾದುದು ಪದ್ಯಗಳು ಉದ್ದೀಪಿಸುವ ಭಾವನೆ, ಸಾಹಿತ್ಯಪ್ರಜ್ಞೆ ಮತ್ತು ತಾಳಲಯಗಳ ಖಚಿತತೆ. ಭಾಗವತಿಕೆ ಮತ್ತು ಸಂಗೀತದ ಜ್ಞಾನವು, ವೇಷದಲ್ಲಿರುವಾಗ ಪದದ ಎತ್ತುಗಡೆ ಮತ್ತು ತನ್ನ ರಂಗವ್ಯವಹಾರದ ನಡುವೆ ಕೆಲವು ಪದಪುಂಜಗಳನ್ನು ಪದ್ಯರೂಪವಾಗಿ ನಿರೂಪಿಸಲು ಅವರಿಗೆ ಸಹಾಯಕಾರಿಯಾಗಿದ್ದವು. ಚಂದ್ರಹಾಸ ಚರಿತ್ರೆ ಪ್ರಸಂಗದಲ್ಲಿ ಕುಳಿಂದನ ದೂತನೊಡನೆ ಸಂಭಾಷಿಸುವಾಗ ಕುಳಿಂದನ ರಾಜ್ಯದಲ್ಲಿ ಏಕಾದಶಿ ವ್ರತವನ್ನು ಪಾಲಿಸುತ್ತಾರೆಂದು ಕೇಳಿ ಶ್ರುತಿಬದ್ಧವಾಗಿ ಪದ್ಯರೂಪದಲ್ಲಿ ''ಆಶ್ಚರ್ಯ'' ಎಂದು ದುಷ್ಟಬುದ್ಧಿಯಾಗಿ ಹೆಗಡೆಯವರು ಉದ್ಗರಿಸಿದಾಗ, ಆ ಅಚ್ಚರಿಯನ್ನು ದೂತನೂ (ಕುಂಜಾಲು ರಾಮಕೃಷ್ಣ) ತನ್ನ ಮುಖದಲ್ಲಿ ತೋರ್ಪಡಿಸುವುದು ಒಂದು ರಸವತ್ತಾದ ಘಳಿಗೆ; ಅನನ್ಯ ಅನುಭವ.

ವೇಷಭೂಷಣ, ಕುಣಿತ, ಅಭಿನಯ ಮತ್ತು ಮಾತುಗಾರಿಕೆ ಈ ಅಂಶಗಳ ಹದವರಿತ ಮಿಶ್ರಣವೇ ಮಹಾಬಲ ಹೆಗಡೆಯವರ ಪಾತ್ರ ಪರಿಚಯದ ಜೀವಾಳ. ಯಾವ ಅಂಶವೂ ಕಡಿಮೆ ಅಥವಾ ಜಾಸ್ತಿ ಎಂಬುದಿಲ್ಲ, ಅದು ಸ್ವಾದಿಷ್ಟ ನಳಪಾಕ. ಪ್ರೇಕ್ಷಕರು ಅವರ ಪಾತ್ರ ನಿರ್ವಹಣೆಯಲ್ಲಿ ತಲ್ಲೀನರಾಗಿ ಪಾತ್ರದ ಸೊಗಸು, ಸೊಗಡುಗಳು ಮೆಲ್ಲಮೆಲ್ಲನೆ ಮೈಮನವನ್ನಾವರಿಸಿ ಬಹುಕಾಲ ನಿಲ್ಲುವಂತಹ ಪ್ರದರ್ಶನ ನೀಡುತ್ತಿದ್ದವರು ಈ ನಟಶ್ರೇಷ್ಠರು. ಪ್ರೇಕ್ಷಕರು ಅನೇಕಸಲ ಮೂಕವಿಸ್ಮಿತರಾಗಿ ಕೈಚಪ್ಪಾಳೆ ತಟ್ಟುವುದನ್ನೂ ಮರೆತುಬಿಡುತ್ತಿದ್ದರು. ಸಂದರ್ಭೋಚಿತವೂ, ಅರ್ಥಗರ್ಭಿತವೂ ಆಗಿರುತ್ತಿದ್ದ ಅವರ ಮಾತುಗಾರಿಕೆ ಭಾಷಾಪಂಡಿತರೂ ತಲೆದೂಗುವಂತೆ ಮಾಡುತ್ತಿತ್ತು. ತಾಳಮದ್ದಳೆ ಕೂಟಗಳ ಉತ್ತಮ ಮಾತುಗಾರರಾಗಿದ್ದ ಪೆರ್ಲ ಕೃಷ್ಣಭಟ್ಟರೇ ಈ ವಿಷಯವನ್ನು ಒತ್ತಿಹೇಳಿದ್ದಾರೆ. ಕಥಕ್ ನೃತ್ಯಪಟು ಶ್ರೀಮತಿ ಮಾಯಾ ರಾವ್ ಅಭಿಪ್ರಾಯದಂತೆ ಸದಾ ತಮ್ಮಷ್ಟಕ್ಕೇ ಇದ್ದು ಎಲೆಯಡಿಕೆಯನ್ನು ಜಗಿಯುತ್ತಾ ಇರುವ ಸಾಧಾರಣ ಎತ್ತರದ ಈ ಮನುಷ್ಯನಿಂದ ಏನನ್ನು ನಿರೀಕ್ಷಿಸಬಹುದೆಂದು ಸಂಶಯಪಡುವುದು ಸ್ವಾಭಾವಿಕವೇ. ಆದರೆ ಸುಧನ್ವ, ಅಶ್ವತ್ಥಾಮ ಪಾತ್ರದಲ್ಲಿ ಚೆಂಡಿನಂತೆ ಪುಟಿದೇಳುತ್ತಾ ನನ್ನಷ್ಟು ಎತ್ತರಕ್ಕೆ ಹಾರಬಲ್ಲಿರಾ ಅಥವಾ ಏರಬಲ್ಲಿರಾ ಎಂದು ಪ್ರಶ್ನೆಯನ್ನಿಡುವ ಈ ಧೀಮಂತ ವ್ಯಕ್ತಿಯ ಸವಾಲು ರಂಗ ಮಂಚದಲ್ಲಿ ಸವಾಲಾಗಿಯೇ ಉಳಿಯುತ್ತದೆ; ಉಳಿದಿದೆ.

> ಒಬ್ಬನೇ ಪ್ರತ್ಯೇಕವಾಗಿ ಉಳಿದರೆ ಅವನಿಂದ ಏನೂ ಮಾಡಲಾಗುವುದಿಲ್ಲ... ಆದರೆ ಮಿಕ್ಕವರೊಡನೆ ಸೇರಿ ಕೊಂಡರೆ, ನೀನು ಬದಲಾವಣೆಯನ್ನು ತರಬಲ್ಲೆ.
>
> ಭವಿಷ್ಯದಲ್ಲಿ, ಸಾಧ್ಯತೆಯಲ್ಲಿ ಭರವಸೆ ಬೇಕು. ಆದರೆ ಕ್ರಿಯಾಶೀಲನಾಗದೆ ಕೇವಲ ಭರವಸೆ ಹೊಂದಿದ್ದರೆ ಅದು ಈಡೇರುವುದಿಲ್ಲ. – ನೋಮ್ ಚೋಮ್‌ಸ್ಕಿ

ರಾಷ್ಟ್ರ ಪ್ರಶಸ್ತಿಯು ಅವರಿಗೆ ಅರ್ಹವಾಗಿ ಸಂದಿದೆ. ಎಳವೆಯಲ್ಲಿ ವೀರ ವೃಷಸೇನ ಪಾತ್ರದ ಮುಖಾಂತರ ರಂಗ ಪ್ರವೇಶಿಸಿದ ಮಹಾಬಲ ಹೆಗಡೆಯವರು ಚಿಕ್ಕಪ್ಪ ಕೆರೆಮನೆ ಶಿವರಾಮ ಹೆಗಡೆ, ಮೂಡ್ಕಣಿ ನಾರಾಯಣ ಹೆಗಡೆಯವರ ಮಾರ್ಗ ದರ್ಶನದಲ್ಲಿ ಬೆಳೆದು ನಾಡಿನ ಉದ್ದಗಲಗಳಲ್ಲಿ ಸಂಚರಿಸಿ ಯಕ್ಷಗಾನ ರಂಗಮಂಚದಲ್ಲಿ ಕಲೆಯ ಪ್ರತಿಯೊಂದು ಅಂಶವನ್ನು ಅರಿತು, ಅರಗಿಸಿ ಮತ್ತು ಬೆಳಗಿಸಿ ಪೌರಾಣಿಕ ವ್ಯಕ್ತಿಚಿತ್ರಣದ ಪ್ರೌಢ ಪ್ರಬಂಧಗಳನ್ನು ಮಂಡಿಸುತ್ತಾ ಅದ್ವಿತೀಯ ನಟರಾಗಿ ಮೆರೆದಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದವರು ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದ್ದಾರೆ. ತನ್ಮೂಲಕ ಗೌರವ ಡಾಕ್ಟರೇಟ್ ಪದವಿಗೆ ಒಂದು ವಿಶಿಷ್ಟ ಅರ್ಥ ಅಥವಾ ಮೌಲ್ಯ ಬರುವಂತೆ ಮಾಡಿದ್ದಾರೆ. ಯಕ್ಷಗಾನ ಕಲಾವಿದರೊಬ್ಬರು ಡಾಕ್ಟರೇಟ್ ಪದವಿ ಪಡೆದುದು ಕಲಾಭಿಮಾನಿ ಗಳೆಲ್ಲರಿಗೂ ಹೆಮ್ಮೆಯ ಸಂಗತಿ. ಹಿಗ್ಗುತ್ತಾ ಹಾಡಿ ಕುಣಿದು, ಕುಣಿಯುತ್ತಾ ಹಾಡಿ ಹಿಗ್ಗಿದ ಈ ಮಹಾನ್ ನಟ ಅಪರೂಪದ ಅಮೂಲ್ಯ ರತ್ನ.

೨೯-೧೧-೨೦೦೯ರಂದು ತಮ್ಮ ೮೨ನೇ ವಯಸ್ಸಿನಲ್ಲಿ ಅಸ್ತಂಗತರಾದ ತ್ಯಜಿಸಿದ ಮಹಾಬಲ ಹೆಗಡೆಯವರು ರಂಗಮಂಚದಲ್ಲಿ ತೆರವುಗೊಳಿಸಿದ ಸ್ಥಾನವನ್ನು ತುಂಬಲು ಸದ್ಯೋಭವಿಷ್ಯದಲ್ಲಿ ಕಷ್ಟಸಾಧ್ಯ. ಅಡಿಕೆಯೊಂದನ್ನು ತೆಗೆದು ಅಡಗತ್ತರಿಯಿಂದ ಅದರ ಮೇಲಿನ ಸಿಬುರುಗಳನ್ನು ನಯವಾಗಿ ಕರೆದು ತೆಗೆದು ಚೂರು ಮಾಡಿ ಎರಡು ಚೂರು ಗಳನ್ನೂ ತೋರುಬೆರಳು, ಹೆಬ್ಬೆರಳುಗಳ ನಡುವೆ ಹಿಡಿದುಕೊಂಡು, ವೀಳ್ಯದೆಲೆಗಳ ತೊಟ್ಟು ನಾರು ತೆಗೆದು ಸುಣ್ಣ ಹಚ್ಚಿ ಅಚ್ಚುಕಟ್ಟಾಗಿ ಮಡಚುವ ಆ ಕಲಾವಂತಿಕೆಯು ಅವರ ಪಾತ್ರ ಚಿತ್ರಣದಲ್ಲಿಯೂ ಕಂಡುಬರುತ್ತಿತ್ತು. ಕಲಾತ್ಮಕತೆಯ ಪರಾಕಾಷ್ಠೆಗಳಾದ ಅವರ ದುಷ್ಟಬುದ್ಧಿ, ಸುಧನ್ವ, ಅಶ್ವತ್ಥಾಮ, ಭೀಷ್ಮ ಮತ್ತು ಕೃಷ್ಣಾರ್ಜುನದ ಅರ್ಜುನ – ಈ ಪಾತ್ರ ಗಳನ್ನು ಇನ್ನೆಲ್ಲಿ ಕಾಣಲು ಸಾಧ್ಯ ? 'ಗಗನಂ ಗಗನಾಕಾರಂ' ಅಥವಾ 'ಯಕ್ಷಗಾನಕ್ಕೋರ್ವನೇ ಮಹಾಬಲ' ಎಂಬ ಮಾತುಗಳು ಕೇವಲ ಶಬ್ದಾಡಂಬರದ ಕಸರತ್ತುಗಳಲ್ಲ; ಮಹಾಬಲ ಹೆಗಡೆಯವರ ಬಗ್ಗೆ ಅವು ವಾಸ್ತವಿಕತೆಯನ್ನು ಸೂಚಿಸುತ್ತವೆ. ಹಾರಾಡಿ ರಾಮಗಾಣಿಗ ಮತ್ತು ಕೆರೆಮನೆ ಶಿವರಾಮ ಹೆಗಡೆಯವರ ಸಾಲಿನಲ್ಲಿ ನಿಲ್ಲತಕ್ಕ ಅನರ್ಘ್ಯ ರತ್ನ ಕೆರೆಮನೆ ಮಹಾಬಲ ಹೆಗಡೆಯವರು ಎಂಬುದು ಕಲಾಭಿಮಾನಿಗಳೆಲ್ಲರೂ ಒಪ್ಪತಕ್ಕ ಮಾತು.

ಎ. ಜೆ. ಡಿ'ಸೋಜಾ
'ಸುಕೃತ್', ಲಯನ್ಸ್ ಭವನದ ಹಿಂದೆ, ಬ್ರಹ್ಮಗಿರಿ, ಅಂಬಲಪಾಡಿ ಅಂಚೆ, ಉಡುಪಿ - ೫೭೬ ೧೦೩






# ನೀರು

ನೀರು ಹಲವಾರು ಹೆಸರುಗಳ ಪದಾರ್ಥಗಳನ್ನು ಹೊಂದಿದೆ. ನೀರು ಅಂದರೆ ಸಾಕು: ಆದರಾತಿಥ್ಯದ ಗೌರವ ಹೆಚ್ಚುತ್ತದೆ. ನೀರು ಎಂದರೆ ಸಾಕು: ಜಗತ್ತಿನ ಯಾವುದೇ ಭಾಗದ ಸಾಮಾಜಿಕ ಚಿಂತಕರಲ್ಲಿ ವಾದ, ವಿವಾದ, ಅಭಾವ, ಸಾವು ಹೀಗೆ ಕೊರತೆ - ಪ್ರಯೋಜನಗಳ ಹಲವಾರು ಭಾವನೆಗಳು ಪ್ರಾದುರ್ಭವಿಸುತ್ತವೆ. ನೀರು ಜಗತ್ ಸೃಷ್ಟಿಯ ಹುಡಿಯನ್ನು ರಾಡಿಯಾಗಿಸುವುದು – ನೀರು ರಾಡಿಯನ್ನು ಹುಡಿಯಾಗಿಸುವುದು, ಹೀಗೆ ನೀರಿನ ಸಕಾರಾತ್ಮಕತೆ ಮತ್ತು ನೀರಿನ ನಕಾರಾತ್ಮಕತೆ ಸಕಲ ಜೀವರಾಶಿಯ ಮೇಲೆ ಪರಿಣಾಮ ಬೀರುವುದು. 'ಪವಿತ್ರ' ಎನಿಸಿಕೊಂಡಿರುವ ಶಬ್ದ ಮಾತ್ರ 'ನಿರ್ಮಲ'ವಾದ 'ಶುದ್ಧ'ವಾದ ಎಂಬ ಅರ್ಥ ಕೊಡುತ್ತಿದ್ದರೂ ಪವಿತ್ರವಾದ ನೀರು ಪರಿಶುದ್ಧವಾಗಿರಲಾರದು. ಪಾವಿತ್ರ್ಯ ಎನ್ನುವುದು ಭಾವನಾತ್ಮಕ ಸದಾಚಾರ. ಪರಿಶುದ್ಧತೆ ಎನ್ನುವುದು ವೈಜ್ಞಾನಿಕ ಅರಿವಳಿಕೆ. ಅಶುದ್ಧವಾದ ನೀರು ಪವಿತ್ರವೆಂದು ಭಾವಿಸಿ ಸೇವಿಸುವುದರಿಂದ ಆರೋಗ್ಯ ಕೆಡುವುದು. ಪರಿಶುದ್ಧ ನೀರು ಆರೋಗ್ಯ ಮತ್ತು ಆಯುಷ್ಯವನ್ನು ಕಾಪಾಡುವುದು.

ಈ ಪಾವಿತ್ರ್ಯಕ-ಸಾಂಪ್ರದಾಯಿಕ ಮಾನವನ ಸ್ವಭಾವಗಳು ಸದ್ಭಾವನೆಗಳಾಗಿರುವುದು ನಿಜ. ಹರಿಯುವ ನೀರು, ನಿಂತ ನೀರು ಯಾವುದೇ ಇರಲಿ, ಸದ್ಭಾವನೆಗಳಿಗೆ-ಸತ್ಪಾತ್ರಕ್ಕೆ ಬಳಸಿದ ವಸ್ತುವನ್ನು ಕಸದ ತೊಟ್ಟಿಗೆ ಎಸೆಯಬಾರದು. ನೀರಿನಲ್ಲಿ ಹಾಕಿ ಪುನೀತರಾದೆವೆಂದು ತಿಳಿಯಬಾರದು. ಇಂಥ ಅಜ್ಞಾನದಿಂದ ಸಾರ್ವಜನಿಕವಾಗಿರುವ ಪರಿಸರವು ಮಲಿನವಾಗುವುದು. ಇರುವ ನೀರನ್ನು ಸ್ವಚ್ಛವಾಗಿಟ್ಟುಕೊಂಡು ಮಿತವಾಗಿ ಬಳಸುವ ಮನೋಭಾವನೆ ತುಂಬ ಅಗತ್ಯವಾಗಿದೆ. ಭಾವನಾತ್ಮಕ ಪಾವಿತ್ರ್ಯತೆಗೆ ಮನಸ್ಸು ನಿರ್ಮಲವಾಗಿರುವಂತೆ ಪರಿಸರವೂ ನಿರ್ಮಲವಾಗಿರಬೇಕು. ಪೂಜೆ-ಪುನಸ್ಕಾರ ನಿತ್ಯದ ಕ್ರಿಯೆ. ಇದರ ತ್ಯಾಜ್ಯವನ್ನು ಪ್ರತ್ಯೇಕವಾಗಿ ವಿಲೇವಾರಿ ಮಾಡುವ ವ್ಯವಸ್ಥೆಯನ್ನು ಮಾಡಿಕೊಳ್ಳುವುದು ಒಳ್ಳೆಯದು. ಅದನ್ನು ನೀರಿಗೆ ಹಾಕಬಾರದೆಂಬ ಪ್ರಜ್ಞೆ ಸರ್ವವಿದಿತವಾಗಬೇಕಾಗಿದೆ. ಮಾನಸ ಸರೋವರ ಮಲಿನವಾಗುತ್ತಿರುವುದೇ ಇಂತಹ ತ್ಯಾಜ್ಯಗಳಿಂದ.

ಮನುಷ್ಯನ ಮನಸ್ಸು-ಭಾವನೆಗಳು ನೀರಿನ ಮೇಲೆಯೇ ಅವಲಂಬಿಸಿವೆ. ಅಂತೆಯೇ ಮನಸ್ಸು ನೀರಿನೊಂದಿಗೆ ಸದಾ ಸ್ಪಂದಿಸುವುದು, ಚಲ್ಲಾಟವಾಡುವುದು. ನೀರು ಕಂಡಕೂಡಲೆ ಮನುಷ್ಯ ಉತ್ಸಾಹಿತನಾಗುವನು, ಉದ್ರೇಕಿತನಾಗುವನು, ಉದ್ದೀಪನಗೊಳ್ಳುವನು, ಕುತೂಹಲಗೊಳ್ಳುವನು. ಮನುಷ್ಯನ ನವರಂಧ್ರಗಳು ನವರಸ ಪ್ರೇರಿತಗೊಳ್ಳುವುದು ಮನುಷ್ಯನ ಸ್ವಭಾವವೂ ಹೌದು, ನೀರಿನ ಗುಣವೂ ಹೌದು. ಮನುಷ್ಯ ಮತ್ತು ನೀರಿನ ಸಂಬಂಧ ನಿರಂತರ ಪರಿಣಾಮಕಾರಿಯಾಗಿರುವುದು. ಅಂತೆಯೇ ನೀರು ಕಂಡರೆ ಮನಸ್ಸು ಅರಳುವುದು. ಮನಸ್ಸು ಕೆರಳುವುದು. ನೀರು ಕಂಡಕೂಡಲೆ ಒಬ್ಬನಿಗೆ ವಿಹರಿಸಬೇಕೆನಿಸುವುದು, ಒಬ್ಬನಿಗೆ ಪೂಜಿಸಬೇಕೆನಿಸುವುದು, ಇನ್ನೊಬ್ಬನಿಗೆ ನೀರಿನ ದಡದಲ್ಲಿ ಕೂತು ಲೋಕಕಲ್ಯಾಣದ ದೃಷ್ಟಿಯಲ್ಲಿ ಅಧ್ಯಯನ, ಚಿಂತನ ಮಾಡುತ್ತ ತಪೋಜೀವಿಯಾಗಬೇಕೆನಿಸುವುದು. ಜೀವನದಲ್ಲಿ ಜಿಗುಪ್ಸೆಗೊಂಡವನಿಗೆ ಜಿಗಿದು ಆತ್ಮಹತ್ಯೆ ಮಾಡಿಕೊಳ್ಳಬೇಕೆನಿಸುವುದು. ಮತ್ತೊಬ್ಬನಿಗೆ ಜೀವನ ಸಂತೃಪ್ತಿಯು ಆತ್ಮಾರ್ಪಣೆ ಮಾಡಿಕೊಳ್ಳಲು ನೀರಿಗಿಳಿಯುವಂತೆ ಪ್ರೇರೇಪಿಸುವುದು.

ತೃಪ್ತಿ-ಅತೃಪ್ತಿ ಎರಡಕ್ಕೂ ನೀರು ತುಂಬ ಪವಿತ್ರವೆಂಬ ಸದ್ಭಾವನೆ ಮನುಷ್ಯನದಾಗಿದೆ. ತುಂಬಿದ ನದಿ-ಕೊಳ್ಳ-ಕೆರೆಗಳಲ್ಲಿ ತುಪ್ಪದ, ಎಣ್ಣೆಯ ದೀಪಗಳನ್ನು ಹಚ್ಚಿಬಿಟ್ಟು ಬೆಳದಿಂಗಳ ರಾತ್ರಿಯ ಸೊಬಗನ್ನು ಸವಿಯಬೇಕೆನಿಸುವುದು. ಈ ದೀಪಧಾರೆ ತ್ಯಾಗ-ನಿಸ್ವಾರ್ಥದ ಸಾರ್ಥಕ್ಯವಾಗಿದೆ. ಈ ನೀರಿನ ಆಹ್ಲಾದತೆ ಅಗಾಧವಾಗಿದೆ. ಮತ್ತೊಬ್ಬನ ಜೀವನ ಈ ದೀಪದ ಹಾಗೆ ಸದಾ ಬೆಳಗಲಿ – ಎಲ್ಲಿಯೇ ಇರಲಿ, ಇರುವಲ್ಲಿ ಸುಖಿಯಾಗಿರಲಿ ಎನ್ನುವ ನಿರಪೇಕ್ಷ ಭಾವನೆಗಳಿಗೆ ಸಾಕಾರವಾಗಿದೆ.

ಹೀಗೆ ನೀರು ಭಾವನಾತ್ಮಕವಾಗಿ, ಆಧ್ಯಾತ್ಮಿಕವಾಗಿ, ವೈಜ್ಞಾನಿಕವಾಗಿ, ವೈಚಾರಿಕವಾಗಿ, ಸಾಮಾಜಿಕವಾಗಿ, ಜಾಗತಿಕ ರಾಜಕೀಯವಾಗಿ ಹಲವಾರು ದೃಷ್ಟಿಯಲ್ಲಿ ನಮ್ಮನ್ನು ಚಿಂತನೆಗೆ ತೊಡಗಿಸುವ ಗುಣ ಪಡೆದುಕೊಂಡಿದೆ. ಉಳುವ ಭೂಮಿಯಲ್ಲಿ ನೀರಿನ ಮಿತವ್ಯಯವೂ ಮುಖ್ಯವಾಗಿದೆ. ಈ ಭೂಮಿಯ ಮೇಲೆ ನೀರು ನಿರ್ದಿಷ್ಟವಾಗಿದೆ. ಅತಿವೃಷ್ಟಿ-ಅನಾವೃಷ್ಟಿ ಏನೇ ಆಗಲಿ ಕೆಲವು ಪ್ರದೇಶಗಳಲ್ಲಿ ನೀರಿನ ಕೊರತೆಯಾದರೂ ಕೆಲವು ಪ್ರದೇಶದಲ್ಲಿ ಪ್ರವಾಹವಾದೀತು. ಆದರೂ ನೀರಿನ ಅಸ್ತ-ವ್ಯಸ್ತ, ಸಮಗ್ರತೆಯ ದೃಷ್ಟಿಯಲ್ಲಿ ಸಮಸ್ತವಾಗಿದೆ. ನೀರಿನ ಬಗ್ಗೆ ಮನುಷ್ಯನಲ್ಲಿ ಪ್ರಮಾಣಪ್ರಜ್ಞೆ ಮತ್ತು ಪರಿಣಾಮಪ್ರಜ್ಞೆ ಜಾಗೃತಪ್ರಜ್ಞೆಯಾಗಬೇಕಾಗಿದೆ. ನೀರು ಕವಿಯ ಭಾವಸೃಷ್ಟಿಗೆ ಕಮನೀಯವಾಗಿದೆ. ನೀರು ಪ್ರಕೃತಿಯ ಅಂತರ್ಜಲ ಮಾತ್ರವಲ್ಲ ಸೃಜನಶೀಲತೆಯ ಅಂತರಾಳವೂ ಆಗಿದೆ. ಚೈತನ್ಯಶೀಲರಿಗೆ ಸ್ಥಾಯಿಯಾಗಿದೆ. ನೀರು ಜೀವ ಚೈತನ್ಯ. ಬೀಜಕ್ಕೆ ಗರ್ಭದಾನ. ನೀರಿನಲ್ಲಿ ವಿವಿಧ ಬಗೆಯೂ ಇದೆ.

ಭೂಮಿ ಒಂದೇ ಆದರೂ ಪ್ರಾದೇಶಿಕವಾಗಿ ಮಣ್ಣಿನ ವೈವಿಧ್ಯತೆಯನ್ನು ನೀರು ಅವಲಂಬಿಸಿದೆ. ನೀರಿನ ಗುಣಧರ್ಮಕ್ಕೆ ಪ್ರಾದೇಶಿಕತೆಯೂ ಕಾರಣವಾಗಿದೆ. ಹೀಗಾಗಿ ನೀರಿನ ರುಚಿಯಲ್ಲಿ ಬದಲಾವಣೆಯಿದೆ. ಆಯಾ ಪ್ರದೇಶದ ನೀರಿಗೆ ಆಯಾ ಪ್ರದೇಶದ ಜನರ ಪ್ರಕೃತಿ ಒಗ್ಗಿಕೊಂಡಿರುತ್ತದೆ. ಇದು ಭೌತಿಕವೂ ಹೌದು, ಮಾನಸಿಕವೂ ಹೌದು. ಬೇರೆ ಬೇರೆ ಕಡೆಗೆ ಮನುಷ್ಯ ತಿರುಗಾಡುವಾಗ ನೀರು ಬಾಧಿಸುವುದೂ ಸಹಜ. ಈ ವ್ಯತ್ಯಾಸ-ಪರಿಣಾಮ-ಪ್ರಮಾಣದ ಎಚ್ಚರಿಕೆ ಮನುಷ್ಯ ಮೊದಲೇ ಹೊಂದಿದ್ದರೆ ಈ ಬಾಧಕತೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿದೆ.

ಒಂದು ರೀತಿಯಲ್ಲಿ ಜೀವರಾಶಿ ಪರಾವಲಂಬಿಯೇನಲ್ಲ. ಆಕಾಶ, ವಾಯು, ತೇಜಸ್ಸು, ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳು ಹೇಗೆ ಸ್ವತಂತ್ರವಾಗಿವೆಯೊ ಹಾಗೆಯೇ ಜೀವರಾಶಿಯು ತನ್ನದೇ ಆದ ಅಸ್ತಿತ್ವವನ್ನು ಹೊಂದಿದೆ ಎನ್ನಬಹುದು. ಯಾಕೆಂದರೆ ಈ ಜೀವರಾಶಿ ಇರದಿದ್ದರೆ ಪಂಚಮಹಾಭೂತಗಳಿಗೆ ಬೆಲೆಯೇ ಇರುತ್ತಿರಲಿಲ್ಲ. ಆದ್ದರಿಂದ ಈ ಪಂಚಮಹಾಭೂತಗಳು ಜೀವರಾಶಿಯನ್ನು ಅವಲಂಬಿಸಿವೆಯೆಂದು ಯಾಕೆ ಭಾವಿಸಬಾರದು ? ಸಕಲ ಜೀವರಾಶಿ ಪಂಚಮಹಾಭೂತಗಳ ಸೃಷ್ಟಿಯೇ ಆಗಿದೆ. ಆದರೆ ಈ ಜೀವರಾಶಿಯೂ ಒಂದು ಮಹಾಭೂತವೇ ಆಗಿದೆಯೆನ್ನುವುದನ್ನು ವಿವೇಚಿಸಿ ಷಡ್‌ಮಹಾಭೂತಗಳೆಂದು ಪರಿಗಣಿಸಬಹುದಾಗಿದೆ. ಒಟ್ಟಿನಲ್ಲಿ ನೀರು ಮತ್ತು ಮನುಷ್ಯನ ಸಂಪರ್ಕ ವಿಚಿತ್ರವಾದುದು ಮಾತ್ರವಲ್ಲ ವಿಶಿಷ್ಟವಾದುದು. ಸಾಯುವವರ ಮತ್ತು ಸತ್ತವರ ಬಾಯಿಯಲ್ಲಿ ನೀರು ಬಿಡುವ ಸಂಪ್ರದಾಯ ಜನಜನಿತವಾಗಿದೆ. ಇದು ನೀರು ಮತ್ತು ವ್ಯಕ್ತಿಯ ಸಂಬಂಧದಲ್ಲಿ ಪರಸ್ಪರ ಕೃತಾರ್ಥತೆಯ ಅಂತಿಮ ನಮನವಾಗಿದೆ.

**ಅರ್ಜುನ ಕೋರಟಕರ**
'ಭಾವಜ್ಞ', ಜಮಖಂಡಿ, ಬಾಗಲಕೋಟೆ ಜಿಲ್ಲೆ











# ಕಾಷ್ಠಕಲೆಯ ಚಿದಾನಂದಪ್ಪ ಬಡಿಗೇರ

**ತ**ನ್ನ ಕಲ್ಪನೆಗಳಿಗೆ ಜೀವತುಂಬಿ ಕಸದಲ್ಲಿ ರಸ ತೆಗೆಯುವವನೇ ನಿಜವಾದ ಕಲಾವಿದ. ಅಂತಹ ಕೆಲವು ಕಲಾವಿದರಲ್ಲಿ ಬಾಗಲಕೋಟ ಜಿಲ್ಲೆ ಮುಧೋಳ ತಾಲ್ಲೂಕಿನ ಮಹಾಲಿಂಗಪುರದ ಶ್ರೀ ಚಿದಾನಂದ ಮಾರುತ್ತೇಪ್ಪ ಬಡಿಗೇರ ಒಬ್ಬರು.

೧೯೩೪ರಲ್ಲಿ ಜಮಖಂಡಿ ತಾಲ್ಲೂಕಿನ ತುಂಗಳದಲ್ಲಿ ಜನಿಸಿದ ಚಿದಾನಂದಪ್ಪ ಚಿಕ್ಕವರಿದ್ದಾಗಲೇ ಅಜ್ಜ ಸೋಮಪ್ಪ, ಮಾವಂದಿರಾದ ಕಾಳಪ್ಪ, ಭೀಮರಾಯಪ್ಪವರ ಪ್ರಭಾವದಿಂದ ಮರದ ಕೆತ್ತನೆ ಕೆಲಸ ಹಾಗೂ ಬಾಗಿಲುಗಳ ಮೇಲೆ ವಿವಿಧ ರೀತಿಯ ನಕ್ಷೆಗಳನ್ನು ತಯಾರಿಸುವಲ್ಲಿ ಆಸಕ್ತಿವಹಿಸಿ, ತೇರು ನಿರ್ಮಾಣದ ಕಾರ್ಯದಲ್ಲೂ ಸಹಭಾಗಿಗಳಾಗುವುದರೊಂದಿಗೆ ಅಚಲ ವಿಶ್ವಾಸ ಹಾಗೂ ಕಠಿಣ ಪರಿಶ್ರಮದ ಫಲವಾಗಿ ಇಂದು ಪ್ರಸಿದ್ಧ ಕಾಷ್ಠ ಕಲಾವಿದರಾಗಿದ್ದಾರೆ.

ಏಳನೇ ತರಗತಿವರೆಗೆ ಮಾತ್ರ ಕಲಿತಿರುವ ಇವರು ಕಟ್ಟಿಗೆಯಲ್ಲಿ ತಮ್ಮ ಸೂಕ್ಷ್ಮ ಕೆತ್ತನೆಯಿಂದ ಗ್ರಾಹಕರ ಅಭಿರುಚಿಗೆ ತಕ್ಕಂತೆ ವಿವಿಧ ರೀತಿಯ ಉತ್ತಮ ಚಿತ್ರಗಳನ್ನು ಬಿಡಿಸುವ ಮೂಲಕ ಬಾಗಿಲ ಪಡಕಗಳನ್ನು ಕಲಾತ್ಮಕವಾಗಿ ರೂಪಿಸುವಲ್ಲಿ ಯಶಸ್ವಿಯಾಗಿರುವ ಚಿದಾನಂದಪ್ಪ, ಕಂಪ್ಯೂಟರ್‌ನಲ್ಲಿ ಡಿಸೈನ್ ತಯಾರಿಸಿ ಕೊಟ್ಟರೆ ಅದನ್ನೇ ಕಟ್ಟಿಗೆಯಲ್ಲಿ ಅರಳಿಸುವ ಸಿದ್ಧಹಸ್ತರು.

ಚಿತ್ರ-ಲೇಖನ : **ಚಂದ್ರಶೇಖರ ಮೋರೆ**
ಲಕ್ಷ್ಮೀನಗರ, ಮಹಾಲಿಂಗಪುರ - ೫೮೭ ೩೧೨, ಮುಧೋಳ ತಾಲ್ಲೂಕು, ಬಾಗಲಕೋಟ ಜಿಲ್ಲೆ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

